ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫–೧೧

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

ಹನ್ನೆರಡನೆಯ ಸ್ಕಂಧ

ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೫

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ಜಗನ್ಮಾತೆಯಾದ ಶ್ರೀಮಹಾತ್ರಿಪುರಸುಂದರೀ, ಭುವನೇಶ್ವರೀ ದೇವಿಯ ಪೆಯಿಂದ ಈ ಶ್ರೀದೇವೀಭಾಗವತಮಹಾಪುರಾಣದ ಕನ್ನಡ ಅನುವಾದ ಲೇಖ ಪೂ, ಅದರ ಮುದ್ರಣಪ್ರಕಾಶನಕಾರ್ಯವೂ, ನೆರವೇರಿರುತ್ತವೆ. ನನ್ನ ತಿಳಿವಳಿಕೆಯು ಮಿತವಾಗಿರುವುದರಿಂದಲೂ, ಕಾಲವು ಸಾಲದಿರುವುದರಿಂದಲೂ, ಈ ನನ್ನ ಲೇಖನ ಲ್ಲಿ ಲೋಪಗಳಿರಬಹುದು. ಆದರೂ, ಮಕ್ಕಳ ತಪ್ಪುತೊದಲು ಮಾತುಗಳಿಂದಲೂ ರಿಯರು ಸಂತೋಷಪಡುವಂತೆ, ವಾಚಕರು ಮನ್ನಿಸಿ ಸಂತೋಷಪಡುತ್ತಾರೆಂದು ಬಿದ್ದೇನೆ. "ಏಕಾ ಕ್ರಿಯಾ ತ್ರ್ಯರ್ಥಕರೀ ಬಭೂವ" ಎಂಬಂತೆ ಈ ನನ್ನ ಸೇವೆ ಂದ ಮುಮ್ಮಡಿಯಾದ ಫಲವು ನನಗೆ ಉಂಟಾಗಿದೆ. ದೇವಿಯ ಆರಾಧನೆ ಯನ್ನೂ, ಪ್ರಭುಗಳ ಅಪ್ಪಣೆಯನ್ನೂ, ಸಜ್ಜನಸೇವೆಯನ್ನೂ ಈ ಒಂದು ಕಾರ್ಯ ದ ನೆರವೇರಿಸುವಂತಾದುದು ನನ್ನ ಪೂರ್ವಪುಣ್ಯದ ಫಲವಾಗಿದೆ. ಇಂತಹ ತ್ತಮವಾದ ಸೇವಾವಕಾಶವನ್ನು ಕಲ್ಪಿಸಿಕೊಟ್ಟಿರುವ ಪ್ರಭುಗಳಲ್ಲಿ ನನ್ನ ಕೃತಜ್ಞತಾ ರ್ವಕವಾದ ಧನ್ಯತೆಯನ್ನು ಸಮರ್ಪಿಸುವುದು ನನ್ನ ಮುಖ್ಯ ಕರ್ತವ್ಯಧರ್ಮ ಗಿದೆ. ಆ ಮಹಾನುಭಾವರು ಅಪ್ಪಣೆಮಾಡಿರುವ ಇತರ ಕಾರ್ಯಗಳೂ ಹೀಗೆಯೇ ರವೇರಲೆಂದು ಸರ್ವಶಕ್ತಿಸ್ವರೂಪಳಾದ ದೇವಿಯನ್ನು ಪ್ರಾರ್ಥಿಸುತ್ತಿದೇನೆ.

ಈ ದೇವೀಭಾಗವತ ಮಹಾಪುರಾಣವೂ ಮಹಾಪುರಾಣಗಳ ಸಾಲಿನಲ್ಲಿ ಗ್ರಗಣ್ಯವಾದ ಸ್ಥಾನವನ್ನು ಪಡೆಯಲು ಅರ್ಹವಾಗಿದೆ. ಎಂಬ ಅಂಶವನ್ನು ಹಿಂದಿನ ಸಂಪುಟಗಳ ಮುನ್ನುಡಿಗಳಲ್ಲೂ, ಟಿಪ್ಪಣಿಗಳಲ್ಲೂ, ವಿವರಿಸಿರುತ್ತೇನೆ. ಇದರಲ್ಲಿರುವ ಕಥೆಗಳಿಂದ ಓದುಗರಿಗೆ ವಿನೋದವನ್ನೂ, ಅವುಗಳಲ್ಲಿ ವರ್ಣಿಸಿರುವ ಪಾತ್ರಗಳ ನಡೆವಳಿಕೆಗ್ರು ವಿಮರ್ಶೆ, ನೀತಿ, ಧರ್ಮಗಳಿಂದ ವಾಚಕರ ಜೀವನಕ್ರಮದಲ್ಲಿ ನೋಲ್ಮೆಯನ್ನೂ, ಅವುಗಳಿಂದ ಸೂಚಿತವಾಗಿರುವ ವೇದಾಂತತತ್ವಗಳ ಅರಿವಿನಿಂದ ಶ್ರೇಯಸದ ಪ್ರಾಪ್ತಿಯನ್ನೂ, ಜನರ ರುಚಿ, ಸಂಸ್ಕೃತಿ, ಅಧಿಕಾರಗಳಿಗೆ ತಕ್ಕಂತೆ ಪ್ರಾಶಸ್ತ್ಯವಾಗಿ ದೊರೆಯುವಂತೆ ಮಾಡುತ್ತಿರುವ ಈ ಪುರಾಣವೂ ಒಬ್ಬ ನಿಜವಾದ ನಂತಿದೆ. ಇದೂ, ಇತರ ಪುರಾಣಗಳಂತೆ, ಜನರನ್ನು, ಓದುವ, ಓದಿಸುವ, ಜನರನ್ನು, ಇರುತ್ತ ಕಾಮಗಳ ಸಂಪಾದನೆಯಲ್ಲೇ ಲೀನರಾಗಿರುವಿಕೆಯಿಂದ

4210 - 16

ತಿರುಗಿಸಿ, ಧರ್ಮಾಚರಣೆಯಲ್ಲಿ ಆಸಕ್ತರಾಗುವಂತೆ ಮಾಡುತ್ತದೆ. ಆ ಕ್ರಮವಾಗಿ ಚಿತ್ತಶುದ್ಧಿ, ವೈರಾಗ್ಯ, ವಿವೇಕ, ವೇದಾಂತವಿಚಾರ ಉಪಾಸನೆ ಜ್ಞಾನವುಂಟಾಗಲು, ಸ್ಥಿರವಾಗಿ ಮೋಕ್ಷವನ್ನು ಪಡೆಯುವಂತಾಗುತ್ತದೆ. ಕ್ಕೆಲ್ಲಕ್ಕೂ ಮೂಲಭೂತವಾದ ಭಾವವು ಆಸ್ತಿಕತೆಯಾಗಿದೆ.

ಆಸ್ತಿಕತೆ ಎಂದರೆ ದೇವರು ಇದಾನೆಂದು ನಂಬುವುದು ಮಾತ್ರವಲ್ಲವು. ನೆಂದರೆ, ದೇವರು ನಿತ್ಯನು. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ನೆರವೇರಿಸು ಜೀವರೂ ನಿತ್ಯರು. ಅವರು ಮಾಡುವ ಒಳ್ಳೆಯ ಮತ್ತು ಕೆಟ್ಟಕರ್ಮಗಳಿಂದ ಪ ಪಗಳುಂಟಾಗಿ ಸ್ವರ್ಗನರಕಗಳಲ್ಲಿ ಸುಖದುಃಖಾನುಭವದ ಫಲವು ಆಗಿಯೇ ಆ (ಇಷ್ಟು ಅಂಶಗಳನ್ನು ಪ್ರಪಂಚದಲ್ಲಿರುವ ಎಲ್ಲ ದೊಡ್ಡ ಮತಗಳೂ ಎಂದರೆ ಬೌದ್ಧ, ಕ್ರಿಶ್ಚಿಯನ್, ಮುಸಲ್ಮಾನ್, ಮತಗಳುಒಪ್ಪುತ್ತವೆ. ಆದರೆ ಇ ಕಡೆಯ ಎರಡು ಮತಗಳು ಏಕಜನ್ಮವಾದಿಗಳಾಗಿರುವುದರಿಂದ ಜೀವರಿಗೆ ಕೃ ಅಕೃತಾಭ್ಯಾಗಮದೋಷಗಳೂ, ದೇವರಿಗೆ ವೈಷಮ್ಯ, ನೈರ್ಘೃಣ್ಯದೋಷಗಳೂ ವಂತಿಲ್ಲವು.) ನಮ್ಮ ಸುಖದುಃಖಗಳಿಗೆ ನಮ್ಮ ಕರ್ಮಗಳೇ ಕಾರಣಗಳು. ನಮ್ಮ ಕರ್ಮಗಳ ಫಲಗಳನ್ನು ನಾವು ಅನುಭವಿಸಬೇಕಾದುದು ತಪ್ಪುವುದಿಲ್ಲ ಇಲ್ಲಿಂದ ಮುಂದಿನ ಕರ್ಮಗಳನ್ನು ನಾವು ಆರಿಸಿಕೊಂಡು ಮಾಡಲು ಜೀವರಿಗೆ, ಸ್ವಾತಂತ್ರ್ಯವಿದೆ. ಈ ಅನೇಕ ಜೀವರ ನಾನಾಬಗೆಯ ಕರ್ಮ ಘರ್ಷಣೆಯಾಗದಂತೆಯೂ, ಅವುಗಳು ಫಲ ಕೊಡುವುದರಲ್ಲಿ ಗೊಂದ ದಂತೆಯೂ, ವ್ಯವಸ್ಥೆಮಾಡುತ್ತಿರುವವನೇ ದೇವರು ನಮ್ಮ ಸತ್ಕರ್ಮಗಳಿಗೇ ವೆಂದೂ, ದುಷ್ಕರ್ಮಗಳಿಗೆ ಅಧರ್ಮವೆಂದೂ ಹೆಸರು. ದೇವರು ಜೀವರ ಕರ ಸಾರವಾಗಿ ಈ ಜಗದ್ವ್ಯವಹಾರವನ್ನು ಕ್ಲೃಪ್ತಗೊಳಿಸುತ್ತಿರುವುದರಿಂದ, ಅವನ ಅನುಕೂಲವಾಗಿ ನಡೆಯುವುದೇ ಧರ್ಮವು. ಅವನ ಇಚ್ಛೆಗೆ ವಿರುದ್ಧವಾಗಿ ನ ಹೋಗುವುದೇ ಅಧರ್ಮವು. ಆದುದರಿಂದ ಧರ್ಮವೇ ಈ ಪ್ರಪಂಚಕ್ಕೆ ಆ ಧಾರವಾಗಿದೆ. ನಾವು ಧರ್ಮವನ್ನೇ ಆಚರಿಸಬೇಕು. ಅಧರ್ಮವನ್ನು ಆ ಬಾರದು. ದೇವರು ಧರ್ಮ, ಕರ್ಮಗಳ ಸ್ವರೂಪವನ್ನೂ ಹೌದು. ಎಂಬ ತಿಳಿವಳಿಕೆ ಅದಕ್ಕನುಸಾರವಾದ ನಡೆವಳಿಕೆಯೂ ಆಸ್ತಿಕತೆ ಎನಿಸುತ್ತದೆ.

ದೇವರನ್ನು ಸಗುಣ ಸಾಕಾರನೆಂದು ಹಿಂದುಗಳು, ಸಗುಣನ ನೆಂದು ಕ್ರಿಶ್ಚಿಯನ್ನರೂ, ಮುಸಲ್ಮಾನರೂ, ನಿರ್ಗುಣ [illegible] ನೆಂದು

ನಂಬಿ ಆರಾಧಿಸುತ್ತಿದಾರೆ. ದೇವರಲ್ಲಿರುವ ಈ ವ್ಯವಸ್ಥಾಪಕಸಾಮರ್ಥ್ಯಕ್ಕೇ ಶಕ್ತಿ, ದೇವೀ, ಮಾಯಾ ಎಂದು ಮುಂತಾದ ಹೆಸರುಗಳಿವೆ. ದೇವರನ್ನು ಶಿವ, ವಿಷ್ಣು ನಾರಾಯಣ, ಕೃಷ್ಣ, ಮುಂತಾದ ಪುರುಷರೂಪದಲ್ಲೂ, ವಾಣೀ, ಲಕ್ಷ್ಮೀ, ಉಮಾ, ದೇವೀ ಮುಂತಾದ ಸ್ತ್ರೀರೂಪದಲ್ಲೂ, ಹರಿಹರ, ಅರ್ಧನಾರೀಶ್ವರ ಮುಂತಾದ ಸಂಯುಕ್ತರೂಪದಲ್ಲೂ ಧ್ಯಾನಿಸಬಹುದು. ವಾಸ್ತವವಾಗಿ ದೇವರು ಈ ನಾಮ, ರೂಪ, ಲಿಂಗಗಳಿಗೆ ಮೀರಿರುವ, ಸಚ್ಚಿದಾನಂದಾನಂತಾದ್ವಯವಾದ ಪರಬ್ರಹ್ಮತತ್ತ್ವ ವೆಂಬುದನ್ನು ಮರೆಯಬಾರದು. ವಿವೇಕಿಗಳಾದ ಆಸ್ತಿಕಜನರು ಸಕಾಮಕರ್ಮಾ ಚರಣೆಯಿಂದ ಐಹಿಕವಾದ ಸುಖ ಅಭ್ಯುದಯಗಳನ್ನೂ, ಆಮುಷ್ಮಿಕಗಳಾದ ಸದ್ಗತಿ ಗಳನ್ನೂ, ಪಡೆಯುತ್ತಿರುತ್ತಾರೆ. ಈ ಧರ್ಮಕರ್ಮಾಚರಣೆ ಸುಖಾನುಭವಗಳು ಅವಿಶುದ್ಧಿ, ಅತಿಶಯ, ಕ್ಷಯಗಳೆಂಬ ದೋಷಗಳಿಂದ ಕೂಡಿವೆ ಎಂದು ಮನಗಂಡು, ಈ ಸುತ್ತಿನಲ್ಲಿ ಬಳಸುವುದರಲ್ಲಿ ಬೇಸರಪಟ್ಟು, ಅವರು ವೇದಾಂತವಿಚಾರಮಾಡಿ, ನಿಷ್ಕಾಮಕರ್ಮಾಚರಣೆಯಲ್ಲಿ ಆಸಕ್ತರಾಗುತ್ತಾರೆ. ಅದರಿಂದ ಚಿತ್ತಶುದ್ಧಿಯಾಗಿ ಜ್ಞಾನ ಪ್ರಾಪ್ತಿಯಾಗಲು, ಮೋಕ್ಷವು ಎಂದರೆ, ಈ ಕರ್ತೃತ್ವ, ಭೋಕ್ತೃತ್ವ, ಜನನ, ಮರಣ ಗಳಲ್ಲಿ ಸಿಕ್ಕಿಕೊಂಡಿರುವಿಕೆ ಎಂಬ ನಿರ್ಬಂಧ ದುಃಖದಿಂದ ಬಿಡುಗಡೆಯು, ಲಭಿಸಿ ಜೀವನು ಎಂದಿನಂತೆ ನಿತ್ಯಶುದ್ಧ ಬುದ್ಧ ಮುಕ್ತಾನಂದರೂಪನಾಗಿ ಉಳಿಯುತ್ತಾನೆ. ಇದಕ್ಕೆ ನಿಶ್ರೇಯಸವೆಂದು ಹೆಸರು. ಈ ನಿಶ್ರೇಯಸದ ಸಾಧನೆಯ ಮಾರ್ಗವನ್ನು ಈ ದೇವೀಭಾಗವತವು ಉದಾಹರಣೆಗಳೊಡನೆ ತಿಳಿಯಹೇಳುತ್ತಿದೆ.

ದೇವರಿಗೆ ಅಥವಾ ಬ್ರಹ್ಮತತ್ತ್ವಕ್ಕೆ ಈ ಜಗತ್ತಿನ ಸೃಷ್ಟ್ಯಾದಿ ವ್ಯವಹಾರಕಾಲದಲ್ಲಿ ಸಗುಣಸಾಕಾರರೂಪವಿರುತ್ತದೆ. ಈ ವ್ಯವಹಾರವನ್ನು ನೆರವೇರಿಸುವ ಸಾಮರ್ಥ್ಯಕ್ಕೇ ಶಕ್ತಿ, ದೇವೀ, ಮಾಯಾ, ಎಂದು ಮುಂತಾದ ಹೆಸರುಗಳಿವೆ. ಈ ಮಾಯೆ ಎಂಬ ಉಪಾಧಿಯಿಂದ ಕೂಡಿದ ಬ್ರಹ್ಮತತ್ತ್ವಕ್ಕೆ ದೇವೀ, ತ್ರಿಪುರಸುಂದರೀ, ಭುವನೇಶ್ವರೀ, ಎಂದೂ ಹೆಸರುಗಳಿವೆ. ಈಗ ಮಾಯೆಯು ಬಹಿರ್ಮುಖವಾಗಿ ತನ್ನ ಮೂರು ಗುಣಗಳಲ್ಲಿ ಒಂದೊಂದರ ಪ್ರಾಧಾನ್ಯದಿಂದ ಬ್ರಹ್ಮಾ ವಿಷ್ಣು ರುದ್ರರೆಂಬ ತ್ರಿಮೂರ್ತಿ ಗಳನ್ನುಂಟುಮಾಡಿ ಅವರಿಗೆ ಸಹಾಯವಾಗಿ ವಾಣೀ, ಲಕ್ಷ್ಮೀ, ಉಮಾದೇವಿಯರೆಂಬ ಶಕ್ತಿಗಳನ್ನು ಕೊಟ್ಟು, ಪ್ರಪಂಚವ್ಯವಹಾರವನ್ನು ಸಾಗಿಸುತ್ತಿರುವಂತೆ ಮಾಡುತ್ತದೆ. ಆ ಬ್ರಹ್ಮತತ್ತ್ವದ ವಾಸ್ತವಸ್ವರೂಪದಲ್ಲಿ ಮಾಯೆಯು ಅಂತರ್ಮುಖವಾಗಿ ಲೀನವಾಗಿ ನಿರ್ಗುಣ ನಿರಾಕಾರ, ನಿರ್ವಿಕಾರ, ನಿತ್ಯ, ಶುದ್ಧ, ಬುದ್ಧ, ಮುಕ್ತ, ಪರಬ್ರಹ್ಮ ತತ್ತ್ವದ ಸ್ವರೂಪದಲ್ಲಿರುತ್ತದೆ. ಈ ಸೃಷ್ಟ್ಯಾದಿ ವ್ಯವಹಾರವು ತೋರಿಕೆಯ ಸ್ವಭಾವ

ವುಳ್ಳುದಾಗಿರುವುದರಿಂದ ಭೇದಕವಾದ ಉಪಾಧಿಯೂ ಅದರ ಪರಿಣಾಮಗಳೂ ಅವಾಸ್ತವವಾಗಿರುತ್ತವೆ. ಹೀಗೆ ಭೇದವು ನಿಜವಾಗಿ ಸಿದ್ಧವಾಗದೆ ಅದ್ವೈತಸಿದ್ಧಾಂತವು ಅಚ್ಚಳಿಯದೆ ಉಳಿಯುವಂತಾಗಿರುತ್ತದೆ.

ಇಂತಹ ತತ್ತ್ವದ ಸಾಕ್ಷಾತ್ಕಾರಕ್ಕೆ ಈ ಮಹಾಪುರಾಣದಲ್ಲಿ ಎರಡು ಮಾರ್ಗಗಳನ್ನು ಬೋಧಿಸಿದೆ. ಒಂದು ಉಪಾಸನೆಯು, ಎರಡನೆಯದು ವೇದಾಂತವಿಚಾರವು. ಸಗುಣಸಾಕಾರಮೂರ್ತಿಯ ಉಪಾಸನೆಯಿಂದ ಆ ಮೂರ್ತಿಯ ಸಾಕ್ಷಾತ್ಕಾರವಾಗಿ ಆ ಉಪಾಸ್ಯದೇವತೆಯ ಲೋಕವನ್ನು ಪಡೆದು, ಆ ದೇವನ ಅಥವಾ ದೇವಿಯ ಸಾನ್ನಿಧ್ಯದಲ್ಲಿ ಜೀವರು ತಮ್ಮ ತಮ್ಮ ಯೋಗ್ಯತೆ ಅಧಿಕಾರಗಳಿಗೆ ತಕ್ಕಂತೆ ಸ್ವಸುಖಾನುಭವ ಮಾಡುವರೆಂಬುದು ದ್ವೈತ, ಮಾಧ್ವಸಿದ್ಧಾಂತವಾಗಿದೆ. ಇನ್ನೂ ಸ್ವಲ್ಪ ಮುಂದೆ ಹೋಗಿ ಉಪಾಸ್ಯದೇವತಾ ಸಾರೂಪ್ಯವನ್ನೂ ಪಡೆದು ಆನಂದಾನುಭವವನ್ನು ಉಪಾಸಕರು ಎಲ್ಲರೂ ಒಂದೇ ಸಮವಾಗಿ ಪಡೆಯುವರು. ಎಂಬುದು ರಾಮಾನುಜ ವಿಶಿಷ್ಟಾದ್ವೈತಸಿದ್ಧಾಂತವಾಗಿದೆ. ಈ ಉಪಾಸನೆಗೆ ಚಿತ್ತಶುದ್ಧಿಯೂ ಏಕಾಗ್ರತೆಯೂ ಬೇಕು. ಅದು ಧರ್ಮಾಚರಣೆಯಿಂದ, ನಿಷ್ಕಾಮಕರ್ಮಾಚರಣೆಯಿಂದ ದೊರೆಯುತ್ತದೆ. ದೇವಿಯು ತ್ರಿಮೂರ್ತಿಗಳಿಗೂ ಅವರ ಸಹಧರ್ಮಿಣಿಯರಿಗೂ ಮೂಲಕಾರಣಳಾಗಿರುತ್ತಾ ಮೇಲಿನ ತತ್ತ್ವಸ್ವರೂಪಳಾಗಿದ್ದಾಳೆ. ಈ ದೇವಿಯ ಮಹಿಮೆಯನ್ನು ಮೊದಲನೆಯ ಮತ್ತು ಎರಡನೆಯ ಸ್ಕಂಧಗಳಲ್ಲಿ ವರ್ಣಿಸಿ, ಮೂರನೆಯ ಸ್ಕಂಧದಲ್ಲಿ ದೇವಿಯ ಮಹಾತ್ರಿಪುರಸುಂದರೀ ತತ್ತ್ವದ ವಾಸಸ್ಥಾನವಾದ ಮಣಿದ್ವೀಪದಲ್ಲಿ ಮಹಾತ್ರಿಪುರಸುಂದರೀದೇವಿಯ ವೈಭವವನ್ನೂ ವರ್ಣಿಸಿದೆ. ನಾಲ್ಕನೆಯ ಮತ್ತು ಐದನೆಯ ಸ್ಕಂಧಗಳಲ್ಲಿ ದೇವಿಯು ಧರ್ಮಸ್ಥಾಪನೆಗಾಗಿ ಎಂದರೆ ದುಷ್ಟನಿಗ್ರಹ, ಶಿಷ್ಟರಕ್ಷಣೆಗಳಿಂದ ಧರ್ಮಾಚರಣೆಯನ್ನು ಪುನರುಜ್ಜೀವನಗೊಳಿಸುವುದಕ್ಕಾಗಿ, ಅವತಾರಗಳನ್ನು ಸ್ವೀಕರಿಸಿ, ಮಧುಕೈಟಭರು, ಮಹಿಷಾಸುರ, ರಕ್ತಬೀಜಾಸುರ, ಚಂಡಮುಂಡಾಸುರರು, ಶುಂಭನಿಶುಂಭಾಸುರರು ಇವರೇ ಮುಂತಾದ ಧರ್ಮದ್ವೇಷಿಗಳನ್ನೂ ಸಂಹರಿಸಿ, ಧರ್ಮಾಚರಣೆಗೆ ಬಾಧಕರಿಲ್ಲದಂತೆ ಮಾಡಿ, ದೇವತೆಗಳೂ, ಮಾನವರೂ, ಪರಸ್ಪರವಾಗಿ ಸಹಕರಿಸಿ ಶ್ರೇಯಸ್ಸನ್ನು ಪಡೆಯಲು ಸಹಾಯಮಾಡಿದ ಕಥೆಗಳನ್ನು ವಿವರಿಸಲಾಗಿದೆ. ಈ ಕಥೆಗಳಲ್ಲಿ ಸಾಂಕೇತಿಕವಾದ ಭಾವವೂ ಅಡಗಿರುತ್ತದೆ. ಆರನೆಯ ಮತ್ತು ಏಳನೆಯ ಸ್ಕಂಧಗಳಲ್ಲಿ ದೇವಿಯ ಬಾಹ್ಯ ಮತ್ತು ಆಂತರವಾದ ಆರಾಧನೆಯ ಕ್ರಮವನ್ನು ಮತ್ತು ವೇದಾಂತದರ್ಶನಗಳ ತತ್ತ್ವಕ್ಕೂ ಈ ಪುರಾಣದಲ್ಲಿಯೂ ಉಪದೇಶಿಸಿರುವ ಅದ್ವೈತತತ್ತ್ವಕ್ಕೂ ಸಾಮಂಜಸ್ಯವನ್ನು ದೇವೀಗೀತೆಯಲ್ಲೂ ವಿವರಿಸಲಾಗಿದೆ.

ಎಂಟನೆಯ ಸ್ಕಂಧದಲ್ಲಿ ಲೋಕಗಳನ್ನು ವರ್ಣಿಸಿದೆ. ಒಂಬತ್ತನೆಯ ಸ್ಕಂಧದಲ್ಲಿ ವಿಷ್ಣುವಿನ ಮಹಿಮೆಯನ್ನೂ, ಗೋಲೋಕದಲ್ಲಿ ರಾಧಾಕೃಷ್ಣರ ವೈಭವವನ್ನೂ ವರ್ಣಿಸಿ. ಶಿವ, ವಿಷ್ಣು, ನಾರಾಯಣ, ಕೃಷ್ಣ, ಮುಂತಾದವರೆಲ್ಲರೂ ಒಂದೇ ಚೇತನ ತತ್ವದ ರೂಪಾಂತರಗಳೆಂದೂ, ಭೇದವನ್ನೂ, ಮೇಲುಕೀಳೆಂಬ ಭಾವವನ್ನೂ, ಭಕ್ತರು ಪಡೆಯಬಾರದೆಂದೂ, ಉಪಾಸ್ಯತತ್ವಸಾಕ್ಷಾತ್ಕಾರವಾದಾಗ, ತನ್ಮಯತೆಯು, ತಲ್ಲೀನತೆಯು, ಅಪರೋಕ್ಷಾನುಭವವಾದಾಗ ಭೇದವು ನಿಲ್ಲದೆಂದೂ, ಹಾಗೆ ಭೇದ ಭಾವನೆಯನ್ನು ಮಾಡಿದರೆ ಕೆಡುಕಾಗುವುದೆಂದೂ ಹೇಳಿದೆ. ಹೀಗೆ ಎಲ್ಲ ಪುರಾಣಗಳನ್ನೂ ಸಮವಾದ ಆದರದಿಂದ ಓದಿ, ಮನೋವೈಶಾಲ್ಯವನ್ನು ಪಡೆಯಬೇಕೆಂದೂ, ಎಲ್ಲ ದೇವತೆಗಳನ್ನೂ ಸಮವಾದ ಭಕ್ತಿಯಿಂದ ಆರಾಧಿಸುವ, ಹೃದಯದ ವಿಸ್ತಾರವನ್ನು ಪಡೆಯಬೇಕೆಂದೂ, ವರ್ಣಿಸಿರುವುದು ಈ ಮಹಾಪುರಾಣದಲ್ಲಿರುವ ವಿಶೇಷ ಗುಣವಾಗಿದೆ. ಅನಂತರದಲ್ಲಿ ಒಂಬತ್ತನೆಯ ಸ್ಕಂಧದಲ್ಲಿ ದೇವಿಯ ಅಂಶವಿಶೇಷ ರೂಪರಾದ, ಗಣೇಶಜನನೀ, ದುರ್ಗಾ, ರಾಧಾ, ಲಕ್ಷ್ಮೀ, ಸರಸ್ವತೀ, ಸಾವಿತ್ರೀ, ತುಲಸೀ, ಗಂಗಾ, ಸ್ವಾಹಾ, ಸ್ವಧಾ, ದಕ್ಷಿಣಾ, ಷಷ್ಠೀ, ಮಂಗಳಚಂಡೀ, ಮನಸಾ, ಸುರಭಿ, ದೇವಿಯರ ಕಥೆ, ಮಹಿಮೆಗಳನ್ನೂ ವರ್ಣಿಸಿ, ವ್ಯಕ್ತಿಭೇದವಿದ್ದರೂ ತತ್ವ ಭೇದವಿಲ್ಲವೆಂದೂ, ಪುರಾಣಗಳು ಅನೇಕವಿದ್ದರೂ ಅವು ಉಪದೇಶಿಸಿರುವ ಧರ್ಮ, ನೀತಿ, ತತ್ವ ಇವುಗಳಲ್ಲಿ ಐಕಮತ್ಯವೂ, ಸಾಮಂಜಸ್ಯವೂ ಇದೆ ಎಂದೂ ನಿರೂಪಿಸಿದೆ. ಆಮೇಲೆ ಹತ್ತು, ಹನ್ನೊಂದನೆಯ ಸ್ಕಂಧಗಳಲ್ಲಿ ಮನ್ವಂತರಗಳನ್ನೂ, ಮನುಗಳು ತಮ್ಮ ಪದವಿಯನ್ನು ಪಡೆಯಲು ಆಚರಿಸಿದ ಧರ್ಮವನ್ನೂ, ತಿಳಿಸಿ, ಎಲ್ಲರ ಅಭ್ಯುದಯ ಶ್ರೇಯಸ್ಸುಗಳಿಗೆ ಎಲ್ಲಕ್ಕೂ ಕಾರಣವಾದ ಸದಾಚಾರವನ್ನೂ, ಎಂದರೆ ದಿನಗಟ್ಟಲೆಯಲ್ಲಿ ಎಲ್ಲರೂ ಆಚರಿಸಬೇಕಾದ ಧರ್ಮವನ್ನು ವಿವರಿಸಿದೆ. ಶೌಚ, ಸ್ನಾನ, ರುದ್ರಾಕ್ಷ ಧಾರಣ, ಭಸ್ಮಧಾರಣ, ಪುಂಡ್ರಧಾರಣ ಅವುಗಳ ಮಹಿಮೆಯನ್ನೂ ವಿವರವಾಗಿ ಬೋಧಿಸಿದೆ. ಅನಂತರದಲ್ಲಿ ಎಲ್ಲಕ್ಕಿಂತಲೂ ಮುಖ್ಯವಾದ, ಎಲ್ಲ ಸಿದ್ಧಿಗಳಿಗೂ ಮೂಲ ಕಾರಣವಾದ, ಸಂಧ್ಯಾವಿಧಿ, ಗಾಯತ್ರೀಜಪದ ಕ್ರಮಗಳನ್ನೂ, ಗಾಯತ್ರಿಯೇ ದೇವಿಯು, ಎಂಬ ಅಂಶವನ್ನೂ ತಿಳಿಸಿವೆ. ಬ್ರಹ್ಮಯಜ್ಞ, ವೈಶ್ವದೇವ, ಮುಂತಾದ ಪಂಚಮಹಾಯಜ್ಞಗಳನ್ನೂ ವಿವರಿಸಿದೆ. ತರುವಾಯ ಈ ಹನ್ನೆರಡನೆಯ ಸ್ಕಂಧದಲ್ಲಿ ಗಾಯತ್ರೀ ಕವಚ, ಹೃದಯ, ಮಂತ್ರಜಪ, ಉಪದೇಶಕ್ಕೆ ಬೇಕಾದ ದೀಕ್ಷಾದಾನ, ಗ್ರಹಣಗಳ ನಿಯಮಗಳನ್ನೂ, ವೀಕ್ಷಣ ಶಾಂತಿಕರ್ಮವನ್ನೂ, ಗಾಯತ್ರೀ ಸಹಸ್ರನಾಮ ಜಪ, ಸಿದ್ಧಿ, ಮಹಿಮೆಗಳನ್ನೂ ವರ್ಣಿಸಿದೆ. ಇಂತಹ ಗಾಯತ್ರೀ

ಜಪದಲ್ಲೂ, ದೇವಿಯ ಆರಾಧನೆಯಲ್ಲೂ, ಎಲ್ಲ ಜನರೂ ಏಕೆ ಆದರವಿಲ್ಲದೆ ಇತರ ಧರ್ಮಗಳನ್ನು ಅವಲಂಬಿಸಿರುತ್ತಾರೆ? ಎಂದು ಪ್ರಶ್ನಿಸಿ, ಅಹಂಕಾರ, ಅಜ್ಞಾನ, ಜನ್ಮಾಂತರೀಯ ಸಂಸ್ಕಾರಗಳು ಅವಕ್ಕೆ ಕಾರಣವೆಂಬುದನ್ನು ವಿವರಿಸುತ್ತಾ, ದೇವಪ್ರಮುಖರಿಗೂ ಹೇಗೆ ಅಹಂಕಾರದಿಂದ ಅಜ್ಞಾನವುಂಟಾಗಿ ಅವಮಾನಪಟ್ಟು, ಕಡೆಗೆ ದೇವಿಯ ಆರಾಧನೆಯಿಂದ ಶ್ರೇಯಸ್ಸನ್ನು ಪಡೆದರೆಂಬುದನ್ನೂ, ಕೇನೋಪನಿಷತ್ತಿನ ರೀತಿಯಲ್ಲಿ, ವರ್ಣಿಸಿದೆ. ವೇದಾಂತದರ್ಶನದ ದೃಷ್ಟಿಯಿಂದ ದೇವಿಯ ತತ್ತ್ವದ ಸ್ವರೂಪವನ್ನೂ ದೇವಿಯ ಸಗುಣ ನಿರ್ಗುಣಭಾಗಗಳನ್ನೂ, ಸಗುಣರೂಪವು ಅವಾಸ್ತವವೆಂದೂ, ನಿರ್ಗುಣರೂಪವು ವಾಸ್ತವವೆಂದೂ ಅದ್ವೈತಸಿದ್ಧಾಂತವನ್ನು ತಿಳಿಸಿದೆ. ಗೌತಮರ ಶಾಪದಿಂದ ಬ್ರಾಹ್ಮಣರೂ ಗಾಯತ್ರೀಉಪಾಸನೆ, ದೇವೀ ಆರಾಧನೆಗಳಲ್ಲಿ ವಿಮುಖರಾಗಿದ್ದು ಇತರ ಧರ್ಮಗಳನ್ನು ಅವಲಂಬಿಸಿರುವುದರ ಕಾರಣವನ್ನೂ ತಿಳಿಸಿರುತ್ತದೆ. ಕಡೆಯದಾಗಿ ಭುವನೇಶ್ವರೀದೇವಿಯ ಆವಾಸಸ್ಥಾನವಾದ ಚಿಂತಾಮಣಿಗೃಹವೆಂಬ ಮಣಿದ್ವೀಪವನ್ನೂ ವಿವರವಾಗಿ ವರ್ಣಿಸಿದೆ. ಇದು ಸರ್ವಲೋಕದಲ್ಲಿದೆ. ಮೂರನೆಯ ಸ್ಕಂಧದಲ್ಲಿ ವರ್ಣಿಸಿರುವುದು ಮಹಾತ್ರಿಪುರಸುಂದರಿಯ ವಾಸಸ್ಥಾನವೆಂದೂ, ಇದು ಶ್ರೀಭುವನೇಶ್ವರಿಯ ವಾಸಸ್ಥಾನವೆಂದೂ ತಿಳಿಯಬೇಕೆಂದು ತಿಲಕವೆಂಬ ವ್ಯಾಖ್ಯಾನಕಾರರಾದ ನೀಲಕಂಠಮಹಾಶಯರು ವಿವರಿಸಿರುತ್ತಾರೆ. ಈ ಎರಡು ದಿವ್ಯಸ್ಥಾನಗಳ ಸ್ವರೂಪವನ್ನೂ ಶ್ರೀಚಕ್ರದಲ್ಲಿ ಸಂಗ್ರಹಿಸಿ ಚಿತ್ರಿಸಿ, ಬೀಜವರ್ಣಗಳನ್ನು ಬರೆದು, ಅವನ್ನು ಶಕ್ತಿದೇವಿಯರನ್ನಾಗಿ ಭಾವಿಸಿ, ಉಪಾಸನೆಮಾಡುವುದು ರೂಢಿಯಲ್ಲಿದೆ. ಇದರ ಸ್ವರೂಪವನ್ನು ವರಿವಸ್ಯಾರಹಸ್ಯಗ್ರಂಥದಲ್ಲಿ ನೋಡಬಹುದು. ವಿವರಗಳಲ್ಲಿ ಅಲ್ಲಲ್ಲಿ ಸ್ವಲ್ಪ ಭೇದಗಳಿರುತ್ತವೆ. ಆದರೆ ಮುಖ್ಯಾಂಶಗಳಲ್ಲಿ ಏಕಕಂಠ್ಯವಿರುತ್ತದೆ.

ಹೀಗೆ ವ್ಯಕ್ತಿಗಳು ನಾಮ, ರೂಪ, ಲಿಂಗ, ಆಕಾರ, ಗುಣಗಳಲ್ಲಿ ಭಿನ್ನರಾಗಿದ್ದರೂ, ಅವರೆಲ್ಲರಲ್ಲೂ ವ್ಯಾಪಿಸಿರುವ ಚೈತನ್ಯವು ಒಂದೇ, ಅವೇ ದೇವರು; ಅದರಂತೆಯೇ ಪುರಾಣಗಳು ಅನೇಕಗಳಾಗಿದ್ದರೂ ಅವು ಬೋಧಿಸುವ ನೀತಿ, ಧರ್ಮ, ತತ್ತ್ವಗಳು ಎಲ್ಲ ಮತಗಳಿಗೂ ಸಮಾನವಾಗಿರುತ್ತವೆ; ಇಂತಹ ಸಮಾನವಾದ ಧರ್ಮವೇ ವಿಶ್ವಧರ್ಮವು. ಅದರ ಆಚರಣೆಯಿಂದಲೇ ಇಹಪರಗಳಲ್ಲಿ ಶಾಂತಿ, ಸುಖ, ಅಭ್ಯುದಯಗಳೂ, ಕಡೆಗೆ ಏಕತತ್ತ್ವದ ಸಾಕ್ಷಾತ್ಕಾರವಾದ ಮೇಲೂ ಆಯುಶ್ಶೇಷವಿರುವವರೆಗೆ, ಶುಕನಿಗೆ ಹೇಗೋ ಹಾಗೆ, ಜೀವನ್ಮುಕ್ತಿಯೂ, ದೇಹಾವಸಾನದ ಅನಂತರದಲ್ಲಿ ನಿಶ್ಶ್ರೇಯಸಪ್ರಾಪ್ತಿಯೂ ದೊರೆಯುತ್ತದೆಂಬುದು ಈ ಮಹಾಪುರಾಣದ ಮುಖ್ಯ

ಉಪದೇಶವಾಗಿದೆ. ಇಂತಹ ವಿಶ್ವಧರ್ಮದ ಆಚರಣೆಯಲ್ಲಿ ಎಲ್ಲ ಜನರಿಗೂ ಮುಖಂಡರಿಗೂ ಆದರ ಉಂಟಾಗಿ, ಈಗಿನಂತೆ ಸ್ವಾರ್ಥಪರತೆ, ರಾಗ ದ್ವೇಷ, ಅಜ್ಞಾನಿಗಳ ವಂಚನೆ, ಅಶಕ್ತರನ್ನು ತುಳಿಯುವುದು, ಅಪಕಾರ, ಪ್ರತೀಕಾರಗಳಿಂದ ಅರ್ಥಹಾನಿ, ಪ್ರಾಣಹಾನಿ ಪ್ರಗತಿಭಂಗಗಳು ಸಂಭವಿಸದಂತೆ ಆಗಿ, ಜಗತ್ಕಲ್ಯಾಣವನ್ನು ಎಲ್ಲರೂ ಸಹಾನುಭೂತಿಸಹಕಾರಗಳಿಂದ ಮುಂದುವರಿಯಿಸುವಂತಾಗಲೆಂದು ಆಶಿಸುತ್ತಾ ಅದರಂತೆ ನಡೆಯಬೇಕಾಗಿದೆ.

ಈ ಮಹಾಪುರಾಣಕ್ಕೆ ನೀಲಕಂಠರೆಂಬ ಮಹಾಶಯರು ತಿಲಕ ಎಂಬ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಅದನ್ನು ಅವಲಂಬಿಸಿ ಕನ್ನಡ ಅನುವಾದವನ್ನೂ ಟಿಪ್ಪಣಿಗಳನ್ನೂ ಬರೆದಿರುತ್ತೇನೆ. ಇತರ ಗ್ರಂಥಗಳನ್ನೂ ಎಂದರೆ ಕೂರ್ಮಪುರಾಣ, ವಿಷ್ಣುಭಾಗವತ, ಲಿಂಗಮಹಾಪುರಾಣ, ಮಾರ್ಕಂಡೇಯ, ಸ್ಕಾಂದಮಹಾಪುರಾಣಗಳು, ಸೂತಸಂಹಿತಾ, ಮನುಸ್ಮೃತಿ, ವರಿವಸ್ಯಾರಹಸ್ಯ, ಋಗ್ವೇದ, ದಶೋಪನಿಷತ್ತುಗಳು, ಬ್ರಹ್ಮಸೂತ್ರ, ಭಗವದ್ಗೀತಾ ಮುಂತಾದ ಗ್ರಂಥಗಳಿಂದಲೂ ಹೆಚ್ಚಿನ ವಿಷಯಗಳನ್ನು ಆರಿಸಿ ಸೇರಿಸಿರುತ್ತೇನೆ.

ಗ್ರಂಥಸಮೀಕರಣ, ಪಾಠಾಂತರಗಳಿಗಾಗಿ ನಮ್ಮ ಮನೆಯಲ್ಲಿದ್ದ ಹಳೆಯ ದೇವೀಭಾಗವತ, ಓರಿಯಂಟಲ್ ಲೈಬ್ರೆರಿಯ ಪ್ರತಿ ಒಂದು, ಮತ್ತು ದಿವಂಗತ ವೇ|| ಬ್ರಂ|| ಕುಣಿಗಲ್ ರಾಮಶಾಸ್ತ್ರಿಗಳಿಂದ ಪಡೆದ ಆಂಧ್ರಾಕ್ಷರ ಪ್ರತಿ ಒಂದು ಇವುಗಳ ಸಹಾಯದಿಂದ ಗ್ರಂಥವನ್ನು ಪರಿಷ್ಕರಿಸಿ, ಪಾಠಾಂತರಗಳನ್ನು ದುಂಡನೆಯ ಕಂಸಗಳಲ್ಲಿ ಕೊಟ್ಟಿರುತ್ತೇನೆ. ಆದರೂ ಕೆಲವು ಲೋಪದೋಷಗಳು ಉಳಿದಿರಬಹುದು. ವಾಚಕಮಹಾಶಯರು ಮನ್ನಿಸಿ, ಹಂಸಕ್ಷೀರನ್ಯಾಯದಂತೆ ಗುಣಗಳನ್ನು ಅಭಿನಂದಿಸಿ, ಲೋಪದೋಷಗಳನ್ನು ತಿಳಿಸಿದರೆ ತಿದ್ದಿಕೊಂಡು ಕೃತಜ್ಞನಾಗುತ್ತೇನೆ. ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳೂ ಅವರ ಮುದ್ರಾಲಯ ನೌಕರವರ್ಗದವರೂ ಈ ಗ್ರಂಥವನ್ನು ಅಂದವಾಗಿ ಸಕಾಲದಲ್ಲಿ ಮುದ್ರಿಸಿಕೊಟ್ಟಿರುವುದಕ್ಕಾಗಿ ಅವರೆಲ್ಲರಿಗೂ ನನ್ನ ಅನಂತ ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ಕನ್ನಡ ಅನುವಾದವನ್ನು ಬರೆಯುವುದರಲ್ಲೂ ಅರ್ಥಗಳನ್ನು ವಿವರಿಸುವುದರಲ್ಲೂ ಅನೇಕ ಪಂಡಿತಮಹಾಶಯರೊಡನೆ ವಿಚಾರದಿಂದ ಸಹಾಯವನ್ನು ಪಡೆದಿರುತ್ತೇನೆ. ಅವರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇನೆ.

ಇಂತಹ ವಿಶ್ವಧರ್ಮದ ಅರಿವು ಆಚರಣೆಗಳು ಜನಸಾಮಾನ್ಯದಲ್ಲಿ ಬೇರೂರಿ ಬೆಳೆದು ಜಗತ್ತಿನ ಭಾವಿ ಕಲ್ಯಾಣಸಾಧನೆಗೆ ನೆರವಾಗಬೇಕೆಂಬ ಘನವಾದ ಉದ್ದೇಶ

ದಿಂದ ನಮ್ಮನ್ನಾಳುತ್ತಿರುವ ಶ್ರೀ ಜ ಯ ಚಾ ಮ ರಾ ಜೇ ೦ ದ್ರ ಒ ಡೆ ಯರ್ ಬ ಹ ದ್ದೂ ರ್, ಜಿ. ಸಿ. ಎಸ್. ಐ., ಮಹಾಪ್ರಭುಗಳ ಅಪ್ಪಣೆಯನ್ನು ಅನುಸರಿಸಿ ಈ ಗ್ರಂಥವನ್ನೂ ಬರೆದು ಮುದ್ರಿಸಿ ಪ್ರಕಟಿಸಲಾಗಿದೆ. ನಮ್ಮ ಮಹಾಸ್ವಾಮಿಯವರ ಉದ್ದೇಶವು ಸರ್ವದಾ ನೆರವೇರುತ್ತಿರುವಂತಾಗಲೆಂದು ಜಗನ್ಮಾತೆಯಾದ ಮಹಾ ತ್ರಿಪುರಸುಂದರೀ, ಭುವನೇಶ್ವರೀ, ಚಾಮುಂಡೇಶ್ವರೀ ದೇವಿಯ ಪಾದಕಮಲಗಳಲ್ಲಿ ಪ್ರಾರ್ಥಿಸುತ್ತಿದೇನೆ.

| | |
|---|---|
| ಶ್ರೀ ಪಾರ್ಥಿವಸಂವತ್ಸರದ<br>ಅಧಿಕ ಚೈತ್ರ ಶುಕ್ಲ ಪೂರ್ಣಿಮಾ<br>ಬುಧವಾರ, 28—3—45 | ಎಡತೊರೆ ದೇವಯ್ಯದೀಕ್ಷಿತರ ಮಗ<br>ಚಂದ್ರಶೇಖರಶಾಸ್ತ್ರೀ |

# ದೇವೀಭಾಗವತಮಹಾಪುರಾಣದಲ್ಲಿನ ಹನ್ನೆರಡನೆಯ ಸ್ಕಂಧದ ವಿಷಯಸೂಚಿಕೆ

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಶಕ್ತಿದೇವಿಯ ಬೆಂಬಲವೇ ಕಾರಣವು ; ಇಂದ್ರ, ಅಗ್ನಿ, ವಾಯು ಮುಂತಾದ ದೇವತೆಗಳ ಮುಖಂಡರ ಅಹಂಕಾರ ; ಅಹಂಕಾರದಿಂದ ಅಜ್ಞಾನವೂ ಅವಮಾನವೂ ತಪ್ಪವು ; ಅಧಿಕಾರ, ಜಯ, ಅಜ್ಞಾನಗಳು ಅಹಂಕಾರಕ್ಕೆ ಮೂಲ ಕಾರಣಗಳು ; ಒಳ್ಳೆಯ ಸಂಸ್ಕೃತಿಯುಳ್ಳವರಿಗೆ ಅಹಂಕಾರ ಖಂಡನೆಯಿಂದ ಭಕ್ತಿಯು ಪುಣ್ಯಫಲವಾಗಿ ಉಂಟಾಗುತ್ತದೆ; ಮಾಯೆಯ ಸಗುಣ ನಿರ್ಗುಣ ರೂಪಗಳು ; ದೇವಿಯ ಸಗುಣ ನಿರ್ಗುಣ ರೂಪಗಳು ; ಉಮಾದೇವಿಯ ಆವಿರ್ಭಾವ ; ಇಂದ್ರಾದಿಗಳಿಗೆ ದೇವಿಯ ಬುದ್ಧಿವಾದ ಮತ್ತು ಉಪದೇಶ ; ಗಾಯತ್ರ್ಯುಪಾಸನೆಯೇ ಎಲ್ಲರಿಗೂ ನಿತ್ಯವಾದುದು ಮತ್ತು ಎಲ್ಲ ಶ್ರೇಯಸ್ಸುಗಳಿಗೂ ಸಾಧನವಾದುದು ; ...... | ೧೧೩–೧೩೩ |
| 9. | ದ್ವಾದಶವರ್ಷಗಳ ಬರಗಾಲದಲ್ಲಿ ಬ್ರಾಹ್ಮಣರು ಗೌತಮಾಶ್ರಮದಲ್ಲಿ ಆಶ್ರಯವನ್ನು ಪಡೆದರು ; ಗಾಯತ್ರೀ ಉಪಾಸಕನಾದ ಗೌತಮನ ಪ್ರಭಾವ ; ಪೂರ್ಣಪಾತ್ರವನ್ನು ಗಾಯತ್ರಿಯು ಅನುಗ್ರಹಿಸಿದಳು ; ಅದರಿಂದ ಎಲ್ಲರ ಇಷ್ಟಾರ್ಥಗಳ ಲಾಭವು ; ಗೌತಮನು ಗಾಯತ್ರೀದೇವಿಗೆ ಒಂದು ದೇವಾಲಯವನ್ನೂ ಕಟ್ಟಿಸಿದನು ; ದೇವಸಭೆಯಲ್ಲಿ ಗೌತಮನ ಗುಣಾಭಿನಂದನವನ್ನು ಇಂದ್ರನೂ ಮಾಡಿದನು ; ನಾರದನು ಬಂದು ಆ ವಿಷಯವನ್ನು ಸಭೆಯಲ್ಲಿ ತಿಳಿಸಿದನು ; ಸುಖಾತಿಶಯದಿಂದ ದುಃಖವನ್ನು ಮರೆತಿದ್ದ ಬ್ರಾಹ್ಮಣರಿಗೆ ಅಸೂಯೆಯುಂಟಾಯಿತು ; ಪುಣ್ಯಕರ್ಮ ಫಲವು ಮುಗಿಯಲು ದುರ್ಬುದ್ಧಿಯುಂಟಾಗುತ್ತದೆ; ಕೃತ | |

ಅಧ್ಯಾಯ ವಿಷಯ ಪುಟಸಂಖ್ಯಾ

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

### || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

|| ನಾರದ ಉವಾಚ ||

**ಸದಾಚಾರವಿಧಿರ್ದೇವ ಭವತಾ ವರ್ಣಿತಃ ಪ್ರಭೋ ।**
**ತಸ್ಯಾಪ್ಯತುಲಮಾಹಾತ್ಮ್ಯಂ ಸರ್ವಪಾಪವಿನಾಶನಂ ॥೧॥**

---

|| ಶ್ರೀಗಣೇಶಶಾರದಾಗುರುಭ್ಯೋ ನಮಃ ||

ಬ್ರಹ್ಮಾಧಿಷ್ಠಾನತತ್ತ್ವೇ ಜಗದಿದಮುದಭೂದಸ್ತಿ ನಾಶಂ ಚ ಯಾತಿ ।
ಪ್ರಾರಬ್ಧಂ ಪ್ರಾಣಿಕರ್ಮ ಪ್ರಭವತಿ ಫಲಿತುಂ ಸಂಸೃತೌ ಸೌಖ್ಯದುಃಖೈಃ ।
ಬ್ರಹ್ಮೈವಾಸ್ಮಿನ್ ಪ್ರಪಂಚೇ ಪ್ರವಿಶತಿ ಬಹುಧಾ ಜೀವಭಾವಂ ಪ್ರಪನ್ನಂ
ಮಾಯಾಽವಿದ್ಯಾದ್ಯುಪಾಧೌ ತ್ರಿಗುಣಪರಿಣತೇ ಭಾತಿ ಸಂಸಾರಚಕ್ರೇ ॥

ಈ ದೇವೀಭಾಗವತಮಹಾಪುರಾಣದಲ್ಲಿ ದೇವಿಯೇ ಎಲ್ಲಕ್ಕೂ ಮೂಲಕಾರಣವಾದ ಪರಾಶಕ್ತಿಸ್ವರೂಪಳೆಂದೂ, ಈ ಪರಾಶಕ್ತಿಯು ಅನಾದಿಯಾಗಿ ಪ್ರಾಣಿಗಳ ಕರ್ಮಗಳಿಗೆ ಅನುಸಾರವಾಗಿ ಪರಬ್ರಹ್ಮತತ್ತ್ವದಲ್ಲಿ ಉಂಟಾಗುತ್ತಿರುವ ಪ್ರಥಮಸ್ಪಂದರೂಪವಾದ ಉಪಾಧಿ ಎಂದೂ, ಇದೆಲ್ಲವೂ ಕಲ್ಪಿತವಾಗಿ ತೋರಿಕೆಯ ಸ್ವಭಾವವುಳ್ಳದಾದುದರಿಂದ ಮಾಯೆ ಎಂದೂ ಹೇಳಿದೆ. ಕಡೆಯದಾದ ಈ ಹನ್ನೆರಡನೆಯ ಸ್ಕಂಧದ ಮಂಗಳ ಪದ್ಯದಲ್ಲಿ ವೇದಾಂತದರ್ಶನದ ದೃಷ್ಟಿಯಿಂದ ದೇವಿಯ ತತ್ತ್ವವನ್ನೂ, ಹಿಂದಿನ ಮಂಗಳ ಪದ್ಯಗಳ ಮತ್ತು ಸ್ಕಂಧಗಳ ಒಟ್ಟು ಮುಖ್ಯ ತಾತ್ಪರ್ಯವನ್ನೂ, ಸಂಗ್ರಹವಾಗಿ ವರ್ಣಿಸಿದೆ. ಬ್ರಹ್ಮವೆಂದರೆ ಎಲ್ಲಕ್ಕಿಂತಲೂ ದೊಡ್ಡದಾಗಿರುವ, ಎಲ್ಲವನ್ನೂ ವ್ಯಾಪಿಸಿ, ಒಳಗೊಂಡು, ಮೀರಿಯೂ ಇರುವ ತತ್ತ್ವವು,

ಇದು ಎಲ್ಲ ಪ್ರಪಂಚದಲ್ಲಿ ಎಂದರೆ, ಚಿತ್ ಅಚಿತ್ ಈ ರೂಪವಾದ ಜಗತ್ತಿನಲ್ಲಿ, ಚರಾಚರ ಪ್ರಾಣಿಗಳ ವ್ಯವಹಾರಗಳಿಗೆ ಎಲ್ಲಕ್ಕೂ ಅಧಿಷ್ಠಾನವಾದ ಎಂದರೆ ತೋರಿಕೆಗೆ ಆಧಾರವಾದ, ತತ್ತ್ವವಾಗಿರುತ್ತದೆ. ಅಲ್ಲದೆ ಇದು ನಿತ್ಯವೂ ನಿರ್ವಿಕಾರಿಯೂ ಚೇತನವೂ ಆದ ತತ್ತ್ವವಾಗಿದೆ. ಈ ಬ್ರಹ್ಮತತ್ತ್ವದಲ್ಲಿ ಈ ಎಲ್ಲ ಪ್ರಪಂಚಗಳೂ ಉಂಟಾಗುತ್ತವೆ; ರಕ್ಷಣೆ ಪಾಲನೆಗಳನ್ನು ಪಡೆಯುತ್ತಿರುತ್ತವೆ; ಮತ್ತು ಕಡೆಗೆ ಅವುಗಳ ಕಾರ್ಯಗಳು ನೆರವೇರಿದ ಹಾಗೆಲ್ಲ ಆ ಬ್ರಹ್ಮತತ್ತ್ವದಲ್ಲಿಯೇ, ಸೃಷ್ಟಿಕ್ರಮಕ್ಕೆ ವಿಪರೀತವಾಗಿ, ಎದುರಾದ ಕ್ರಮದಲ್ಲಿ ಎಂದರೆ, ಕಾರ್ಯಗಳು ಕಾರಣಗಳಲ್ಲೂ, ಎಲ್ಲ ಕಾರಣಗಳೂ ಮೂಲಕಾರಣವಾದ ಶಕ್ತಿ ಅಥವಾ ಮಾಯೆಯಲ್ಲೂ, ಈ ಮಾಯಾಶಕ್ತಿಯು ಬ್ರಹ್ಮತತ್ತ್ವದಲ್ಲೂ, ಲಯವನ್ನು ಪಡೆಯುತ್ತಿರುತ್ತವೆ. ಈ ಎಲ್ಲ ವ್ಯವಹಾರಕ್ಕೂ ಪ್ರಾಣಿಗಳು ಅನಾದಿಕಾಲದಿಂದ ಮಾಡಿಯೂ ಮಾಡುತ್ತಲೂ ಇರುವ ಕರ್ಮಗಳೇ ಕಾರಣವಾಗಿರುತ್ತವೆ. ಈ ಸಂಸಾರಚಕ್ರದಲ್ಲಿ ಎಂದರೆ ಕರ್ತೃತ್ವ, ಭೋಕ್ತೃತ್ವ, ಜನನ, ಮರಣ, ಸುಖದುಃಖಾನುಭವಗಳ ಸುತ್ತಿನಲ್ಲಿ, ಆಯಾ ಪ್ರಾಣಿಗಳ ಆಯಾ ಕರ್ಮಗಳ ಪೈಕಿ ಪ್ರಾರಬ್ಧಕರ್ಮಗಳು ತಮ್ಮ ಫಲಗಳಾದ ಸುಖದುಃಖಗಳನ್ನು ಉಂಟುಮಾಡುತ್ತಿರುತ್ತವೆ. ಬ್ರಹ್ಮವು ಒಂದೇ ನಿತ್ಯವೂ ನಿರ್ವಿಕಾರಿಯೂ ಆಗಿರುವ ಚೇತನತತ್ತ್ವವು. ಜೀವರೂ ಬ್ರಹ್ಮವೂ ಸಚ್ಚಿದಾನಂದರೂಪದಲ್ಲಿ ಅಭಿನ್ನರು. ಭೇದಗಳೆಲ್ಲವೂ ಉಪಾಧಿಯಾದ ಮಾಯಾ ಮತ್ತು ಅದರ ಅಂಶಗಳಾದ ಅವಿದ್ಯೆಗಳನ್ನು ಅವಲಂಬಿಸಿ ತೋರಿಕೆಯ ಸ್ವಭಾವವುಳ್ಳವಾಗಿವೆ. ದೇಹ, ಸ್ತ್ರೀ, ಪುತ್ರ, ವಿತ್ತ, ಅಧಿಕಾರಗಳಲ್ಲಿ 'ನಾನು,' 'ನನ್ನದು' ಎಂಬ ಅಭಿಮಾನದಿಂದ ಕೂಡಿರುವಿಕೆಗೂ, ಈ ಕರ್ಮಗಳ ಕರ್ತೃವೂ ಇವುಗಳ ಫಲಗಳಾದ ಸುಖದುಃಖಗಳನ್ನು ಅನುಭವಸುವ ಭೋಕ್ತೃವೂ ನಾನೇ, ಎಂಬ ಅಭಿಮಾನದಿಂದ ಕೂಡಿರುವಿಕೆಗೂ, ಜೀವಭಾವವೆಂದು ಹೆಸರು. ಬ್ರಹ್ಮನೇ ನಾನಾಬಗೆಯ ಸಂಸ್ಕೃತಿ, ರುಚಿಗಳುಳ್ಳ ಜೀವಭಾವವನ್ನು ಪಡೆದಿರುವಂತೆ ತೋರುತ್ತಾ ಈ ಪ್ರಪಂಚದಲ್ಲಿ ಪ್ರವೇಶಿಸಿ, ಈ ಜಗತ್ಸಂಸಾರವನ್ನು ಸಾಗಿಸುತ್ತಿದೆ. ಎಲ್ಲಕ್ಕಿಂತ ದೊಡ್ಡದೂ ವ್ಯಾಪಕವೂ ಆಗಿರುವ ಉಪಾಧಿಗೆ ಮಾಯೆ ಎಂದೂ, ಚಿಕ್ಕ ಚಿಕ್ಕ ಉಪಾಧಿಗಳಿಗೆ ಅವಿದ್ಯೆ ಎಂದೂ ವ್ಯವಹಾರವಿದೆ. ಸತ್ತ್ವ ರಜಸ್ ತಮಸ್ ಎಂಬ ಮೂರು ಗುಣಗಳೇ ಮಾಯೆಯಸ್ವರೂಪವು. ಈ ಮಾಯೆಯಿಂದ ಕೂಡಿರುವ ಬ್ರಹ್ಮಚೈತನ್ಯಕ್ಕೇ ಪ್ರಥಮಶರೀರೀ, ಹಿರಣ್ಯಗರ್ಭ, ಎಂದು ವ್ಯವಹಾರವು. ಅಲ್ಲದೆ ರಜೋಗುಣ ಮುಂದುವರಿದಿರುವ ಮಾಯೆಯೇ ಉಪಾಧಿಯಾಗಿ ಉಳ್ಳ ಬ್ರಹ್ಮಚೈತನ್ಯಕ್ಕೆ ಬ್ರಹ್ಮಾ, ಸೃಷ್ಟಿಕರ್ತಾ, ಎಂದು ಹೆಸರು. ಸತ್ತ್ವಗುಣಪ್ರಧಾನವಾಗಿರುವ ಮಾಯೋಪಾಧಿಕವಾದ ಬ್ರಹ್ಮಚೈತನ್ಯಕ್ಕೆ ವಿಷ್ಣು,

**ಶ್ರುತಂ ಭವನ್ಮುಖಾಂಭೋಜ ಚ್ಯುತಂ ದೇವೀಕಥಾಮೃತಂ ।**
**ವ್ರತಾನಿ ಯಾನಿ ಚೋಕ್ತಾನಿ ಚಾಂದ್ರಾಯಣಮುಖಾನಿ ತೇ ॥೨॥**

ನಾರಾಯಣ, ಕೃಷ್ಣ ಎಂದು ಮುಂತಾದ ವ್ಯವಹಾರವಿದೆ. ಅದರಂತೆಯೇ ತಮೋ ಗುಣ ಪ್ರಬಲವಾದ ಮಾಯೆಯನ್ನು ಉಪಾಧಿಯಾಗಿ ಪಡೆದಿರುವ ಬ್ರಹ್ಮಚೈತನ್ಯಕ್ಕೆ ರುದ್ರ, ಈಶ್ವರ, ಎಂದು ಸಂಕೇತವಿದೆ. ಈ ಮೂರ್ತಿಗಳಿಗೆ ಸಹಧರ್ಮಿಣಿಯರಾದ ಸರಸ್ವತೀ, ಲಕ್ಷ್ಮೀ, ಉಮಾದೇವಿಯರು ಆ ಮಾಯಾಶಕ್ತಿಯ ಅಂಶರೂಪರಾಗಿ ರುತ್ತಾ, ಆ ತ್ರಿಮೂರ್ತಿಗಳೊಡನೆ ಸಹಕರಿಸಿ ಜಗತ್ಕಾರ್ಯವನ್ನು ಮುಂದುವರಿಯಿಸು ತ್ತಿರುತ್ತಾರೆ. ಒಂದು ರಾಜ್ಯಭಾರದ ಕಾರ್ಯನಿರ್ವಾಹದಲ್ಲಿ ಒಬ್ಬ ದೊರೆಯೂ, ಮೂರು ಜನ ಮಂತ್ರಿಗಳೂ, ಸಚಿವರೂ, ಜಿಲ್ಲಾಧ್ಯಕ್ಷರೂ ಮುಂತಾದ ಅಧಿಕಾರಿಗಳಿರುವಂತೆ, ಈ ವಿಶ್ವರಾಜ್ಯಭಾರ ನಿರ್ವಾಹ ಕಾರ್ಯದಲ್ಲಿ ಹಿರಣ್ಯಗರ್ಭನೂ, ತ್ರಿಮೂರ್ತಿಗಳೂ, ಇತರ ಆಧಿಕಾರಿಕ ದೇವತೆಗಳೂ ಇರುತ್ತಾರೆ. ಮಾಯೆಯ ತ್ರಿಗುಣಗಳಲ್ಲಿ ಒಂದೊಂದು ಮುಂದಾಗಿ ಮಿಕ್ಕ ಎರಡು ಹಿಂದಾಗಿರುವಿಕೆ ಎಂಬ ಈ ಪರಿಣಾಮಗಳು ಅನೇಕವಾ ಗಿಯೂ ಅನಂತವಾಗಿಯೂ ಇವೆ. ಇಂತಹ ಮಾಯಾಂಶಗಳೇ, ಅಲ್ಪ ಶಕ್ತಿಗಳೇ, ಅವಿದ್ಯೆ ಎನ್ನಿಸಿಕೊಂಡು ಅನಂತ ಸಂಖ್ಯೆಯ ಜೀವರಾಗಿರುತ್ತವೆ. ಇವರೆಲ್ಲರ ವ್ಯವಹಾರಗಳನ್ನು ಪರಸ್ಪರ ವಿರೋಧಿಸದಂತೆ, ಗೊಂದಲವಾಗದಂತೆ, ವ್ಯವಸ್ಥೆಯನ್ನು ಏರ್ಪಡಿಸುತ್ತಿರುವುದರಿಂದಲೇ ಈ ಸಂಸಾರಚಕ್ರವು ಪ್ರಗತಿಪರವಾಗಿಯೂ, ವಿವೇಕಿ ಗಳಿಗೆ ಸಾವಕಾಶವಿಲ್ಲದೆ ಶ್ರೇಯಸ್ಕರವಾಗಿಯೂ ಸಾಗುತ್ತಿರುತ್ತವೆ. ಇದನ್ನು ಎಲ್ಲರೂ ಶ್ರೇಯಸ್ಕರವಾಗಿ ಮಾಡಿಕೊಳ್ಳುವಂತಾಗಲಿ.

ಈ ಅಧ್ಯಾಯದಲ್ಲಿ ಇಪ್ಪತ್ತೇಳು ಮತ್ತು ಅರ್ಧ ಶ್ಲೋಕಗಳಿಂದ ಗಾಯತ್ರೀ ಮಂತ್ರದ ಋಷ್ಯಾದಿಗಳೇ ಮೊದಲಾದ ಇತರ ವಿವರಗಳನ್ನು ನಿರೂಪಿಸುತ್ತಾರೆ. ಹಿಂದಿನ ಸ್ಕಂಧದ ಕೊನೆಯ ಅಧ್ಯಾಯದಲ್ಲಿ ಗಾಯತ್ರಿಯ ವಿಧಾನವನ್ನೂ, ಸದಾ ಚಾರವನ್ನೂ ಕೇಳಿ, ಮತ್ತೆ ಈಗ ನಾರದರು ಶ್ರೀಮನ್ನಾರಾಯಣನನ್ನು ಪ್ರಶ್ನಿಸುತ್ತಾರೆ.

ನಾರದರು ಹೇಳಿದರು—ಓ ಪರಮಾತ್ಮನೇ, ನಿನ್ನಿಂದ ಸದಾಚಾರ ವಿಧಾ ನವೂ, ಸಮಸ್ತಪಾಪಪರಿಹಾರಕವಾದ ಆ ಸದಾಚಾರವಿಧಿಯ ಮಾಹಾತ್ಮ್ಯವೂ ವರ್ಣಿ ಸಲ್ಪಟ್ಟಿತು. ॥೧॥

ದೇವಿಯ ಅಮೃತಮಯವಾದ ಕಥೆಯೂ, ಚಾಂದ್ರಾಯಣವೇ ಮೊದಲಾದ ಯಾವ ಯಾವ ಕಷ್ಟತರವಾದ ವ್ರತಗಳಿವೆಯೋ ಅವುಗಳೂ ಸಹ ನಿನ್ನ ಮುಖಾರ ವಿಂದದಿಂದ ಕೇಳಲ್ಪಟ್ಟವು. ॥೨॥

ದುಃಖಸಾಧ್ಯಾನಿ ಜಾನೀಮಃ ಕರ್ತ್ರ್ಯಸಾಧ್ಯಾನಿ ತಾನಿಚ ।
ತದಸ್ಮಾತ್ತ್ಸಾಂಪ್ರತಂ ಯತ್ತು ಸುಖಸಾಧ್ಯಂ ಶರೀರಿಣಾಂ ॥೩॥

ದೇವೀಪ್ರಸಾದಜನಕಂ ಸುಖಾನುಷ್ಠಾನಸಿದ್ಧಿದಂ ।
ತತ್ಕರ್ಮ ವದ ಮೇ ಸ್ವಾಮಿನ್ ಕೃಪಾಪೂರ್ವಂ ಸುರೇಶ್ವರ ॥೪॥

ಸದಾಚಾರವಿಧೌ ಯಚ್ಚ ಗಾಯತ್ರೀವಿಧಿರೀರಿತಃ ।
ತಸ್ಮಿನ್ ಮುಖ್ಯತಮಂ ಕಿಂ ಸ್ಯಾತ್ಕಿಂ ವಾ ಪುಣ್ಯಾಧಿಕಪ್ರದಂ ॥೫॥

ಯೇ ಗಾಯತ್ರೀಗತಾವರ್ಣಾಸ್ತತ್ವಸಂಖ್ಯಾಸ್ತ್ವಯೇರಿತಾಃ ।
ತೇಷಾಂ ಕೇ ಋಷಯಃ ಪ್ರೋಕ್ತಾಃ ಕಾನಿ ಛಂದಾಂಸಿ ವೈ ಮುನೇ ॥೬॥

ತೇಷಾಂ ಕಾ ದೇವತಾಃ ಪ್ರೋಕ್ತಾಃ ಸರ್ವಂ ಕಥಯ ಮೇ ಪ್ರಭೋ ।
ಮಹತ್ಕೌತೂಹಲಂ ಮೇ ಚ ಮಾನಸೇ ಪರಿವರ್ತತೇ ॥೭॥

---

ಅತ್ಯಂತ ಕಷ್ಟಸಾಧ್ಯಗಳೂ, ಸಾಮಾನ್ಯಜನರಿಂದ ಮಾಡಲು ಅಸಾಧ್ಯಗಳೂ ಆದ ಪರಾಕ, ಕೃಛ್ರ, ಚಾಂದ್ರಾಯಣಾದಿ ವ್ರತಗಳು ಮನುಷ್ಯನ ದೇಹಶುದ್ಧಿಗಾಗಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿರುವುದರಿಂದ, ಆ ದುಸ್ಸಾಧ್ಯವಾದ ವ್ರತಗಳನ್ನು ಮನುಷ್ಯನು ಮಾಡಲು ಸುಲಭವಾದ ಮಾರ್ಗವಿದ್ದರೆ, ॥೩॥

ದೇವೀಪ್ರಸಾದವನ್ನುಂಟುಮಾಡತಕ್ಕುದೂ, ಸುಖವಾಗಿ ಅನುಷ್ಠಾನಮಾಡಲು ಯೋಗ್ಯವೂ ಆದ ಆ ವಿಧಿಯನ್ನು ಓ ಪರಮಾತ್ಮನೇ, ಕೃಪಾಪೂರ್ವಕವಾಗಿ ನಮಗೆ ಅನುಗ್ರಹಿಸು. ॥೪॥

ಸದಾಚಾರವಿಧಾನದಲ್ಲಿ ಯಾವ ಗಾಯತ್ರಿಯು ನಿನ್ನಿಂದ ಹೇಳಲ್ಪಟ್ಟಿತೋ ಅದರಲ್ಲಿ ಅತ್ಯಂತ ಮುಖ್ಯವಾದುದೂ, ಅಧಿಕಪುಣ್ಯಪ್ರದವಾದುದೂ, ಯಾವುದು ? ॥೫॥

ನಿನ್ನಿಂದ ಹೇಳಲ್ಪಟ್ಟವುಗಳಲ್ಲಿ, ಗಾಯತ್ರಿಯಲ್ಲಿ ಮುಖ್ಯವಾಗಿರಬೇಕಾದ ವರ್ಣಗಳು ಎಷ್ಟು? ಅವುಗಳಿಗೆ ಋಷಿ, ಛಂದಸ್ಸುಗಳು ಯಾವುವು ? ॥೬॥

ಮತ್ತು ಅವುಗಳ ದೇವತೆಗಳು ಯಾರು ? ಇವೇ ಮೊದಲಾದ ಸಂಗತಿಗಳನ್ನು ಕೇಳಬೇಕೆಂದು ನನ್ನ ಮನಸ್ಸಿನಲ್ಲಿ ಬಹಳ ಕುತೂಹಲವಿರುವುದರಿಂದ ಓ ಶ್ರೀಮನ್ನಾರಾಯಣನೇ, ಇವುಗಳನ್ನೆಲ್ಲವನ್ನೂ ವಿಶದವಾಗಿ ತಿಳಿಸು, ಎಂದು ಪ್ರಾರ್ಥಿಸಿದರು. ॥೭॥

|| ಶ್ರೀನಾರಾಯಣ ಉವಾಚ ||

**ಕುರ್ಯಾದನ್ಯಂ ನ ವಾ ಕುರ್ಯಾದನುಷ್ಠಾನಾದಿಕಂ ತಥಾ ।**
**ಗಾಯತ್ರೀ ಮಾತ್ರ ನಿಷ್ಠಸ್ತು ಕೃತಕೃತ್ಯೋ ಭವೇದ್ದ್ವಿಜಃ ||೮||**

**ಸಂಧ್ಯಾಸು ಚಾರ್ಘ್ಯದಾನಂ ಚ ಗಾಯತ್ರೀಜಪಮೇವ ಚ ।**
**ಸಹಸ್ರತ್ರಿತಯಂ ಕುರ್ವನ್ ಸುರೈಃ ಪೂಜ್ಯೋ ಭವೇನ್ಮುನೇ ||೯||**

**ನ್ಯಾಸಾನ್ ಕರೋತು ವಾ ಮಾ ವಾ ಗಾಯತ್ರೀಮೇವ ಚಾಭ್ಯಸೇತ್ ।**
**ಧ್ಯಾತ್ವಾ ನಿರ್ವ್ಯಾಜಯಾ ವೃತ್ತ್ಯಾ ಸಚ್ಚಿದಾನಂದರೂಪಿಣೀಂ ||೧೦||**

---

ಶ್ರೀಮನ್ನಾರಾಯಣನು ಹೇಳಿದನು.—ಬ್ರಾಹ್ಮಣನು ತನ್ನ ದೇಹಶುದ್ಧಿಗಾಗಿ ಕೃಛ್ರ ಚಾಂದ್ರಾಯಣಾದಿ ವ್ರತನಿಯಗಳನ್ನು ಮಾಡಲಿ, ಅಥವಾ ಮಾಡದೇ ಇರಲಿ. ನಿರ್ವ್ಯಾಜವಾದ ಭಕ್ತಿಯಿಂದ ಕೇವಲ ಗಾಯತ್ರೀ (ಮಂತ್ರವನ್ನು) ಜಪಮಾಡುವುದರಿಂದಲೇ ಕೃತಕೃತ್ಯನಾಗುತ್ತಾನೆ. ಆದ್ದರಿಂದಲೇ ಗಾಯತ್ರೀಪ್ರಕರಣದಲ್ಲಿ ಕೇವಲ ಗಾಯತ್ರಿಜಪದಿಂದಲೇ ಕೃಛ್ರಾದಿಗಳನ್ನು ಮಾಡಿದಷ್ಟು ಫಲವು ದೊರಕುತ್ತದೆ. ಎಂದು ಹೇಳಿರುತ್ತದೆ. ಕೂರ್ಮಪುರಾಣದಲ್ಲಿ " ಗಾಯತ್ರೀಮಂತ್ರವು ಚತುರ್ವೇದಗಳಿಗೆ ಸಮತೂಕವುಳ್ಳದ್ದು" ಎಂದು ಹೇಳಿದೆ. (ಏಕತಶ್ಚತುರೋ ವೇದಾ ಗಾಯತ್ರೀ ಚೈಕತಃ ಪರಾ) ಇತಿ ||೮||

ಪ್ರತಿದಿವಸವೂ ಬ್ರಾಹ್ಮಣನು ಮಾಡತಕ್ಕ ತ್ರಿಕಾಲಸಂಧ್ಯಾವಂದನೆಯಲ್ಲಿ ಅರ್ಘ್ಯಪ್ರದಾನವು ಆವಶ್ಯಕವು. ಅದರಂತೆ ಪ್ರತಿ ಸಂಧ್ಯಾವಂದನೆಯಲ್ಲೂ ಸಹಸ್ರ ಗಾಯತ್ರೀಜಪದಂತೆ ದಿನ ಒಂದಕ್ಕೆ ಮೂರುಸಾವಿರ ಗಾಯತ್ರೀಜಪವನ್ನು ಯಾರು ಬಿಡದೆ ಮಾಡುತ್ತಾರೆಯೋ ಅಂತಹವರು ದೇವತೆಗಳಿಂದಲೂ ಪೂಜಿಸಲ್ಪಡುತ್ತಾರೆ. (ಎಂದರೆ ಗಾಯತ್ರೀಜಪವೇ ಅತಿ ಮುಖ್ಯವೆಂದು ಭಾವಿಸತಕ್ಕದ್ದು.) ||೯||

ಅಂಗನ್ಯಾಸ ಕರನ್ಯಾಸಗಳನ್ನು ಮಾಡಲಿ ಅಥವಾ ಮಾಡದೇ ಇರಲಿ, ನಿರ್ವ್ಯಾಜವಾದ ಭಕ್ತಿಯಿಂದ ಸಚ್ಚಿದಾನಂದಸ್ವರೂಪಿಣಿಯಾದ ಗಾಯತ್ರೀದೇವಿಯನ್ನು ಧ್ಯಾನಮಾಡುತ್ತ ಜಪವನ್ನು ಮಾಡಲೇ ಬೇಕು. ||೧೦||

**ಯದಕ್ಷರೈಕಸಂಸಿದ್ಧೇಃ ಸ್ಪರ್ಧತೇ ಬ್ರಾಹ್ಮಣೋತ್ತಮಃ ।**
**ಹರಿಶಂಕರಕಂಜೋತ್ಥಸೂರ್ಯಚಂದ್ರಹುತಾಶನೈಃ ॥೧೧॥**

**ಅಥಾತಃ ಶ್ರೂಯತಾಂ ಬ್ರಹ್ಮನ್ ವರ್ಣಋಷ್ಯಾದಿಕಾಂಸ್ತಥಾ ।**
**ಛಂದಾಂಸಿ ದೇವತಾಸ್ತದ್ವತ್ಕ್ರಮಾತ್ತತ್ತ್ವಾನಿ ಚೈವ ಹಿ ॥೧೨॥**

**ವಾಮದೇವೋಽತ್ರಿರ್ವಸಿಷ್ಠಃ ಶುಕ್ರಃ ಕಣ್ವಃ ಪರಾಶರಃ ।**
**ವಿಶ್ವಾಮಿತ್ರೋ ಮಹಾತೇಜಾಃ ಕಪಿಲಶ್ಶೌನಕೋ ಮಹಾನ್ ॥೧೩॥**

**ಯಾಜ್ಞ್ಯವಲ್ಕ್ಯೋ ಭರದ್ವಾಜೋ ಜಮದಗ್ನಿಸ್ತಪೋನಿಧಿಃ ।**
**ಗೌತಮೋ ಮುದ್ಗಲಶ್ಚೈವ ವೇದವ್ಯಾಸಶ್ಚ ಲೋಮಶಃ ॥೧೪॥**

**ಅಗಸ್ತ್ಯಃ ಕೌಶಿಕೋ ವತ್ಸಃ ಪುಲಸ್ತ್ಯೋ ಮಾಂಡುಕಸ್ತಥಾ ।**
**ದುರ್ವಾಸಾಸ್ತಪಸಾಂ ಶ್ರೇಷ್ಠೋ ನಾರದಃ ಕಶ್ಯಪಸ್ತಥಾ ॥೧೫॥**

---

ಗಾಯತ್ರಿಯ ಒಂದೊಂದು ಅಕ್ಷರವನ್ನು ಜಪಮಾಡುವುದರಿಂದಲೇ ಸಿದ್ಧಿಯನ್ನು ಪಡೆಯತಕ್ಕ ಬ್ರಾಹ್ಮಣಶ್ರೇಷ್ಠನು ವಿಷ್ಣು, ಈಶ್ವರ, ಬ್ರಹ್ಮ, ಸೂರ್ಯ, ಚಂದ್ರ, ಅಗ್ನಿ ಮುಂತಾದ ದೇವತೆಗಳೊಡನೆಯೂ ಹುರುಡಿನಿಂದ ಮೇಲ್ಮೆಗೆ ಹೋರಾಡುತ್ತಾನೆ. (ಎಂದರೆ ಗಾಯತ್ರೀಜಪಾಧಿಕಾರವು ಕೇವಲ ಬ್ರಾಹ್ಮಣನಿಗೆ ಅಲ್ಲದೆ ಮತ್ತಾರಗೂ ಇಲ್ಲದಿರುವುದರಿಂದ ದೇವತೆಗಳಿಗೂ ಸಹ ಗಾಯತ್ರಿಯ ಸಿದ್ಧಿಯನ್ನು ಪಡೆಯುವ ಬ್ರಾಹ್ಮಣನ ವಿಷಯದಲ್ಲಿ ಹೊಟ್ಟೇಕಿಚ್ಚುಪಡುವಂತಾಗುತ್ತದೆ.) ॥೧೧॥

ಅಂತಹ ಗಾಯತ್ರೀ ಮಂತ್ರದ ದೇವತೆ ವರ್ಣಗಳ, ಋಷಿಗಳು, ಮೊದಲಾದ ವಿಷಯಗಳನ್ನು ಕ್ರಮವಾಗಿ ವಿವರಿಸುತ್ತೇನೆ. ಕೇಳು. ॥೧೨॥

ಗಾಯತ್ರೀಮಂತ್ರದ ಪ್ರತಿಯೊಂದು ಅಕ್ಷರಕ್ಕೂ ಒಬ್ಬೊಬ್ಬ ಋಷಿಯಂತೆ, ತತ್ ಇತ್ಯಾದಿ ಇಪ್ಪತ್ತುನಾಲ್ಕು ಅಕ್ಷರಗಳಿಗೂ (೧) ವಾಮದೇವ (೨) ಅತ್ರಿ (೩) ವಸಿಷ್ಠ (೪) ಶುಕ್ರ (೫) ಕಣ್ವ (೬) ಪರಾಶರ (೭) ಮಹಾತೇಜಸ್ವಿಯಾದ ವಿಶ್ವಾಮಿತ್ರ (೮) ಕಪಿಲ (೯) ಶೌನಕ (೧೦) ಯಾಜ್ಞವಲ್ಕ್ಯ (೧೧) ಭರದ್ವಾಜ (೧೨) ತಪೋನಿಧಿಯಾದ ಜಮದಗ್ನಿ (೧೩) ಗೌತಮ (೧೪) ಮುದ್ಗಲ (೧೫) ವೇದವ್ಯಾಸ (೧೬) ಲೋಮಶ (೧೭) ಅಗಸ್ತ್ಯ (೧೮) ಕೌಶಿಕ (೧೯) ವತ್ಸ (೨೦) ಪುಲಸ್ತ್ಯ (೨೧) ಮಾಂಡುಕ (೨೨) ತಪಸ್ವಿ ಶ್ರೇಷ್ಠನಾದ ದುರ್ವಾಸ (೨೩) ನಾರದ (೨೪) ಕಶ್ಯಪ ಎಂಬ ಇಪ್ಪತ್ತುನಾಲ್ಕು ಮಂದಿ ಕ್ರಮವಾಗಿ ಋಷಿಗಳು

ಇತ್ಯೇತೇ ಋಷಯಃ ಪ್ರೋಕ್ತಾ ವರ್ಣಾನಾಂ ಕ್ರಮಶೋ ಮುನೇ ।
ಗಾಯತ್ರ್ಯುಷ್ಣಿಗನುಷ್ಟುಪ್ಚ ಬೃಹತೀ ಪಙ್ಕ್ತಿರೇವ ಚ ॥೧೬॥

ತ್ರಿಷ್ಟುಭಂ(ಪ್) ಜಗತೀ ಚೈವ ತಥಾತಿಜಗತೀ ಮತಾ ।
ಶಕ್ವರ್ಯತಿಶಕ್ವರೀ ಚ ಧೃತಿಶ್ಚಾತಿಧೃತಿಸ್ತಥಾ ॥೧೭॥

ವಿರಾಟ್ಪ್ರಸ್ತಾರಪಙ್ಕ್ತಿಶ್ಚ ಕೃತಿಃ ಪ್ರಕೃತಿರಾಕೃತಿಃ ।
ವಿಕೃತಿಸ್ಸಂಕೃತಿಶ್ಚೈವಾಕ್ಷರಪಙ್ಕ್ತಿಸ್ತಥೈವ ಚ ॥೧೮॥

ಭೂರ್ಭುವಃಸ್ವರಿತಿ ಛಂದಃ ತಥಾ ಜ್ಯೋತಿಷ್ಮತೀ ಸ್ಮೃತಂ ।
ಇತ್ಯೇತಾನಿ ಚ ಛಂದಾಂಸಿ ಕೀರ್ತಿತಾನಿ ಮಹಾಮುನೇ ॥೧೯॥

ದೈವತಾನಿ ಶೃಣು ಪ್ರಾಜ್ಞ ತೇಷಾಮೇವಾನುಪೂರ್ವಶಃ ।
ಆಗ್ನೇಯಂ ಪ್ರಥಮಂ ಪ್ರೋಕ್ತಂ ಪ್ರಾಜಾಪತ್ಯಂ ದ್ವಿತೀಯಕಂ ॥೨೦॥

ತೃತೀಯಂ ಚ ತಥಾ ಸೌಮ್ಯಮೀಶಾನಂ ಚ ಚತುರ್ಥಕಂ ।
ಸಾವಿತ್ರಂ ಪಂಚಮಂ ಪ್ರೋಕ್ತಂ ಷಷ್ಠಮಾದಿತ್ಯದೈವತಂ ॥೨೧॥

ಬಾರ್ಹಸ್ಪತ್ಯಂ ಸಪ್ತಮಂ ತು ಮೈತ್ರಾವರುಣಮಷ್ಟಮಂ ।
ನವಮಂ ಭಗದೈವತ್ಯಂ ದಶಮಂಚಾರ್ಯಮೇಶ್ವರಂ ॥೨೨॥

---

ಎಂದು ಹೇಳಲ್ಪಟ್ಟಿದ್ದಾರೆ. ಋಷಿಗಳೆಂದರೆ ಮಂತ್ರದ್ರಷ್ಟೃಗಳೆಂದು ಹೇಳಿದೆ. ||೧೩-೧೪-೧೫||

ಹಾಗೆಯೇ (೧) ಗಾಯತ್ರೀ (೨) ಉಷ್ಣಿಕ್ (೩) ಅನುಷ್ಟುಪ್ (೪) ಬೃಹತೀ (೫) ಪಂಕ್ತಿ (೬) ತ್ರಿಷ್ಟುಪ್ (೭) ಜಗತೀ (೮) ಅತಿಜಗತೀ (೯) ಶಕ್ವರೀ (೧೦) ಅತಿಶಕ್ವರೀ (೧೧) ಧೃತಿ (೧೨) ಅತಿಧೃತಿ (೧೩) ವಿರಾಟ್ (೧೪) ಪ್ರಸ್ತಾರಪಂಕ್ತಿ (೧೫) ಕೃತಿ (೧೬) ಪ್ರಕೃತಿ (೧೭) ಆಕೃತಿ (೧೮) ವಿಕೃತಿ (೧೯) ಸಂಕೃತಿ (೨೦) ಅಕ್ಷರಪಂಕ್ತಿ (೨೧) ಭೂಃ (೨೨) ಭುವಃ (೨೩) ಸ್ವಃ (೨೪) ಜ್ಯೋತಿಷ್ಮತೀ ಎಂದು ಕ್ರಮವಾಗಿ ಇಪ್ಪತ್ತುನಾಲ್ಕು ಛಂದಸ್ಸುಗಳು. ಎಂದು ಹೇಳಲ್ಪಟ್ಟಿವೆ. ||೧೬-೧೭-೧೮-೧೯||

ಎಲೈ ನಾರದನೇ, ಇದೇ ಅನುಕ್ರಮದಿಂದ ದೇವತೆಗಳ ಹೆಸರುಗಳನ್ನೂ ಕೇಳು. (೧) ಅಗ್ನಿ (೨) ಪ್ರಜಾಪತಿ (೩) ಸೋಮ (೪) ಈಶಾನ, (೫) ಸವಿತೃ (೬) ಆದಿತ್ಯ (೭) ಬೃಹಸ್ಪತಿ (೮) ಮಿತ್ರಾವರುಣ (೯) ಭಗ (೧೦) ಅರ್ಯಮಾ

ಗಣೇಶಮೇಕಾದಶಕಂ ತ್ವಾಷ್ಟ್ರಂ ದ್ವಾದಶಕಂ ಸ್ಮೃತಂ ।
ಪೌಷ್ಣಂ ತ್ರಯೋದಶಂ ಪ್ರೋಕ್ತಮೈಂದ್ರಾಗ್ನಂ ಚ ಚತುರ್ದಶಂ ॥೨೩॥

ವಾಯವ್ಯಂ ಪಂಚದಶಕಂ ವಾಮದೇವ್ಯಂ ಚ ಷೋಡಶಂ ।
ಮೈತ್ರಾವರುಣಿದೈವತ್ಯಂ ಪ್ರೋಕ್ತಂ ಸಪ್ತದಶಾಕ್ಷರಂ ॥೨೪॥

ಅಷ್ಟಾದಶಂ ವೈಶ್ವದೇವಮೂನ ವಿಂಶಂ ತು ಮಾತೃಕಂ ।
ವೈಷ್ಣವಂ ವಿಂಶತಿತಮಂ ವಸುದೈವತಮೀರಿತಂ ॥೨೫॥

ಏಕವಿಂಶತಿಸಂಖ್ಯಾಕಂ ದ್ವಾವಿಂಶಂ ರುದ್ರದೈವತಂ ।
ತ್ರಯೋವಿಂಶಂ ಚ ಕೌಬೇರಮಾಶ್ವಿನಂ ತತ್ವ ಸಂಖ್ಯಕಂ ॥೨೬॥

ಚತುರ್ವಿಂಶತಿ ವರ್ಣಾನಾಂ ದೇವತಾನಾಂ ಚ ಸಂಗ್ರಹಃ ।
ಕಥಿತಃ ಪರಮಶ್ರೇಷ್ಠೋ ಮಹಾಪಾಪೈಕ ಶೋಧನಃ ॥೨೭॥
ಯದಾಕರ್ಣನಮಾತ್ರೇಣ ಸಾಂಗಂ ಜಾಪ್ಯಫಲಂ ಮುನೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಪ್ರಥಮೋಽಧ್ಯಾಯಃ

---

(೧೧) ಗಣೇಶ (೧೨) ತ್ವಷ್ಟಾ (೧೩) ಪೂಷಾ (೧೪) ಇಂದ್ರಾಗ್ನೀ (೧೫) ವಾಯು (೧೬) ವಾಮದೇವ (೧೭) ಮೈತ್ರಾವರುಣಿ (೧೮) ವಿಶ್ವದೇವ (೧೯) ಮಾತೃದೇವತಾ (೨೦) ವೈಷ್ಣವಂ (೨೧) ವಸು (೨೨) ರುದ್ರ (೨೩) ಕುಬೇರ (೨೪) ಆಶ್ವಿನಿ–ಎಂಬದಾಗಿ ಅಭಿಮಾನಿದೇವತೆಗಳ ಹೆಸರುಗಳೂ ಕ್ರಮವಾಗಿ ಹೇಳಲ್ಪಟ್ಟಿವೆ. ಈ ರೀತಿಯಲ್ಲಿ ಇಪ್ಪತ್ತುನಾಲ್ಕು ಅಕ್ಷರಗಳಿಗೂ ಕ್ರಮವಾಗಿ ಇಪ್ಪತ್ತುನಾಲ್ಕು ದೇವತೆಗಳೂ ಹೇಳಲ್ಪಟ್ಟಿವೆ. ಪರಮಪವಿತ್ರವಾದ ಈ ನಾಮಗಳ ಉಚ್ಚಾರಣಮಾತ್ರದಿಂದಲೇ ಮಹಾಪಾಪಗಳೂ ನಾಶಮಾಡಲ್ಪಡುವುವು. ಅಲ್ಲದೆ ಇವುಗಳನ್ನು ಕಿವಿಯಿಂದ ಕೇಳಿದ ಮಾತ್ರಕ್ಕೇ ಸಾಂಗವಾಗಿ ಗಾಯತ್ರಿಯ ಜಪಮಾಡಿದ (ಪುಣ್ಯ) ಫಲವೂ ಲಭಿಸುವುದರಲ್ಲಿ ಯಾವ ಸಂದೇಹವೂ ಇಲ್ಲ. ॥೨೦-೨೧-೨೨-೨೩-೨೪-೨೫-೨೬-೨೭॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

### || ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ವರ್ಣಾನಾಂ ಶಕ್ತಯಃ ಕಾಶ್ಚ ತಾಃ ಶೃಣುಷ್ವ ಮಹಾಮುನೇ ।**
**ವಾಮದೇವೀ ಪ್ರಿಯಾ ಸತ್ಯಾ ವಿಶ್ವಾ ಭದ್ರವಿಲಾಸಿನೀ ॥೧॥**

**ಪ್ರಭಾವತೀ ಜಯಾ ಶಾಂತಾ ಕಾಂತಾ ದುರ್ಗಾ ಸರಸ್ವತೀ ।**
**ವಿದ್ರುಮಾ ಚ ವಿಶಾಲೇಶಾ ವ್ಯಾಪಿನೀ ವಿಮಲಾ ತಥಾ ॥೨॥**

**ತಮೋಽಪಹಾರಿಣೀ ಸೂಕ್ಷ್ಮಾ ವಿಶ್ವಯೋನಿರ್ಜಯಾ ವಶಾ ।**
**ಪದ್ಮಾಲಯಾ ಪರಾಶೋಭಾ ಭದ್ರಾ ಚ ತ್ರಿಪದಾ ಸ್ಮೃತಾ ॥೩॥**

---

ಈ ಅಧ್ಯಾಯದಲ್ಲಿ ಹದಿನೆಂಟು ಶ್ಲೋಕಗಳಿಂದ ಇಪ್ಪತ್ತುನಾಲ್ಕು ವರ್ಣಗಳ ಶಕ್ತಿಗಳನ್ನೂ, ಶ್ವೇತಪೀತಾದಿ ವರ್ಣಗಳನ್ನೂ, ಮುದ್ರೆಗಳನ್ನೂ ಪ್ರಸಂಗಾನುಸಾರವಾಗಿ ವರ್ಣಿಸಲಾಗುವುದು.

ಶ್ರೀಮನ್ನಾರಾಯಣನು ಹೇಳಿದನು—(೧) ವಾಮದೇವೀ (೨) ಪ್ರಿಯಾ (೩) ಸತ್ಯಾ (೪) ವಿಶ್ವಾ (೫) ಭದ್ರವಿಲಾಸಿನೀ (೬) ಪ್ರಭಾವತೀ (೭) ಜಯಾ (೮) ಶಾಂತಾ (೯) ಕಾಂತಾ (೧೦) ದುರ್ಗಾ (೧೧) ಸರಸ್ವತೀ (೧೨) ವಿದ್ರುಮಾ (೧೩) ವಿಶಾಲಾ (೧೪) ವ್ಯಾಪಿನೀ (೧೫) ವಿಮಲಾ (೧೬) ತಮೋಽಪಹಾರಿಣೀ (೧೭) ಸೂಕ್ಷ್ಮಾ (೧೮) ವಿಶ್ವಯೋನಿಃ (೧೯) ಜಯಾ (೨೦) ವಶಾ (೨೧) ಪದ್ಮಾಲಯಾ (೨೨) (ಪರಾ) ಶೋಭಾ (೨೩) ಭದ್ರಾ (೨೪) ತ್ರಿಪದಾ ಎಂಬ ಇವರು ಆಯಾ ವರ್ಣಾಭಿಮಾನಿಗಳಾದ ಶಕ್ತಿದೇವತೆಯರೆಂದು ಭಾವಿಸಬೇಕು. ||೧-೨-೩||

**ಚತುರ್ವಿಂಶತಿವರ್ಣಾನಾಂ ಶಕ್ತಯಸ್ಸಮುದಾಹೃತಾಃ ।**
**ಅತಃಪರಂ ವರ್ಣವರ್ಣಾನ್ ವ್ಯಾಹರಾಮಿ ಯಥಾ ತಥಂ ॥೪॥**

**ಚಂಪಕಾ ಅತಸೀಪುಷ್ಪಸನ್ನಿಭಂ ವಿದ್ರುಮಂ ತಥಾ ।**
**ಸ್ಫಟಿಕಾಕಾರಕಂ ಚೈವ ಪದ್ಮಪುಷ್ಪಸಮಪ್ರಭಂ ॥೫॥**

**ತರುಣಾದಿತ್ಯಸಂಕಾಶಂ ಶಂಖಕುಂದೇಂದುಸನ್ನಿಭಂ ।**
**ಪ್ರವಾಲಪದ್ಮಪತ್ರಾಭಂ ಪದ್ಮರಾಗಸಮಪ್ರಭಂ ॥೬॥**

**ಇಂದ್ರನೀಲಮಣಿಪ್ರಖ್ಯಂ ಮೌಕ್ತಿಕಂ ಕುಂಕುಮಪ್ರಭಂ ।**
**ಅಂಜನಾಭಂ ಚ ರಕ್ತಂ ಚ ವೈಡೂರ್ಯಂ ಕ್ಷೌದ್ರಸನ್ನಿಭಂ ॥೭॥**

**ಹಾರಿದ್ರಂ ಕುಂದದುಗ್ಧಾಭಂ ರವಿಕಾಂತಿಸಮಪ್ರಭಂ ।**
**ಶುಕಪುಚ್ಛನಿಭಂ ತದ್ವಚ್ಛತಪತ್ರನಿಭಂ ತಥಾ ॥೮॥**

**ಕೇತಕೀ ಪುಷ್ಪಸಂಕಾಶಂ ಮಲ್ಲಿಕಾಕುಸುಮಪ್ರಭಂ ।**
**ಕರವೀರಶ್ಚ ಇತ್ಯೇತೇ ಕ್ರಮೇಣ ಪರಿಕೀರ್ತಿತಾಃ ॥೯॥**

---

ಇನ್ನು ಇಪ್ಪತ್ತುನಾಲ್ಕು ವರ್ಣಗಳಿಗೂ ಶ್ವೇತಾದಿ ವರ್ಣಗಳನ್ನು ಯಥಾ ರೀತಿಯಾಗಿ ಹೇಳುವೆನು. ॥೪॥

(೧) ಸಂಪಿಗೆಹೂ (೨) ಅಗಸೇಹೂ (೩) ಹವಳ (೪) ಸ್ಫಟಿಕ (೫) ಪದ್ಮ ಪುಷ್ಪಸಮಪ್ರಭಾ (೬) ಬಾಲಸೂರ್ಯಸಮಕಾಂತಿ (೭) ಶಂಖ (೮) (ಚಂದ್ರನ ಕಾಂತಿ ಯಂತೆ ಇರುವ) ಸೂಜಿಮಲ್ಲಿಗೆಯ ಬಿಳುಪು (೯) ರಕ್ತ ಮತ್ತು ಹಸುರುಮಿಶ್ರಬಣ್ಣ (೧೦) ರಕ್ತಪದ್ಮಕಾಂತಿ (೧೧) ಇಂದ್ರನೀಲಕಾಂತಿ (೧೨) ಮೌಕ್ತಿಕಕಾಂತಿ (೧೩) ಕುಂಕುಮ (ಕೇಸರಿಯ) ಕಾಂತಿ (೧೪) ಅಂಜನ (ಕೃಷ್ಣ) ಕಾಂತಿ (೧೫) ಮಧುವಿನಂತಿರುವ ರಕ್ತವೈಡೂರ್ಯ (ಮಿಶ್ರ) ಕಾಂತಿ (೧೬) ಅರಿಸಿನಬಣ್ಣ (೧೭) ಮಲ್ಲಿಗೆ (೧೮) ಹಾಲು ಇವುಗಳಂತಿರುವ ಕಾಂತಿ (೧೯) ಸೂರ್ಯಕಾಂತಿ (೨೦) ಎಲೆ ಹಸುರು, ಗಿಣಿಯ ರೆಕ್ಕೆಯಂತಿರುವ ಬಣ್ಣ (೨೧) ಕಮಲಪತ್ರಸಮಕಾಂತಿ (೨೨) ತಾಳೆಹೂವಿನ ಕಾಂತಿ (೨೩) ಮಲ್ಲಿಗೆಯ ಕಾಂತಿ (೨೪) ದೇವಕಣಗಲೆ ಹೂವಿನ ಬಣ್ಣ. ಈರೀತಿಯಾಗಿ ವರ್ಣಗಳೂ ಹೇಳಲ್ಪಟ್ಟಿವೆ. ॥೫-೬-೭-೮-೯॥

ವರ್ಣಾಃ ಪ್ರೋಕ್ತಾಶ್ಚ ವರ್ಣಾನಾಂ ಮಹಾಪಾಪವಿಶೋಧನಾಃ ।
ಪೃಥಿವ್ಯಾಪಸ್ತಥಾ ತೇಜೋವಾಯುರಾಕಾಶ ಏವ ಚ ॥೧೦॥

ಗಂಧೋ ರಸಶ್ಚ ರೂಪಂ ಚ ಶಬ್ದಸ್ಪರ್ಶಸ್ತಥೈವ ಚ ।
ಉಪಸ್ಥಂ ಪಾಯುಪಾದಂ ಚ ಪಾಣೀ ವಾಗಪಿ ಚ ಕ್ರಮಾತ್ ॥೧೧॥

ಘ್ರಾಣಂ ಜಿಹ್ವಾ ಚ ಚಕ್ಷುಶ್ಚ ತ್ವಕ್‌ಶ್ರೋತ್ರಂ ಚ ತತಃ ಪರಂ ।
ಪ್ರಾಣೋಽಪಾನಸ್ತಥಾ ವ್ಯಾನಃ ಸಮಾನಶ್ಚ ತತಃಪರಂ ॥೧೨॥

ತತ್ವಾನ್ಯೇತಾನಿ ವರ್ಣಾನಾಂ ಕ್ರಮಶಃ ಕೀರ್ತಿತಾನಿ ತು ।
ಅತಃ ಪರಂ ಪ್ರವಕ್ಷ್ಯಾಮಿ ವರ್ಣಮುದ್ರಾಃ ಕನೋಣ ತು ॥೧೩॥

ಸುಮುಖಂ ಸಂಪುಟಂಚೈವ ವಿತತಂ ವಿಸ್ತೃತಂ ತಥಾ ।
ದ್ವಿಮುಖಂ ತ್ರಿಮುಖಂ ಚೈವ ಚತುಃ ಪಂಚಮುಖಂ ತಥಾ ॥೧೪॥

ಷಣ್ಮುಖಾಧೋಮುಖಂ ಚೈವ ವ್ಯಾಪಕಾಂಜಲಿಕಂ ತಥಾ ।
ಶಕಟಂ ಯಮಪಾಶಂ ಚ ಗ್ರಥಿತಂ ಸಂಮುಖೋನ್ಮುಖಂ ॥೧೫॥

---

ಮಹಾಪಾಪನಿವಾರಕಗಳಾದ ವರ್ಣಗಳ ಬಣ್ಣಗಳನ್ನು ತಿಳಿಸಿದ ಮೇಲೆ (೧) ಪೃಥಿವೀ (೨) ಆಪಃ (ನೀರು) (೩) ತೇಜಃ (ಅಗ್ನಿ) (೪) ವಾಯು (೫) ಆಕಾಶ (೬) ಗಂಧ (೭) ರಸ (೮) ರೂಪ (೯) ಶಬ್ದ (೧೦) ಸ್ಪರ್ಶ (೧೧) ಉಪಸ್ಥ (೧೨) ಪಾಯು (೧೩) ಪಾದಗಳು (೧೪) ಪಾಣಿಗಳು (೧೫) ವಾಕ್ (ಮಾತು) (೧೬) ಘ್ರಾಣ (೧೭) ನಾಲಿಗೆ (೧೮) ಕಣ್ಣುಗಳು (೧೯) ಚರ್ಮ (೨೦) ಕಿವಿಗಳು (೨೧) ಪ್ರಾಣ (೨೨) ಅಪಾನ (೨೩) ವ್ಯಾನ (೨೪) ಸಮಾನ, ಎಂದು ಕ್ರಮವಾಗಿ ವರ್ಣತತ್ವಗಳೂ ಸಹ ಹೇಳಲ್ಪಟ್ಟಿವೆ. ಇನ್ನು ಮುಂದೆ ಕ್ರಮವಾಗಿ ವರ್ಣಮುದ್ರೆಗಳನ್ನು ವಿವರಿಸುತ್ತೇನೆ. ॥೧೦-೧೧-೧೨-೧೩॥

(೧) ಸುಮುಖಂ (೨) ಸಂಪುಟಂ (೩) ವಿತತಂ (೪) ವಿಸ್ತೃತಂ (೫) ದ್ವಿಮುಖಂ (೬) ತ್ರಿಮುಖಂ (೭) ಚತುರ್ಮುಖಂ (೮) ಪಂಚಮುಖಂ (೯) ಷಣ್ಮುಖಂ (೧೦) ಅಧೋಮುಖಂ (೧೧) ವ್ಯಾಪಕಾಂಜಲಿಕಂ (೧೨) ಶಕಟಂ (೧೩) ಯಮಪಾಶಂ (೧೪) ಗ್ರಥಿತಂ (೧೫) ಸಂಮುಖೋನ್ಮುಖಂ (೧೬) ವಿಲಂಬಂ

ವಿಲಂಬಂ ಮುಷ್ಟಿಕಂ ಚೈವ ಮತ್ಸ್ಯಂ ಕೂರ್ಮಂ ವರಾಹಕಂ ।
ಸಿಂಹಾಕ್ರಾಂತಂ ಮಹಾಕ್ರಾಂತಂ ಮುದ್ಗರಂ ಪಲ್ಲವಂ ತಥಾ ॥೧೬॥

ತ್ರಿಶೂಲ ಯೋನೀ ಸುರಭಿಶ್ಚಾಕ್ಷಮಾಲಾ ಚ ಲಿಂಗಕಂ ।
ಅಂಬುಜಂ ಚ ಮಹಾಮುದ್ರಾಸ್ತುರ್ಯರೂಪಾಃ ಪ್ರಕೀರ್ತಿತಾಃ ॥೧೭॥

ಇತ್ಯೇತಾಃ ಕೀರ್ತಿತಾ ಮುದ್ರಾ ವರ್ಣಾನಾಂ ತೇ ಮಹಾಮುನೇ ।
ಮಹಾಪಾಪಕ್ಷಯಕರಾಃ ಕೀರ್ತಿದಾಃ ಕಾಂತಿದಾ ಮುನೇ ॥೧೮॥

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ ದ್ವಿತೀಯೋऽಧ್ಯಾಯಃ

---

(೧೭) ಮುಷ್ಟಿಕಂ (೧೮) ಮತ್ಸ್ಯಂ (೧೯) ಕೂರ್ಮಂ (೨೦) ವರಾಹಕಂ (೨೧) ಸಿಂಹಾಕ್ರಾಂತಂ (೨೨) ಮಹಾಕ್ರಾಂತಂ (೨೩) ಮುದ್ಗರಂ (೨೪) ಪಲ್ಲವಂ, ಈ ಇಪ್ಪತ್ತುನಾಲ್ಕು ಮುದ್ರೆಗಳೂ ಕ್ರಮವಾಗಿ ವರ್ಣಗಳಿಗೆ ಹೇಳಲ್ಪಟ್ಟಿವೆ. ಆದರೆ ಗಾಯತ್ರಿಯ ಚತುರ್ಥಚರಣಕ್ಕೆ (೧) ತ್ರಿಶೂಲ (೨) ಯೋನಿ ಸುರಭಿ (೩) ಅಕ್ಷ ಮಾಲಾ (೪) ಲಿಂಗಕಂ (೫) ಅಂಬುಜಂ (೬) ಮಹಾಮುದ್ರಾ, ಎಂಬದಾಗಿ ಮುದ್ರೆಗಳೂ ಹೇಳಲ್ಪಟ್ಟಿವೆ. ಎಲೈ ನಾರದಮಹರ್ಷಿಯೇ, ಮಹಾಪಾಪನಾಶಕರ ಗಳೂ, ಕಾಂತಿದಾಯಕಗಳೂ ಆದ ವರ್ಣಗಳ ಈ ಮುದ್ರೆಗಳೂ ಸಹ ಹೇಳಲ್ಪಟ್ಟಿವೆ. ಜಪಸಮಯದಲ್ಲಿ ಎಲ್ಲ ಋಷಿ, ದೈವತ, ಛಂದಸ್ಸು, ಶಕ್ತಿಗಳು, ತತ್ವಗಳು, ವರ್ಣ ವರ್ಣಗಳೂ ಸಹಹೇಳಲ್ಪಡಬೇಕು. ॥೧೪-೧೫-೧೬-೧೭-೧೮॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ದ್ವಾದಶಸ್ಕಂಧೇ

### ॥ ತೃತೀಯೋಽಧ್ಯಾಯಃ ॥

### ಮೂರನೆಯ ಅಧ್ಯಾಯವು

॥ ನಾರದ ಉವಾಚ ॥

**ಸ್ವಾಮಿನ್ ಸರ್ವಜಗನ್ನಾಥ ಸಂಶಯೋಽಸ್ತಿ ಮಮ ಪ್ರಭೋ ।**
**ಚತುಷ್ಷಷ್ಟಿ ಕಲಾಭಿಜ್ಞ ಪಾತಕಾದ್ಯೋಗವಿದ್ವರ ॥೧॥**

**ಮುಚ್ಯೇತ ಕೇನ ಪುಣ್ಯೇನ ಬ್ರಹ್ಮರೂಪಃ ಕಥಂ ಭವೇತ್ ।**
**ದೇಹಶ್ಚ ದೇವತಾರೂಪೋ ಮಂತ್ರರೂಪೋ ವಿಶೇಷತಃ ॥೨॥**

**ಕರ್ಮ ತಚ್ಛ್ರೋತುಮಿಚ್ಛಾಮಿ ನ್ಯಾಸಂ ಚ ವಿಧಿಪೂರ್ವಕಂ ।**
**ಋಷಿಶ್ಛಂದೋಽಧಿದೈವಂ ಚ ಧ್ಯಾನಂ ಚ ವಿಧಿವತ್ಪ್ರಭೋ ॥೩॥**

---

ಈ ಅಧ್ಯಾಯದ ಇಪ್ಪತ್ತೈದು ಶ್ಲೋಕಗಳಲ್ಲಿ ಪರಾತ್ಪರವೂ, ಮಂಗಳಕಾರಕವೂ ಆದ ಜಗನ್ಮಾತೆಯ ಕವಚವು ಹೇಳಲ್ಪಡುತ್ತದೆ.

ನಾರದರು ಹೇಳಿದರು—ಸರ್ವಲೋಕೈಕನಾಯಕನೂ, ಚತುಷ್ಷಷ್ಟಿ (ಅರವತ್ತುನಾಲ್ಕು) ವಿದ್ಯಾಪರಿಪೂರ್ಣನೂ, ಯೋಗಿಶ್ರೇಷ್ಠನೂ ಆದ ಸ್ವಾಮಿಯೇ, ನನ್ನ ಮನಸ್ಸಿನಲ್ಲಿ ಒಂದು ಸಂದೇಹವು ಉಂಟಾಗಿದೆ. ಅದೇನೆಂದರೆ, ॥೧॥

ಮನುಷ್ಯನು ಯಾವ ಪುಣ್ಯಕಾರ್ಯ ಮಾಡಿದರೆ ಮಹಾಪಾಪದಿಂದ ಬಿಡುಗಡೆ ಹೊಂದುತ್ತಾನೆ? ಬ್ರಹ್ಮರೂಪ (ಬ್ರಾಹ್ಮಣ) ನಾಗುವುದು ಹೇಗೆ? ದೇಹವು ದೇವತಾರೂಪವೇ? ಮಂತ್ರರೂಪವೇ? ಕರ್ಮವು ಯಾವುದು? ವಿಧಿಪೂರ್ವಕವಾದ ಅಂಗನ್ಯಾಸ ಕರನ್ಯಾಸಗಳನ್ನೂ, ಋಷಿ, ಛಂದಸ್ಸು, ದೇವತೆ ಮುಂತಾದುವುಗಳನ್ನೂ

॥ ಶ್ರೀನಾರಾಯಣ ಉವಾಚ ॥

ಅಸ್ತ್ಯೇಕಂ ಪರಮಂ ಗುಹ್ಯಂ ಗಾಯತ್ರೀಕವಚಂ ತಥಾ ।
ಪಠನಾದ್ಧಾರಣಾನ್ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥೪॥

ಸರ್ವಾನ್ಕಾಮಾನವಾಪ್ನೋತಿ ದೇವೀರೂಪಶ್ಚ ಜಾಯತೇ ।
ಗಾಯತ್ರೀ ಕವಚಸ್ಯಾಸ್ಯ ಬ್ರಹ್ಮವಿಷ್ಣುಮಹೇಶ್ವರಾಃ ॥೫॥

ಋಷಯೋ ಋಗ್ಯಜುಸ್ಸಾಮಾಥರ್ವಶ್ಛಂದಾಂಸಿ ನಾರದ ।
ಬ್ರಹ್ಮರೂಪಾ ದೇವತೋಕ್ತಾ ಗಾಯತ್ರೀ ಪರಮಾ ಕಲಾ ॥೬॥

ತದ್ಬೀಜಂ ಭರ್ಗ ಇತ್ಯೇಷಾ ಶಕ್ತಿರುಕ್ತಾ ಮನೀಷಿಭಿಃ ।
ಕೀಲಕಂ ಚ ಧಿಯಃ ಪ್ರೋಕ್ತಂ ಮೋಕ್ಷಾರ್ಥೇ ವಿನಿಯೋಜನಂ ॥೭॥

ಚತುರ್ಭಿರ್ಹೃದಯಂ ಪ್ರೋಕ್ತಂ ತ್ರಿಭಿರ್ವರ್ಣೈಶ್ಶಿರಸ್ಸ್ಮೃತಂ ।
ಚತುರ್ಭಿಃ ಸ್ಯಾಚ್ಛಿಖಾ ಪಶ್ಚಾತ್ ತ್ರಿಭಿಸ್ತು ಕವಚಂ ಸ್ಮೃತಂ ॥೮॥

---

ವಿಧಿವತ್ತಾಗಿ ಅನುಗ್ರಹಿಸಿ, ನನಗೆ ಉಂಟಾಗಿರುವ ಸಂಶಯವನ್ನು ಪರಿಹರಿಸಬೇಕು. ಎಂದು ಪ್ರಾರ್ಥಿಸಲು, ॥೨-೩॥

✓ ಶ್ರೀಮನ್ನಾರಾಯಣನು ಹೇಳಿದನು — ಪರಮಗೋಪ್ಯವಾದ ಗಾಯತ್ರೀ ಕವಚದ ಪಠನ ಧಾರಣೆಗಳಿಂದ ಮನುಷ್ಯನು ಸರ್ವಪಾಪಗಳಿಂದಲೂ ಬಿಡಲ್ಪಡುತ್ತಾನೆ. ॥೪॥

ಸಮಸ್ತ ಇಷ್ಟಾರ್ಥಗಳನ್ನು ಪಡೆಯುವುದೇ ಅಲ್ಲದೆ ಸಾಕ್ಷಾದ್ದೇವೀಸ್ವರೂಪನೂ ಆಗುತ್ತಾನೆ.

ಈ ಗಾಯತ್ರೀಕವಚಕ್ಕೆ ಋಷಿಗಳು ಬ್ರಹ್ಮಾ, ವಿಷ್ಣು ಮಹೇಶ್ವರರು. ಛಂದಸ್ಸು ಋಗ್ಯಜುಸ್ಸಾಮ ಅಥರ್ವಗಳು. ದೇವತೆಯು ಬ್ರಹ್ಮರೂಪಳಾದ, ಪರಮಕಲಾರೂಪಳಾದ ಗಾಯತ್ರಿಯೇ. ತತ್ ಎಂಬುದು ಬೀಜವು, ಭರ್ಗಃ ಎಂಬುದೇ ಶಕ್ತಿಯು, ಧಿಯಃ ಎಂಬುದು ಕೀಲಕವು, ಅದರ ವಿನಿಯೋಗವು ಮೋಕ್ಷಾರ್ಥದಲ್ಲಿ, ಎಂದು ಜ್ಞಾನಿಗಳು ಹೇಳುತ್ತಾರೆ. ॥೫-೬-೭॥

ಮೊದಲನೆಯ ನಾಲ್ಕು ಅಕ್ಷರಗಳಿಂದ ಹೃದಯವೂ, ಮುಂದಿನ ಮೂರು ಅಕ್ಷರಗಳಿಂದ ಶಿರಸ್ಸೂ, ಮತ್ತೆ ನಾಲ್ಕು ಅಕ್ಷರಗಳಿಂದ ಶಿಖೆಯೂ, ಮುಂದಿನ

**ಚತುರ್ಭಿರ್ನೇತ್ರ ಮುದ್ದಿಷ್ಟಂ ಚತುರ್ಭಿಸ್ಸ್ಯಾತ್ತದಸ್ತ್ರಕಂ ।**
**ಅಥ ಧ್ಯಾನಂ ಪ್ರವಕ್ಷ್ಯಾಮಿ ಸಾಧಕಾಭೀಷ್ಟದಾಯಕಂ ॥೯॥**

**ಮುಕ್ತಾವಿದ್ರುಮ ಹೇಮನೀಲಧವಲಚ್ಛಾಯೈರ್ಮುಖೈಸ್ತ್ರೀಕ್ಷಣೈಃ ।**
**ಯುಕ್ತಾ ಮಿಂದುನಿಬದ್ಧರತ್ನಮಕುಟಾಂ ತತ್ತ್ವಾರ್ಥವರ್ಣಾತ್ಮಿಕಾಂ ।**
**ಗಾಯತ್ರೀಂ ವರದಾಭಯಾಂಕುಶಕಶಾಃ ಶುಭ್ರಂ ಕಪಾಲಂ ಗುಣಂ ।**
**ಶಂಖಂಚಕ್ರಮಥಾರವಿಂದ ಯುಗಲಂ ಹಸ್ತೈರ್ವಹಂತೀಂ ಭಜೇ ॥೧೦॥**

**ಗಾಯತ್ರೀ ಪೂರ್ವತಃ ಪಾತು ಸಾವಿತ್ರೀ ಪಾತು ದಕ್ಷಿಣೇ ।**
**ಬ್ರಹ್ಮಸಂಧ್ಯಾ ತು ಮೇ ಪಶ್ಚಾದುತ್ತರಾಯಾಂ ಸರಸ್ವತೀ ॥೧೧॥**

---

ಮೂರು ಅಕ್ಷರಗಳಿಂದ ಕವಚವೂ, ಮತ್ತೆ ನಾಲ್ಕು ಅಕ್ಷರಗಳಿಂದ ನೇತ್ರವೂ, ಅನಂತರದ ನಾಲ್ಕು ಅಕ್ಷರಗಳಿಂದ ಅಸ್ತ್ರವೂ ಸಹ ಹೇಳಲ್ಪಟ್ಟಿರುತ್ತದೆ. ॥೮॥

ಎಲೈ ನಾರದನೇ, ಅನಂತರದಲ್ಲಿ ಸಾಧಕರ ಇಷ್ಟಾರ್ಥವನ್ನು ನೆರವೇರಿಸುವ ಧ್ಯಾನವನ್ನು ಹೇಳುತ್ತೇನೆ. ಕೇಳು. ॥೯॥

ಪ್ರತಿಯೊಂದರಲ್ಲಿಯೂ ಮೂರುಮೂರರಂತೆ ಕಣ್ಣುಗಳಿಂದ ಕೂಡಿದ ಮುಕ್ತಾ (ಮುತ್ತು), ವಿದ್ರುಮ (ಹವಳ), ಹೇಮ (ಚಿನ್ನ), ನೀಲ (ಇಂದ್ರನೀಲ ಮಣಿ), ಧವಳ (ಬಿಳುಪು), ಇವುಗಳ ಕಾಂತಿಗಳಿಂದ ಕೂಡಿರುವ ಐದು ಮುಖಗಳುಳ್ಳವಳೂ, ಚಂದ್ರಶೇಖರಳೂ, ತತ್ಸವಿತುರಿತ್ಯಾದಿ ಇಪ್ಪತ್ತುನಾಲ್ಕು ವರ್ಣಗಳ ತತ್ತ್ವಾರ್ಥದಿಂದ ಕೂಡಿರತಕ್ಕವಳೂ, ದಕ್ಷಿಣಾದಿ ಊರ್ಧ್ವಹಸ್ತಗಳೆರಡರಲ್ಲಿ ಎರಡು ಕಮಲಗಳನ್ನೂ, ಅದರ ಕೆಳಗಿನ ಎರಡು ಕೈಗಳಲ್ಲಿ ಶಂಖಚಕ್ರಗಳೆರಡನ್ನೂ, ಅದರ ಕೆಳಗಿನ ಎರಡು ಕೈಗಳಲ್ಲಿ ರಜ್ಜು ಕಪಾಲಗಳೆರಡನ್ನೂ, ಅದರ ಕೆಳಗಿನ ಎರಡು ಕೈಗಳಲ್ಲಿ ಪಾಶ ಅಂಕುಶಗಳೆರಡನ್ನೂ, ಅದರ ಕೆಳಗಿನ ಎರಡು ಕೈಗಳಲ್ಲಿ ಅಭಯ ವರದಗಳೆರಡನ್ನೂ ಧರಿಸಿರುವ (ಒಟ್ಟು ಹತ್ತು ಕೈಗಳಿಂದ ಕೂಡಿರುವ) ಗಾಯತ್ರೀ ದೇವಿಯನ್ನು (ಭಜಿಸುತ್ತೇನೆ) ಧ್ಯಾನಮಾಡುತ್ತೇನೆ. ॥೧೦॥

ಪೂರ್ವದಲ್ಲಿ ಗಾಯತ್ರಿಯೂ, ದಕ್ಷಿಣದಲ್ಲಿ ಸಾವಿತ್ರಿಯೂ, ಪಶ್ಚಿಮದಲ್ಲಿ ಬ್ರಾಹ್ಮಣರಿಂದ ಆರಾಧಿಸಲ್ಪಡುವ ಸಂಧ್ಯೆಯೂ, ಉತ್ತರದಲ್ಲಿ ಸರಸ್ವತಿಯೂ ನನ್ನನ್ನು ಕಾಪಾಡಲಿ. ॥೧೧॥

ಪಾರ್ವತೀ ಮೇ ದಿಶಂ ರಕ್ಷೇತ್ಪಾವಕೀ ಜಲಶಾಯಿನೀ ।
ಯಾತು ಧಾನೀ ದಿಶಂ ರಕ್ಷೇದ್ಯಾತುಧಾನ ಭಯಂಕರೀ ॥೧೨॥

ಪಾವಮಾನೀ ದಿಶಂ ರಕ್ಷೇತ್ಪವಮಾನವಿಲಾಸಿನೀ ।
ದಿಶಂ ರೌದ್ರೀಂ ಚ ಮೇ ಪಾತು ರುದ್ರಾಣೀ ರುದ್ರರೂಪಿಣೀ ॥೧೩॥

ಊರ್ಧ್ವಂ ಬ್ರಹ್ಮಾಣೀ ಮೇ ರಕ್ಷೇದಧಸ್ತಾದ್ವೈಷ್ಣವೀ ತಥಾ ।
ಏವಂ ದಶ ದಿಶೋ ರಕ್ಷೇತ್ಸರ್ವಾಂಗಂ ಭುವನೇಶ್ವರೀ ॥೧೪॥

ತತ್ಪದಂ ಪಾತು ಮೇ ಪಾದೌ ಜಂಘೇ ಮೇ ಸವಿತುಃ ಪದಂ ।
ವರೇಣ್ಯಂ ಕಟಿದೇಶಂ ತು ನಾಭಿಂ ಭರ್ಗಸ್ತಥೈವ ಚ ॥೧೫॥

ದೇವಸ್ಯ ಮೇ ತದ್ಧೃದಯಂ ಧೀಮಹೀತಿ ಚ ಗಲ್ಲಯೋಃ ।
ಧಿಯಃ ಪದಂ ಚ ಮೇ ನೇತ್ರೇ ಯಃ ಪದಂ ಮೇ ಲಲಾಟಕಂ ॥೧೬॥

---

ಆಗ್ನೇಯದಲ್ಲಿ (ಜಲಸ್ಥಳಾದ) ಪಾರ್ವತಿಯೂ, ರಾಕ್ಷಸರಿಗೆ ಭಯಂಕರಳಾದ ಯಾತುಧಾನಿಯು ನೈಋತ್ಯದಲ್ಲಿಯೂ ಕಾಪಾಡಲಿ. ||೧೨||

ಪವಮಾನವಿಲಾಸಿನಿಯಾದ ಪಾವಮಾನಿಯು ವಾಯವ್ಯದಲ್ಲಿಯೂ, ಧರ್ಮ ತ್ಯಾಗಿಗಳಿಗೆ ಭಯಂಕರರೂಪಿಣಿಯಾದ ರುದ್ರಾಣಿಯು ಈಶಾನ್ಯದಲ್ಲಿಯೂ ಕಾಪಾಡಲಿ. ||೧೩||

ಊರ್ಧ್ವಭಾಗದಲ್ಲಿ ಬ್ರಹ್ಮಾಣಿಯೂ, ಅಧೋಭಾಗದಲ್ಲಿ ವೈಷ್ಣವಿಯೂ, ರಕ್ಷಿಸಲಿ. ಈ ರೀತಿಯಾಗಿ ಸರ್ವಾಂಗಗಳಲ್ಲಿ ಭುವನೇಶ್ವರಿಯೂ ರಕ್ಷಿಸಲಿ. ||೧೪||

"ತತ್" ಎಂಬ ಪದವು (ನನ್ನ) ಕಾಲುಗಳನ್ನೂ, "ಸವಿತುಃ" ಎಂಬ ಪದವು ಜಂಘೆಯನ್ನೂ, "ವರೇಣ್ಯಂ" ಎಂಬ ಪದವು ಕಟಿದೇಶವನ್ನೂ "ಭರ್ಗಃ" ಎಂಬ ಪದವು ನನ್ನ ನಾಭಿಯನ್ನೂ ರಕ್ಷಿಸಲಿ. ||೧೫||

'ದೇವಸ್ಯ' ಎಂಬ ಪದವು ಹೃದಯವನ್ನೂ, 'ಧೀಮಹಿ' ಎಂಬ ಪದವು ಗಲ್ಲಗಳನ್ನೂ 'ಧಿಯಃ' ಎಂಬ ಪದವು ನೇತ್ರಗಳನ್ನೂ, 'ಯಃ' ಎಂಬ ಪದವು ನನ್ನ ಲಲಾಟವನ್ನೂ, ||೧೬||

ನಃ ಪಾತು ಮೇ ಪದಂ ಮೂರ್ಧ್ನಿ ಶಿಖಾಯಾಂ ಮೇ ಪ್ರಚೋದಯಾತ್ ।
ತತ್ಪದಂ ಪಾತು ಮೂರ್ಧಾನಂ ಸಕಾರಃ ಪಾತು ಭಾಲಕಂ ॥೧೭॥

ಚಕ್ಷುಷೀ ತು ವಿಕಾರಾರ್ಣೋ ತುಕಾರಸ್ತು ಕಪೋಲಯೋಃ ।
ನಾಸಾ ಪುಟಂ ವಕಾರಾರ್ಣೋ ರೇಕಾರಸ್ತು ಮುಖೇ ತಥಾ ॥೧೮॥

ಣಿಕಾರ ಊರ್ಧ್ವಮೋಷ್ಠಂ ತು ಯಕಾರಸ್ತ್ವಧರೋಷ್ಠಕಂ ।
ಆಸ್ಯಮಧ್ಯೇ ಭಕಾರಾರ್ಣೋ ಗೋಕಾರಶ್ಚುಬುಕೇ ತಥಾ ॥೧೯॥

ದೇಕಾರಃ ಕಂಠದೇಶೇ ತು ವಕಾರಃ ಸ್ಕಂಧದೇಶಕಂ ।
ಸ್ಯಕಾರೋ ದಕ್ಷಿಣಂ ಹಸ್ತಂ ಧೀಕಾರೋ ವಾಮಹಸ್ತಕಂ ॥೨೦॥

ಮಕಾರೋ ಹೃದಯಂ ರಕ್ಷೇದ್ಧಿಕಾರ ಉದರೇ ತಥಾ ।
ಧಿಕಾರೋ ನಾಭಿದೇಶೇ ತು ಯೋಕಾರಸ್ತು ಕಟಿಂ ತಥಾ ॥೨೧॥

---

"ನಃ" ಎಂಬ ಪದವು ಶಿರಸ್ಸ(ತಲೆ)ನ್ನೂ, "ಪ್ರಚೋದಯಾತ್" ಎಂಬ ಪದವು ಶಿಖೆಯನ್ನೂ ರಕ್ಷಿಸಲಿ. "ತತ್" ಎಂಬ ಪದವು ಮೂರ್ಧವ(ಶಿರಸ್ಸ)ನ್ನೂ, ಸಕಾರವು ಫಾಲವನ್ನೂ ರಕ್ಷಿಸಲಿ. ||೧೭||

ವಿಕಾರವು ಕಣ್ಣುಗಳನ್ನೂ, "ತು" ಕಾರವು ಕಪೋಲ (ಕೆನ್ನೆ) ಗಳನ್ನೂ, "ವ"ಕಾರವು ನಾಸಿಕವನ್ನೂ, "ರೇ"ಕಾರವು ಮುಖವನ್ನೂ ರಕ್ಷಿಸಲಿ. ||೧೮||

"ಣಿ"ಕಾರವು ಊರ್ಧ್ವೋಷ್ಠವನ್ನೂ (ಮೇಲಿನ ತುಟಿಯನ್ನೂ), "ಯ" ಕಾರವು ಅಧರೋಷ್ಠವನ್ನೂ (ಕೆಳಗಿನ ತುಟಿಯನ್ನೂ), "ಭ"ಕಾರವು ಆಸ್ಯ(ಮುಖ) ಮಧ್ಯಪ್ರದೇಶವನ್ನೂ, "ಗೋ"ಕಾರವು ಚುಬುಕ (ಗಲ್ಲ)ವನ್ನೂ ರಕ್ಷಿಸಲಿ. ||೧೯||

"ದೇ"ಕಾರವು ಕಂಠದೇಶವನ್ನೂ, "ವ"ಕಾರವು ಸ್ಕಂಧನನ್ನೂ, "ಸ್ಯ" ಕಾರವು ಬಲಗೈಯ್ಯನ್ನೂ, "ಧೀ"ಕಾರವು ಎಡಗೈಯನ್ನೂ ರಕ್ಷಿಸಲಿ. ||೨೦||

"ಮ"ಕಾರವು ಹೃದಯವನ್ನೂ, "ಹಿ" ಕಾರವು ಉದರವನ್ನೂ, "ಧಿ" ಕಾರವು ನಾಭಿದೇಶವನ್ನೂ "ಯೋ"ಕಾರವು ಕಟಿದೇಶವನ್ನೂ ರಕ್ಷಿಸಲಿ. ||೨೧||

ಗುಹ್ಯಂ ರಕ್ಷತು ಯೋಕಾರ ಊರೂ ದ್ವೌ ನಃ ಪದಾಕ್ಷರಂ ।
ಪ್ರಕಾರೋ ಜಾನುನೀ ರಕ್ಷೇಚ್ಚೋಕಾರೋ ಜಂಘದೇಶಕಂ ॥೨೨॥

ದಕಾರಂ(ರೋ) ಗುಲ್ಫದೇಶೇ ತು ಯಾಕಾರಃ ಪದಯುಗ್ಮಕಂ ।
ತಕಾರ ವ್ಯಂಜನಂ ಚೈವ ಸರ್ವಾಂಗೇ ಮೇ ಸದಾಽವತು ॥೨೩॥

ಇದಂ ತು ಕವಚಂ ದಿವ್ಯಂ ಬಾಧಾಶತವಿನಾಶನಂ ।
ಚತುಷ್ಷಷ್ಟಿಕಲಾವಿದ್ಯಾದಾಯಕಂ ಮೋಕ್ಷಕಾರಕಂ ॥೨೪॥

ಮುಚ್ಯತೇ ಸರ್ವಪಾಪೇಭ್ಯಃ ಪರಂ ಬ್ರಹ್ಮಾಧಿಗಚ್ಛತಿ ।
ಪಠನಾಚ್ಛ್ರವಣಾದ್ವಾಪಿ ಗೋಸಹಸ್ರಫಲಂ ಲಭೇತ್ ॥೨೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ತೃತೀಯೋಽಧ್ಯಾಯಃ

---

"ಯೋ"ಕಾರವು ಗುಹ್ಯಪ್ರದೇಶವನ್ನೂ, "ನಃ" ಎಂಬ ಅಕ್ಷರವು ಎರಡು ಊರು(ತೊಡೆ)ಗಳನ್ನೂ, "ಪ್ರ"ಕಾರವು ಜಾನುಗಳನ್ನೂ, "ಚೋ"ಕಾರವು ಜಂಘಾ ಪ್ರದೇಶವನ್ನೂ ರಕ್ಷಿಸಲಿ. ॥೨೨॥

"ದ"ಕಾರವು ಗುಲ್ಫದೇಶವನ್ನೂ, "ಯಾ"ಕಾರವು ಪಾದಯುಗ್ಮಗಳನ್ನೂ "ತ್" ಕಾರವು ಸರ್ವಾಂಗಗಳನ್ನೂ ರಕ್ಷಿಸಲಿ. ॥೨೩॥

ಅತ್ಯಂತ ಶ್ರೇಷ್ಠವಾದ ಈ ಗಾಯತ್ರೀಕವಚವು ನಾನಾ ದುಃಖಗಳನ್ನು ನಾಶ ಮಾಡತಕ್ಕದ್ದಾಗಿಯೂ, ಅರವತ್ತುನಾಲ್ಕು ವಿದ್ಯೆಗಳಲ್ಲಿ ನೈಪುಣ್ಯವನ್ನು ಕೊಡತಕ್ಕದ್ದಾಗಿಯೂ, ಮೋಕ್ಷದಾಯಕವಾಗಿಯೂ, ಪಾಪಗಳನ್ನು ಪರಿಹಾರಮಾಡಿ ಪರಬ್ರಹ್ಮ ಪದವಿಯನ್ನು ಹೊಂದಿಸತಕ್ಕದ್ದಾಗಿಯೂ ಇರುತ್ತದೆ. ಇದನ್ನು ಯಾರು ಭಕ್ತಿಯಿಂದ ಪಠಿಸುವರೋ, ಶ್ರವಣಮಾಡುವರೋ, ಅವರೆಲ್ಲರೂ ಸಹಸ್ರ ಗೋದಾನಗಳನ್ನು ಮಾಡಿದಷ್ಟು ಫಲವನ್ನು ಹೊಂದುವುದರಲ್ಲಿ ಯಾವ ವಿಧವಾದ ಸಂಶಯವೂ ಇಲ್ಲ. ॥೨೪-೨೫॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥



# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

॥ ಚತುರ್ಥೋಽಧ್ಯಾಯಃ ॥

### ನಾಲ್ಕನೆಯ ಅಧ್ಯಾಯವು

॥ ನಾರದ ಉವಾಚ ॥

**ಭಗವನ್ ದೇವದೇವೇಶ ಭೂತಭವ್ಯ ಜಗತ್ಪ್ರಭೋ ।**
**ಕವಚಂ ಚ ಶ್ರುತಂ ದಿವ್ಯಂ ಗಾಯತ್ರೀಮಂತ್ರವಿಗ್ರಹಂ ॥೧॥**

**ಅಧುನಾ ಶ್ರೋತುಮಿಚ್ಛಾಮಿ ಗಾಯತ್ರೀಹೃದಯಂ ಪರಂ ।**
**ಯದ್ಧಾರಣಾದ್ಭವೇತ್ಪುಣ್ಯಂ ಗಾಯತ್ರೀ ಜಪತೋಽಖಿಲಂ ॥೨॥**

**ದೇವ್ಯಾಶ್ಚ ಹೃದಯಂ ಪ್ರೋಕ್ತಂ ನಾರದಾಥರ್ವಣೇ ಸ್ಫುಟಂ ।**
**ತದೇವಾಹಂ ಪ್ರವಕ್ಷ್ಯಾಮಿ ರಹಸ್ಯಾತಿರಹಸ್ಯಕಂ ॥೩॥**

---

ಈ ಅಧ್ಯಾಯದಲ್ಲಿ ಜಗನ್ಮಾತೆಯಾದ ಗಾಯತ್ರಿಯ ಪರಮಹೃದಯವನ್ನು ಅಥರ್ವಣವೇದೋಕ್ತಕ್ರಮದಿಂದ ವರ್ಣಿಸುತ್ತಾರೆ.

ನಾರದರು ಕೇಳಿದರು — ಸರ್ವಲೋಕೈಕನಾಯಕನೂ, ತ್ರಿಕಾಲಜ್ಞಾನಸಂಪನ್ನನೂ, ಆದ ಪರಮಾತ್ಮನೇ, ನಿನ್ನಿಂದ ಹೇಳಲ್ಪಟ್ಟ ಗಾಯತ್ರಿಯ ಪರಮ ಕವಚವು ಕೇಳಲ್ಪಟ್ಟಿತು. ॥೧॥

ಯಾವುದರ ಧಾರಣೆಯಿಂದ ಸಮಸ್ತ ವಿಧವಾದ ಪುಣ್ಯವೂ ಉಂಟಾಗುತ್ತದೆಯೋ ಅಂತಹ ಗಾಯತ್ರಿಯ ಪರಮಹೃದಯವನ್ನು ಕೇಳಲಿಚ್ಛಿಸುತ್ತೇನೆ. ॥೨॥

ಎಲೈ ನಾರದನೇ, ಅಥರ್ವಣವೇದದಲ್ಲಿ ಹೇಳಲ್ಪಟ್ಟಿರುವ ಅತ್ಯಂತ ರಹಸ್ಯವಾದ ದೇವಿಯ ಹೃದಯವನ್ನು ನಿನಗೆ ಹೇಳುತ್ತೇನೆ. ಕೇಳು. ॥೩॥

ರವಿಾಡ್ರೂಪಾಂ ಮಹಾದೇವೀಂ ಗಾಯತ್ರೀಂ ವೇದಮಾತರಂ ।
ಧ್ಯಾತ್ವಾ ತಸ್ಯಾಸ್ತ್ವಥಾಂಗೇಷು ಧ್ಯಾಯೇದೇತಾಶ್ಚ ದೇವತಾಃ ॥೪॥

ಪಿಂಡಬ್ರಹ್ಮಾಂಡಯೋರೈಕ್ಯಾದ್ಭಾವಯೇತ್ಸ್ವತನೌ ತಥಾ ।
ದೇವೀರೂಪೇ ನಿಜೇ ದೇಹೇ ತನ್ಮಯತ್ವಾಯ ಸಾಧಕಃ ॥೫॥

ನಾದೇವೋಽಭ್ಯರ್ಚಯೇದ್ದೇವಮಿತಿ ವೇದವಿದೋ ವಿದುಃ ।
ತತೋಽಭೇದಾಯ ಕಾಯೇ ಸ್ವೇ ಭಾವಯೇದ್ದೇವತಾ ಇಮಾಃ ॥೬॥

ಅಥ ತತ್ಸಂಪ್ರವಕ್ಷ್ಯಾಮಿ ತನ್ಮಯತ್ವಮಥೋ ಭವೇತ್ ।
ಗಾಯತ್ರೀ ಹೃದಯಸ್ಯಾಸ್ಯಾಪ್ಯಹಮೇವ ಋಷಿಃ ಸ್ಮೃತಃ ॥೭॥

ಗಾಯತ್ರೀ ಛಂದ ಉದ್ದಿಷ್ಟಂ ದೇವತಾ ಪರಮೇಶ್ವರೀ ।
ಪೂರ್ವೋಕ್ತೇನ ಪ್ರಕಾರೇಣ ಕುರ್ಯಾದಂಗಾನಿ ಷಟ್ಕ್ರಮಾತ್ ॥೮॥

---

ವಿರಾಡ್ರೂಪಳೂ, ಮಹಾದೇವಿಯೂ, ದೇವಮಾತೆಯೂ ಆದ ಗಾಯತ್ರಿಯನ್ನು ಧ್ಯಾನಿಸಿ, ಅವಳ ಅಂಗಸ್ಥಾನೀಯಗಳಾದ ಈ ದೇವತೆಗಳನ್ನೂ ಧ್ಯಾನಮಾಡಬೇಕು. ॥೪॥

ಪಿಂಡ ಎಂದರೆ ಈ ನಮ್ಮ ದೇಹ, ಮತ್ತು ಬ್ರಹ್ಮಾಂಡಗಳಿಗೆ ಐಕ್ಯವು ಕಾಣಬರುವುದರಿಂದ ಉಪಾಸಕನು ತನ್ನ ದೇಹವನ್ನೂ ಗಾಯತ್ರೀದೇವಿಯ ಸ್ವರೂಪವೆಂದೇ ಭಾವಿಸಿ, ಆ ದೇವೀರೂಪವಾದ ದೇಹದಲ್ಲಿ ತನ್ಮಯತ್ವವನ್ನು ಪಡೆಯಲು ಸಾಧಕನು ಪ್ರಯತ್ನಿಸಬೇಕು. ॥೫॥

ತನ್ನಲ್ಲಿ ದೇವಭಾವವನ್ನು ಮನಗಾಣಲಾರದವನು ದೇವರನ್ನು ಪೂಜಿಸಲಾರನು. ಎಂದು ವೇದವೇತ್ತರು ಹೇಳುತ್ತಾರೆ. ಆದ್ದರಿಂದ ಅಭೇದ ಕಲ್ಪನೆಗಾಗಿಯೇ ತನ್ನ ದೇಹದಲ್ಲಿ ಈ ದೇವತೆಗಳನ್ನು ಭಾವಿಸಬೇಕು. ॥೬॥

ಆ ತನ್ಮಯತ್ವವು ಹೇಗಾಗುತ್ತದೆ? ಎಂಬ ವಿಷಯವನ್ನು ಹೇಳುತ್ತೇನೆ. ಹೇಗೆಂದರೆ, ಈ ಗಾಯತ್ರೀ ಹೃದಯಕ್ಕೆ ನಾನೇ (ನಾರಾಯಣನೇ) ಋಷಿಯು. ॥೭॥

(ಪರಮೇಶ್ವರೀ ಶ್ರೀಗಾಯತ್ರೀ ದೇವತೆಯೇ ಛಂದಸ್ಸು) ಗಾಯತ್ರೀಛಂದಸ್ಸು ಪೂರ್ವೋಕ್ತರೀತಿಯಿಂದ ಆ ಷಡಂಗನ್ಯಾಸಾದಿಗಳನ್ನು ಕ್ರಮವಾಗಿ ಮಾಡಬೇಕು.॥೮॥

**ಆಸನೇ ವಿಜನೇದೇಶೇ ಧ್ಯಾಯೇದೇಕಾಗ್ರಮಾನಸಃ ।**

**ದ್ಯೌಃ ಮೂರ್ಧ್ನಿ ದೇವತಂ; ದಂತಪಂಕ್ತಾವಶ್ವಿನೌ; ಉಭೇ ಸಂಧ್ಯೇ ಚೋಷ್ಠೌ; ಮುಖಮಗ್ನಿಃ; ಜಿಹ್ವಾ ಸರಸ್ವತೀ; ಗ್ರೀವಾಯಾಂ ತು ಬೃಹಸ್ಪತಿಃ; ಸ್ತನಯೋರ್ವಸವೋಽಷ್ಟೌ; ಬಾಹ್ವೋಃ ಮರುತಃ; ಹೃದಯೇ ಪರ್ಜನ್ಯಃ; ಆಕಾಶಮುದರಂ; ನಾಭಾವಂತರಿಕ್ಷಂ; ಕಟ್ಯೋರಿಂದ್ರಾಗ್ನೀ;**

**ಜಘನೇ ವಿಜ್ಞಾನಘನಃ ಪ್ರಜಾಪತಿಃ; ಕೈಲಾಸಮಲಯೇ ಊರೂ; ವಿಶ್ವೇದೇವಾ ಜಾನ್ವೋಃ; ಜಂಘಾಯಾಂ ಕೌಶಿಕಃ; ಗುಹ್ಯಮಯನೇ; ಊರೂ ಪಿತರಃ; ಪಾದೌ ಪೃಥಿವೀ; ವನಸ್ಪತಯೋಽಂಗುಲೀಷು; ಋಷಯೋ ರೋಮಾಣಿ; ನಖಾನಿ ಮುಹೂರ್ತಾನಿ; ಅಸ್ಥಿಷು ಗ್ರಹಾಃ;**

---

ವಿಜನವಾದ ಪ್ರದೇಶದಲ್ಲಿ ಆಸನವನ್ನು ಕಲ್ಪಿಸಿಕೊಂಡು ಏಕಾಗ್ರಚಿತ್ತದಿಂದ ದೇವಿಯನ್ನು ಧ್ಯಾನಮಾಡಬೇಕು.

ಅಥಾರ್ಥನ್ಯಾಸಃ—

ಶಿರಸ್ಸಿನಲ್ಲಿ ಆಕಾಶವನ್ನು ದೇವತೆಯೆಂದು ಭಾವಿಸಬೇಕು; ದಂತಪಂಕ್ತಿಯ (ಹಲ್ಲುಗಳ ಸಾಲಿನ)ಲ್ಲಿ ಅಶ್ವಿನೀದೇವತೆಗಳನ್ನು ಭಾವಿಸಬೇಕು; ತುಟಿಗಳೆರಡರಲ್ಲಿ ಎರಡು ಸಂಧ್ಯೆಗಳನ್ನು ಭಾವಿಸಬೇಕು: ಮುಖದಲ್ಲಿ ಅಗ್ನಿಯನ್ನು ಭಾವಿಸಬೇಕು; ನಾಲಿಗೆಯಲ್ಲಿ ಸರಸ್ವತಿಯನ್ನು ಭಾವಿಸಬೇಕು; ಕಂಠದಲ್ಲಿ ಬೃಹಸ್ಪತಿಯನ್ನು ಭಾವಿಸಬೇಕು; ಸ್ತನದ್ವಯದಲ್ಲಿ ಅಷ್ಟವಸುಗಳನ್ನು ಭಾವಿಸಬೇಕು; ಬಾಹುಗಳಲ್ಲಿ ಮರುತ್ತುಗಳನ್ನು ಭಾವಿಸಬೇಕು; ಹೃದಯದಲ್ಲಿ ಪರ್ಜನ್ಯನನ್ನು ಭಾವಿಸಬೇಕು; ಉದರದಲ್ಲಿ ಆಕಾಶವನ್ನು ಭಾವಿಸಬೇಕು; ನಾಭಿಯಲ್ಲಿ ಅಂತರಿಕ್ಷವನ್ನು ಭಾವಿಸಬೇಕು; ಕಟಿಪ್ರದೇಶಗಳಲ್ಲಿ ಇಂದ್ರಾಗ್ನಿಗಳನ್ನು ಭಾವಿಸಬೇಕು;

ಜಾನುಗಳಲ್ಲಿ ವಿಶ್ವೇದೇವತೆಗಳನ್ನು ಭಾವಿಸಬೇಕು; ಜಂಘೆಯಲ್ಲಿ ಕೌಶಿಕನನ್ನು ಭಾವಿಸಬೇಕು; ಗುಹ್ಯದಲ್ಲಿ (ಉತ್ತರ-ದಕ್ಷಿಣ) ಅಯನದ್ವಯವನ್ನು ಭಾವಿಸಬೇಕು; ಊರುಗಳಲ್ಲಿ ಪಿತೃದೇವತೆಗಳನ್ನು ಭಾವಿಸಬೇಕು; ಪಾದಗಳಲ್ಲಿ ಪೃಥಿವಿಯನ್ನು ಭಾವಿಸಬೇಕು. ಅಂಗುಲಿಗಳಲ್ಲಿ ವನಸ್ಪತಿಗಳನ್ನು ಭಾವಿಸಬೇಕು; ಕೂದಲುಗಳಲ್ಲಿ ಋಷಿಗಳನ್ನು ಭಾವಿಸಬೇಕು; ಉಗುರುಗಳಲ್ಲಿ ಮುಹೂರ್ತಗಳನ್ನು ಭಾವಿಸಬೇಕು; ಅಸ್ಥಿಗಳಲ್ಲಿ ಗ್ರಹಗಳನ್ನು ಭಾವಿಸಬೇಕು;

ಅಸೃಙ್ಮಾಂಸಂ ಋತವಃ ; ಸಂವತ್ಸರಾ ವೈ ನಿಮಿಷಂ ; ಅಹೋರಾತ್ರಾ ವಾದಿತ್ಯಶ್ಚಂದ್ರಮಾಃ ;

ಪ್ರವರಾಂ ದಿವ್ಯಾಂ ಗಾಯತ್ರೀಂ ಸಹಸ್ರನೇತ್ರಾಂ ಶರಣಮಹಂ ಪ್ರಪದ್ಯೇ ।

ಓಂ ತತ್ಸವಿತುರ್ವರೇಣ್ಯಾಯ ನಮಃ ; ಓಂ ತತ್ಪೂರ್ವಜಾಯ ನಮಃ; ತತ್ಪ್ರಾತರಾದಿತ್ಯಾಯ ನಮಃ ; ತತ್ಪ್ರಾತರಾದಿತ್ಯ ಪ್ರತಿಷ್ಠಾಯೈ ನಮಃ ;

ಪ್ರಾತರಧೀಯಾನೋ ರಾತ್ರಿಕೃತಂ ಪಾಪಂ ನಾಶಯತಿ ।
ಸಾಯಮಧೀಯಾನೋ ದಿವಸಕೃತಂ ಪಾಪಂ ನಾಶಯತಿ ।

ಸಾಯಂಪ್ರಾತರಧೀಯಾನೋ ಅಪಾಪೋ ಭವತಿ ; ಸರ್ವತೀರ್ಥೇಷು ಸ್ನಾತೋ ಭವತಿ ;

---

ರಕ್ತಮಾಂಸಗಳಲ್ಲಿ ಋತುಗಳನ್ನು ಭಾವಿಸಬೇಕು ; ಸಂವತ್ಸರಗಳನ್ನು ನಿಮಿಷ ಗಳಾಗಿ ಭಾವಿಸಬೇಕು ; ಹಗಲು ರಾತ್ರಿಗಳಲ್ಲಿ ಸೂರ್ಯಚಂದ್ರರನ್ನು ಭಾವಿಸಬೇಕು ;

ಸಹಸ್ರ ನೇತ್ರಗಳುಳ್ಳವಳೂ, ಆದಿಮಾತೆಯೂ, ಶ್ರೇಷ್ಠಳೂ ಆದ ಗಾಯತ್ರಿ ಯನ್ನು ನಾನು ಶರಣುಹೊಂದುತ್ತೇನೆ. ಎಂದು ಧ್ಯಾನಿಸಬೇಕು.

ಶ್ರೇಷ್ಠವಾದ ಸೂರ್ಯತೇಜಸ್ಸಿಗೆ ನಮಸ್ಕಾರವು ; ಪೂರ್ವದಿಕ್ಕಿನಲ್ಲಿ ಹುಟ್ಟಿದ ತೇಜಸ್ಸಿಗೆ ನಮಸ್ಕಾರವು ; ಪ್ರಾತಃಕಾಲದ ಸೂರ್ಯನಿಗೆ ನಮಸ್ಕಾರವು; ಪ್ರಾತಃಕಾಲದ ಆದಿತ್ಯಮಂಡಲದಲ್ಲಿರುವ ಗಾಯತ್ರಿಗೆ ನಮಸ್ಕಾರವು. ಎಂದು ಪೂಜಿಸಬೇಕು. ಇಷ್ಟು ಸಂಗತಿಗಳನ್ನು ಹೇಳಿ ಇನ್ನುಮುಂದೆ ಫಲಶ್ರುತಿಯನ್ನು ಹೇಳುತ್ತಾರೆ.

ಗಾಯತ್ರಿಯನ್ನು ಪ್ರಾತಃಕಾಲದಲ್ಲಿ ಪಠಿಸುವವನು ರಾತ್ರಿಕಾಲದಲ್ಲಿ ತಾನು ಮಾಡಿದ ಪಾಪವನ್ನು ಪರಿಹಾರಮಾಡಿಕೊಳ್ಳುತ್ತಾನೆ.

ಸಾಯಂಕಾಲದಲ್ಲಿ ಪಠಿಸುವವನು ಹಗಲು ಮಾಡಿದ ಪಾಪವನ್ನು ಪರಿಹಾರ ಮಾಡಿಕೊಳ್ಳುತ್ತಾನೆ.

ಹಗಲುರಾತ್ರೆಗಳೆರಡುಕಾಲಗಳಲ್ಲಿ ಪಠಿಸುವವನು ಪಾಪರಹಿತನಾಗುತ್ತಾನೆ. ಎಲ್ಲಾ ಪುಣ್ಯತೀರ್ಥಗಳಲ್ಲಿಯೂ ಸ್ನಾನಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾನೆ ;

**ಸರ್ವೈರ್ದೇವೈಃ ಜ್ಞಾತೋ ಭವತಿ ; ಅವಾಚ್ಯವಾಚನಾತ್ಪೂತೋ ಭವತಿ ; ಅಭಕ್ಷ್ಯಭಕ್ಷಣಾತ್ಪೂತೋ ಭವತಿ ; ಅಭೋಜ್ಯಭೋಜನಾತ್ಪೂತೋ ಭವತಿ ;**

**ಅಚೋಷ್ಯಚೋಷಣಾತ್ಪೂತೋ ಭವತಿ ; ಅಸಾಧ್ಯಸಾಧನಾತ್ಪೂತೋ ಭವತಿ ; ದುಷ್ಪ್ರತಿಗ್ರಹ ಶತಸಹಸ್ರಾತ್ಪೂತೋ ಭವತಿ ; ಸರ್ವಪ್ರತಿಗ್ರಹಾತ್ಪೂತೋ ಭವತಿ ; ಪಂಕ್ತಿದೂಷಣಾತ್ಪೂತೋ ಭವತಿ ; ಅನೃತವಚನಾತ್ಪೂತೋ ಭವತಿ ; ಅಥಾಽಬ್ರಹ್ಮಚಾರೀ ಬ್ರಹ್ಮಚಾರೀ ಭವತಿ ; ಅನೇನ ಹೃದಯೇನಾಧೀತೇನಕ್ರತುಸಹಸ್ರೇಣೇಷ್ಟಂ ಭವತಿ ; ಷಷ್ಟಿಶತಸಹಸ್ರಾಗಾಯತ್ರ್ಯಾಜಪ್ಯಾನಿ ಫಲಾನಿ ಭವಂತಿ ;**

---

ಎಲ್ಲಾ ದೇವತೆಗಳ ತಿಳಿವಳಿಕೆಗೂ ಬಂದವನಾಗುತ್ತಾನೆ; ಆಡಬಾರದ ಮಾತುಗಳನ್ನಾಡಿದ್ದರೆ ಗಾಯತ್ರಿಯ ಪಠನದಿಂದ ಪರಿಶುದ್ಧನಾಗುತ್ತಾನೆ ; ತಿನ್ನಬಾರದ ಪದಾರ್ಥಗಳನ್ನು ತಿಂದಿದ್ದರೆ (ಗಾಯತ್ರಿಯ ಪಠನದಿಂದ ಪರಿಶುದ್ಧನಾಗುತ್ತಾನೆ); ಊಟ ಮಾಡಬಾರದವರ ಮನೆಯಲ್ಲಿ ಊಟಮಾಡಿದ್ದರೆ ಗಾಯತ್ರಿಯ ಪಠನದಿಂದ ಪರಿಶುದ್ಧನಾಗುತ್ತಾನೆ.

ಸಾಧಿಸಬಾರದ ಕೆಲಸವನ್ನು ಸಾಧಿಸುವುದರಿಂದ ಉಂಟಾದ ದೋಷದಿಂದ ಶುದ್ಧಿಯನ್ನು ಹೊಂದುತ್ತಾನೆ; ಅನೇಕ ದುರ್ದಾನಗಳನ್ನು ತೆಗೆದುಕೊಂಡಿದ್ದಾಗ್ಯೂ (ಗಾಯತ್ರಿಯ ಪಠನದಿಂದ ಪರಿಶುದ್ಧನಾಗುತ್ತಾನೆ;) ಯಾವ ಎಲ್ಲಾ ತೆಗೆದುಕೊಳ್ಳಬಾರದ ವಸ್ತುಗಳನ್ನು (ದಾನರೂಪವಾಗಿ) ತೆಗೆದುಕೊಂಡಿದ್ದಾಗ್ಯೂ ಪರಿಶುದ್ಧನಾಗುತ್ತಾನೆ; ಪಙ್ಕ್ತಿಯಿಂದ ಹೊರಗೆಡವಲ್ಪಟ್ಟಿದ್ದರೂ (ಗಾಯತ್ರಿಯ ಪಠನದಿಂದ) ಪರಿಶುದ್ಧನಾಗುತ್ತಾನೆ (ಪಙ್ಕ್ತಿಗೆ ಸೇರಲು ಯೋಗ್ಯನಾಗುತ್ತಾನೆ;) ಸುಳ್ಳು ಹೇಳುವವನಾಗಿದ್ದರೂ ಪರಿಶುದ್ಧನಾಗುತ್ತಾನೆ (ಅದರಿಂದ ಬಿಡುಗಡೆ ಹೊಂದುತ್ತಾನೆ;) ಬ್ರಹ್ಮಚಾರಿಯಲ್ಲದಿದ್ದರೂ (ವೇದಬಾಹಿರನಾಗಿದ್ದಾಗ್ಯೂ) ಗಾಯತ್ರಿಯ ಪಠನದಿಂದ ವೇದಾಧ್ಯಯನಯೋಗ್ಯನಾಗುತ್ತಾನೆ; ಈ ಗಾಯತ್ರೀ ಹೃದಯವನ್ನು ಪಠಿಸುವುದರಿಂದ ಅನೇಕ ಯಾಗಗಳನ್ನು ಮಾಡಿದಷ್ಟು ಫಲವನ್ನು ಹೊಂದುತ್ತಾನೆ; ಆರು ಲಕ್ಷ ಗಾಯತ್ರೀಜಪವನ್ನು ಮಾಡಿದಷ್ಟು ಫಲಗಳು ಉಂಟಾಗುತ್ತವೆ ;

ಅಷ್ಟೌ ಬ್ರಾಹ್ಮಣಾನ್ ಸಮ್ಯಗ್ಗ್ರಾಹಯೇತ್ ; ತಸ್ಯ ಸಿದ್ಧಿರ್ಭವತಿ ; ಯ ಇದಂ ನಿತ್ಯಮಧೀಯಾನೋ ಬ್ರಾಹ್ಮಣಃ ಪ್ರಾತಃ ಶುಚಿಃ ಸರ್ವಪಾಪೈಃ ಪ್ರಮುಚ್ಯತ ಇತಿ ; ಬ್ರಹ್ಮಲೋಕೇ ಮಹೀಯತೇ ; ಇತ್ಯಾಹ ಭಗವಾನ್ ಶ್ರೀನಾರಾಯಣಃ ॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಚತುರ್ಥೋಽಧ್ಯಾಯಃ

---

ಹೀಗೆ ಮಾಡುವುದರಿಂದ ಗಾಯತ್ರಿಯ ಸಿದ್ಧಿಯಾಗುತ್ತದೆ; ಯಾವ ಬ್ರಾಹ್ಮಣನು ಶುಚಿರ್ಭೂತನಾಗಿ ಪ್ರಾತಃಕಾಲದಲ್ಲಿ ಪ್ರತಿನಿತ್ಯವೂ ಇದನ್ನು ಪಠಿಸುವನೋ ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. (ಪಾಪ ವಿಮುಕ್ತನಾಗುತ್ತಾನೆ ; ಬ್ರಹ್ಮಲೋಕವಾಸವನ್ನೂ ಸಹ ಪಡೆಯುತ್ತಾನೆ; ಈ ರೀತಿಯಾಗಿ ಸರ್ವಲೋಕಪೂಜ್ಯನಾದ ಶ್ರೀಮನ್ನಾರಾಯಣನು ವಿವರಿಸಿದನು.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

|| ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ನಾರದ ಉವಾಚ ||

**ಭಕ್ತಾನುಕಂಪಿನ್ ಸರ್ವಜ್ಞ ಹೃದಯಂ ಪಾಪನಾಶನಂ ।**
**ಗಾಯತ್ರ್ಯಾಃ ಕಥಿತಂ ತಸ್ಮಾದ್ಗಾಯತ್ರ್ಯಾಃ ಸ್ತೋತ್ರಮೀರಯ ॥೧॥**

|| ಶ್ರೀನಾರಾಯಣ ಉವಾಚ ||

**ಆದಿಶಕ್ತೇ ಜಗನ್ಮಾತರ್ಭಕ್ತಾನುಗ್ರಹಕಾರಿಣಿ ।**
**ಸರ್ವತ್ರ ವ್ಯಾಪಿಕೇಽನಂತೇ ಶ್ರೀ ಸಂಧ್ಯೇ ತೇ ನಮೋಽಸ್ತುತೇ ॥೨॥**

**ತ್ವಮೇವ ಸಂಧ್ಯಾ ಗಾಯತ್ರೀ ಸಾವಿತ್ರೀ ಚ ಸರಸ್ವತೀ ।**
**ಬ್ರಾಹ್ಮೀ ಚ ವೈಷ್ಣವೀ ರೌದ್ರೀ ರಕ್ತಾ ಶ್ವೇತಾ ಸಿತೇತರಾ ॥೩॥**

---

ನಾರದರು ಹೇಳಿದರು.—ಭಕ್ತವತ್ಸಲನೂ, ಸರ್ವಜ್ಞನೂ ಆದ ಓ ಪರಮಾತ್ಮನೇ, ಸಮಸ್ತ ಪಾಪನಾಶಕರವಾದ ಗಾಯತ್ರಿಯ ಹೃದಯವು ಹೇಳಲ್ಪಟ್ಟಿತು. ಈಗ ಗಾಯತ್ರಿಯ ಸ್ತೋತ್ರವನ್ನು ದಯೆಮಾಡಿ ತಿಳಿಸಬೇಕು. ಎಂದು ಪ್ರಾರ್ಥಿಸಲು, ॥೧॥

ಶ್ರೀಮನ್ನಾರಾಯಣನು ಹೇಳಿದನು—ಆದಿಶಕ್ತಿಸ್ವರೂಪಳೂ, ಜಗನ್ಮಾತೆಯೂ, ಭಕ್ತಾನುಗ್ರಹಕಾರಿಣಿಯೂ, ಸರ್ವವ್ಯಾಪಕಳೂ, ಅಂತ್ಯರಹಿತಳೂ, ಆದ ಗಾಯತ್ರಿಯೇ, ನಿನಗೆ ನಮಸ್ಕಾರವು. ॥೨॥

ಸಂಧ್ಯೆಯೂ, ಗಾಯತ್ರಿಯೂ, ಸಾವಿತ್ರಿಯೂ, ಸರಸ್ವತಿಯೂ, ಬ್ರಾಹ್ಮಿಯೂ, ವೈಷ್ಣವಿಯೂ, ರುದ್ರಾಣಿಯೂ, ರಕ್ತವರ್ಣಳೂ, ಶ್ವೇತವರ್ಣಳೂ, ಕೃಷ್ಣವರ್ಣಳೂ

**ಪ್ರಾತರ್ಬಾಲಾ ಚ ಮಧ್ಯಾಹ್ನೇ ಯೌವನಸ್ಥಾ ಭವೇತ್ಪುನಃ ।**
**ವೃದ್ಧಾ ಸಾಯಂ ಭಗವತೀ ಚಿಂತ್ಯತೇ ಮುನಿಭಿಸ್ಸದಾ ॥೪॥**

**ಹಂಸಸ್ಥಾ ಗರುಡಾರೂಢಾ ತಥಾ ವೃಷಭವಾಹಿನೀ ।**
**ಋಗ್ವೇದಾಧ್ಯಾಯಿನೀ ಭೂಮೌ ದೃಶ್ಯತೇ ಯಾ ತಪಸ್ವಿಭಿಃ ॥೫॥**

**ಯಜುರ್ವೇದಂ ಪಠಂತೀಚ ಅಂತರಿಕ್ಷೇ ವಿರಾಜತೇ ।**
**ಸಾ ಸಾಮಗಾಽಪಿ ಸರ್ವೇಷು ಭ್ರಾಮ್ಯಮಾಣಾ ತಥಾ ಭುವಿ ॥೬॥**

---

ಎಲ್ಲವೂ ನೀನೇ ಆಗಿರುತ್ತೀಯೆ. ಅಂದರೆ ಗಾಯತ್ರಿಯು ಬ್ರಹ್ಮನಿಗೆ ಸಮಾನ ಸ್ವಭಾವವುಳ್ಳವಳು, ಅಥವಾ ಅವನಿಂದ ಆರಾಧಿಸಲ್ಪಡತಕ್ಕವಳು, ಎನ್ನುವುದರಿಂದ "ಬ್ರಾಹ್ಮೀ" ಎಂದೂ, ವಿಷ್ಣುವಿಗೆ ಸಮಾನವಾದ ಆಕಾರವುಳ್ಳವಳು ಅಥವಾ ಅವನಿಂದ ಆರಾಧಿಸಲ್ಪಡತಕ್ಕವಳು ಎನ್ನುವುದರಿಂದ "ವೈಷ್ಣವೀ" ಎಂದೂ, ರುದ್ರನಿಗೆ ಸಮಾನವಾದ ಆಕಾರವುಳ್ಳವಳು ಅಥವಾ ಅವನಿಂದ ಆರಾಧಿಸಲ್ಪಡತಕ್ಕವಳು ಎನ್ನುವುದರಿಂದ "ರೌದ್ರೀ" ಎಂದೂ ಪ್ರಸಿದ್ಧಳಾಗಿದ್ದಾಳೆ.

ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬ ದೇವತೆಗಳಲ್ಲಿ ಕ್ರಮವಾಗಿ ಗಾಯತ್ರಿಯು "ರಕ್ತ"ವರ್ಣವುಳ್ಳವಳೂ, ಸಾವಿತ್ರಿಯು "ಶ್ವೇತ" ವರ್ಣವುಳ್ಳವಳೂ, ಸರಸ್ವತಿಯು "ಕೃಷ್ಣ"ವರ್ಣವುಳ್ಳವಳೂ ಎಂದು ತಿಳಿಯಬರುತ್ತದೆ. ॥೩॥

ಗಾಯತ್ರೀ, ಸಾವಿತ್ರೀ, ಸರಸ್ವತೀ, ಈ ಮೂರು ಮಂದಿಗೂ ಕ್ರಮವಾಗಿ ವಯೋನಿರ್ದೇಶಮಾಡುತ್ತಾರೆ. ಈ ಮೂವರೂ ಪ್ರಾತಃಕಾಲದಲ್ಲಿ ಬಾಲಿಕೆಯರಾಗಿಯೂ, ಮಧ್ಯಾಹ್ನದಲ್ಲಿ ಯುವತಿಯರಾಗಿಯೂ, ಸಾಯಂಕಾಲದಲ್ಲಿ ವೃದ್ಧೆಯರಾಗಿಯೂ ಇರುತ್ತಾರೆ. ಇಂತಹ ಈ ಮೂರು ಮಂದಿಯೂ ಋಷಿಗಳಿಂದ ತ್ರಿಕಾಲದಲ್ಲಿಯೂ ಧ್ಯಾನಿಸಲ್ಪಡುತ್ತಾರೆ. ಈ ಮೂವರು ದೇವಿಯರಿಗೂ ಸರ್ವದಾ ನಮಸ್ಕಾರವು. ॥೪॥

ಈ ಮೂವರು ದೇವತೆಗಳಿಗೂ ಕ್ರಮವಾಗಿ ವಾಹನಗಳನ್ನೂ, ವೇದೋತ್ಪಾದಕತ್ವವನ್ನೂ ವಿವರಿಸುತ್ತಾರೆ. ಬ್ರಾಹ್ಮಿಗೆ, ಹಂಸವೂ, ಸರಸ್ವತಿಗೆ ಗರುಡನೂ, ಸಾವಿತ್ರಿಗೆ ವೃಷಭವೂ ವಾಹನಗಳು. ಬ್ರಾಹ್ಮಿಯು ಋಗ್ವೇದ ಸ್ವರೂಪಳೂ, ಭೂಲೋಕಸಂಚಾರಿಣಿಯೂ, ಆಗಿ ತಪಸ್ವಿಗಳಿಂದ ಭಾವಿಸಲ್ಪಡುತ್ತಾಳೆ. ॥೫॥

ಸರಸ್ವತಿಯು ಯಜುರ್ವೇದವನ್ನು ಘೋಷಿಸುವವಳೂ, ಅಂತರಿಕ್ಷಸಂಚಾರಕಳೂ, ಆಗಿ ಯೋಗಿಗಳಿಂದ ತಿಳಿಯಲ್ಪಡುತ್ತಾಳೆ. ಸಾವಿತ್ರಿಯು ಸಾಮವೇದಸ್ವ

ರುದ್ರಲೋಕಂ ಗತಾ ತ್ವಂ ಹಿ ವಿಷ್ಣುಲೋಕೇ ನಿವಾಸಿನೀ ।
ತ್ವಮೇವ ಬ್ರಹ್ಮಣೋ ಲೋಕೇಽಮರ್ತ್ಯಾನುಗ್ರಹಕಾರಿಣೀ ॥೭॥

ಸಪ್ತರ್ಷಿಪ್ರೀತಿಜನನೀ ಮಾಯಾ ಬಹುವರಪ್ರದಾ ।
ಶಿವಯೋಃ ಕರನೇತ್ರೋತ್ಥಾಹ್ಯಶ್ರುಸ್ವೇದಸಮುದ್ಭವಾ ॥೮॥

ಆನಂದಜನನೀ ದುರ್ಗಾ ದಶಧಾ ಪರಿಪಠ್ಯತೇ ।
ವರೇಣ್ಯಾ ವರದಾ ಚೈವ ವರಿಷ್ಠಾ ವರವರ್ಣಿನೀ ॥೯॥

ಗರಿಷ್ಠಾ ಚ ವರಾಹಾ ಚ ವರಾರೋಹಾ ಚ ಸಪ್ತಮೀ ।
ನೀಲಗಂಗಾ ತಥಾ ಸಂಧ್ಯಾ ಸರ್ವದಾ ಭೋಗಮೋಕ್ಷದಾ ॥೧೦॥

ಭಾಗೀರಥೀ ಮರ್ತ್ಯಲೋಕೇ ಪಾತಾಲೇ ಭೋಗವತ್ಯಪಿ ।
ತ್ರಿಲೋಕೇ ವಾಹಿನೀ ದೇವೀ ಸ್ಥಾನತ್ರಯನಿವಾಸಿನೀ ॥೧೧॥

---

ರೂಪಿಣಿಯೂ, ಭೂಲೋಕದಲ್ಲಿ ಸರ್ವತ್ರ ಸಂಚರಿಸತಕ್ಕವಳೂ ಆಗಿ ಜ್ಞಾನಿಗಳಿಂದ ತಿಳಿಯಲು ಶಕ್ಯಳಾಗಿರುತ್ತಾಳೆ. ॥೬॥

ಸರ್ವತ್ರ ಸಂಚರಿಸತಕ್ಕವಳಾದಾಗ್ಯೂ ದೇವತೆಗಳಿಗೆ ಅನುಗ್ರಹ ಮಾಡತಕ್ಕ ಇಚ್ಛೆಯಿಂದ ತ್ರಿಮೂರ್ತ್ಯಾತ್ಮಕಳಾಗಿ ಕೈಲಾಸ, ವೈಕುಂಠ, (ಸತ್ಯ) ಬ್ರಹ್ಮಲೋಕಗಳಲ್ಲಿಯೂ ಸಹ ಓ ದೇವಿಯೇ, ನೀನು ಇರುತ್ತೀಯೆ. ॥೭॥

ಸಪ್ತರ್ಷಿಗಳಿಗೆ ಪ್ರೀತಿಯನ್ನುಂಟುಮಾಡತಕ್ಕವಳೂ, ಮಾಯಾರೂಪಳೂ, ಅನೇಕ ವರಗಳನ್ನು ಕೊಡತಕ್ಕವಳೂ, ಪಾರ್ವತೀಪರಮೇಶ್ವರರ ಕೈ ಕಣ್ಣು ಮುಂತಾದ ಅವಯವಗಳಿಂದ ಉಂಟಾದ ಅಶ್ರು (ಕಣ್ಣೀರು), ಸ್ವೇದ (ಬೆವರು) ಇವುಗಳಿಂದ ಜನಿಸಿದವಳೂ, (ಈ ಕಥೆಯು ಕಾತ್ಯಾಯನೀತಂತ್ರದಲ್ಲಿದೆ.) ॥೮॥

ಆನಂದ ಸ್ವರೂಪಳೂ, ಆದ ನೀನು (೧) ವರೇಣ್ಯಾ (೨) ವರದಾ (೩) ವರಿಷ್ಠಾ (೪) ವರವರ್ಣಿನೀ (೫) ಗರಿಷ್ಠಾ (೬) ವರಾಹಾ (೭) ವರಾರೋಹಾ (೮) ನೀಲಗಂಗಾ (೯) ಸಂಧ್ಯಾ (೧೦) ಸರ್ವಕಾಲದಲ್ಲಿಯೂ ಭೋಗಮೋಕ್ಷದಾ ಎಂಬ ಈ ದಶವಿಧ ದುರ್ಗಾನಾಮುಗಳಿಂದ ಪ್ರಸಿದ್ಧಳಾಗಿರುತ್ತೀಯೆ. ॥೯-೧೦॥

ಮನುಷ್ಯಲೋಕದಲ್ಲಿ "ಭಾಗೀರಥೀ" ಯೆಂದೂ, ಪಾತಾಳಲೋಕದಲ್ಲಿ "ಭೋಗವತೀ" ಯೆಂದೂ, ಸ್ವರ್ಗಲೋಕದಲ್ಲಿ ದೇವಗಂಗಾ ಎಂದೂ ಪ್ರಸಿದ್ಧಳಾಗಿ ತ್ರಿಲೋಕಗಳಲ್ಲಿಯೂ ವ್ಯಾಪಕಳಾಗಿರುತ್ತೀಯೆ. ॥೧೧॥

ಭೂರ್ಲೋಕಸ್ಥಾ ತ್ವಮೇವಾಸಿ ಧರಿತ್ರೀ ಶೋಕಧಾರಿಣೀ ।
ಭುವರ್ಲೋಕೇ ವಾಯುಶಕ್ತಿಃ ಸ್ವರ್ಲೋಕೇ ತೇಜಸಾಂ ನಿಧಿಃ ॥೧೨॥

ಮಹರ್ಲೋಕೇ ಮಹಾಸಿದ್ಧಿಃ ಜನಲೋಕೇ ಜನೇತ್ಯಪಿ ।
ತಪಸ್ವಿನೀ ತಪೋಲೋಕೇ ಸತ್ಯಲೋಕೇ ತು ಸತ್ಯವಾಕ್ ॥೧೩॥

ಕಮಲಾ ವಿಷ್ಣುಲೋಕೇ ಚ ಗಾಯತ್ರೀ ಬ್ರಹ್ಮಲೋಕದಾ ।
ರುದ್ರಲೋಕೇ ಸ್ಥಿತಾ ಗೌರೀ ಹರಾರ್ಧಾಂಗನಿವಾಸಿನೀ ॥೧೪॥

ಅಹಮೋ ಮಹತಶ್ಚೈವ ಪ್ರಕೃತಿಸ್ತ್ವಂ ಹಿ ಗೀಯಸೇ ।
ಸಾಮ್ಯಾವ್ಯವಸ್ಥಾತ್ಮಿಕಾ ತ್ವಂ ಹಿ ಶಬಲ ಬ್ರಹ್ಮರೂಪಿಣೀ ॥೧೫॥

ತತಃ ಪರಾ ಪರಾಶಕ್ತಿಃ ಪರಮಾ ತ್ವಂ ಹಿ ಗೀಯಸೇ ।
ಇಚ್ಛಾಶಕ್ತಿಃ ಕ್ರಿಯಾಶಕ್ತಿಃ ಜ್ಞಾನಶಕ್ತಿಃ ತ್ರಿಶಕ್ತಿದಾ ॥೧೬॥

---

ಭೂಮಿಯ ಶೋಕವನ್ನು (ಭೂಭಾರವನ್ನು) ಧರಿಸುವವಳಾಗಿ ಭೂಲೋಕದಲ್ಲಿಯೂ, ವಾಯುಶಕ್ತಿ (ಸ್ವರೂಪಿ)ಯಾಗಿ ಭುವರ್ಲೋಕದಲ್ಲಿಯೂ, ತೇಜೋನಿಧಿಯಾಗಿ ಸ್ವರ್ಲೋಕದಲ್ಲಿಯೂ, ಮಹಾಸಿದ್ಧಿಯೆಂದು ಮಹರ್ಲೋಕದಲ್ಲಿಯೂ, ಜನಾ ಎಂದು ಜನಲೋಕದಲ್ಲಿಯೂ, ತಪಸ್ವಿನೀ ಎಂದು ತಪೋಲೋಕದಲ್ಲಿಯೂ, ಸತ್ಯವಾಕ್ ಎಂದು ಸತ್ಯಲೋಕದಲ್ಲಿಯೂ, ಕಮಲಾ (ಲಕ್ಷ್ಮೀ) ಎಂದು ವಿಷ್ಣು (ವೈಕುಂಠ) ಲೋಕದಲ್ಲಿಯೂ, ಗಾಯತ್ರೀ ಎಂದು ಬ್ರಹ್ಮ (ಸತ್ಯ) ಲೋಕದಲ್ಲಿಯೂ, ಈಶ್ವರನ ಅರ್ಧಾಂಗಿಯಾಗಿ ಗೌರೀ ಎಂದು ರುದ್ರಲೋಕ (ಕೈಲಾಸ) ದಲ್ಲಿಯೂ ಪ್ರಸಿದ್ಧಳಾಗಿರುತ್ತೀಯೆ. ||೧೨-೧೩-೧೪||

ಅಹಂಕಾರತತ್ವಕ್ಕೂ ಮಹತ್ತತ್ವಕ್ಕೂ ಕಾರಣಳಾಗಿ " ಪ್ರಕೃತಿ " ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವೆ. ಗುಣತ್ರಯಸಾಮ್ಯಾವಸ್ಥೆಯಿಂದ ಮಾಯ ಶಬಲ ಬ್ರಹ್ಮಸ್ವರೂಪಿಣಿ ಎನಿಸಿಕೊಂಡಿರುವೆ. ||೧೫||

ಇಚ್ಛಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿ, ಎಂಬ ಶಕ್ತಿತ್ರಯಾತ್ಮಕಳಾದ ನೀನು ಪರಮಪೂಜ್ಯಳಾದ ಪರಾಶಕ್ತಿ ಎಂದೂ ಗಾನಮಾಡಲ್ಪಡುತ್ತೀಯೆ. ||೧೬||

**ಗಂಗಾ ಚ ಯಮುನಾಚೈವ ವಿಪಾಶಾ ಚ ಸರಸ್ವತೀ ।**
**ಸರಯೂರ್ದೇವಿಕಾ ಸಿಂಧುಃ ನರ್ಮದೇರಾವತೀ ತಥಾ ॥೧೭॥**

**ಗೋದಾವರೀ ಶತದ್ರೂಶ್ಚ ಕಾವೇರೀ ದೇವಲೋಕಗಾ ।**
**ಕೌಶಿಕೀ ಚಂದ್ರಭಾಗಾ ಚ ವಿತಸ್ತಾ ಚ ಸರಸ್ವತೀ ॥೧೮॥**

**ಗಂಡಕೀ ತಾಪಿನೀತ್ತೋಯಾ ಗೋಮತೀ ವೇತ್ರವತ್ಯಪಿ ।**
**ಇಡಾ ಚ ಪಿಂಗಳಾ ಚೈವ ಸುಷುಮ್ನಾ ಚ ತೃತೀಯಕಾ ॥೧೯॥**

**ಗಾಂಧಾರೀ ಹಸ್ತಿಜಿಹ್ವಾ ಚ ಪೂಷಾಽಪೂಷಾ ತಥೈವ ಚ ।**
**ಅಲಂಬುಸಾ ಕುಹೂಶ್ಚೈವ ಶಂಖಿನೀ ಪ್ರಾಣವಾಹಿನೀ ॥೨೦॥**

**ನಾಡೀ ಚ ತ್ವಂ ಶರೀರಸ್ಥಾ ಗೀಯಸೇ ಪ್ರಾಕ್ತನೈರ್ಬುಧೈಃ ।**
**ಹೃತ್ಪದ್ಮಸ್ಥಾ ಪ್ರಾಣಶಕ್ತಿಃ ಕಂಠಸ್ಥಾ ಸ್ವಪ್ನನಾಯಿಕಾ ॥೨೧॥**

**ತಾಲುಸ್ಥಾ ತ್ವಂ ಸದಾಧಾರಾ ಬಿಂದುಸ್ಥಾ ಬಿಂದುಮಾಲಿನೀ ।**
**ಮೂಲೇ ತು ಕುಂಡಲೀ ಶಕ್ತಿಃ ವ್ಯಾಪಿನೀ ಕೇಶಮೂಲಗಾ ॥೨೨॥**

---

ಗಂಗಾ, ಯಮುನಾ, ವಿಪಾಶಾ, ಸರಸ್ವತೀ, ಸರಯೂ, ದೇವಿಕಾ, ಸಿಂಧು, ನರ್ಮದಾ, ಇರಾವತೀ, ಗೋದಾವರೀ, ಶತದ್ರೂ, ಕಾವೇರೀ, (ದೇವಗಂಗಾ), ಕೌಶಿಕೀ, ಚಂದ್ರಭಾಗಾ, ವಿತಸ್ತಾ, ಸರಸ್ವತೀ, ಗಂಡಕೀ, ತಾಪಿನೀ, ಕರತೋಯಾ, ಗೋಮತೀ, ವೇತ್ರವತೀ ಇವೇ ಮುಂತಾದ ನದೀಸ್ವರೂಪಿಣಿಯೂ ಆಗಿರುತ್ತೀಯೆ. ||೧೬-೧೭-೧೮||

ಇಡಾ, ಪಿಂಗಳಾ, ಸುಷುಮ್ನಾ, ಗಾಂಧಾರೀ, ಹಸ್ತಿಜಿಹ್ವಾ, ಪೂಷಾ, ಅಪೂಷಾ, ಅಲಂಬುಸಾ, ಕುಹೂಃ, ಶಂಖಿನೀ, ಪ್ರಾಣವಾಹಿನೀ ಮುಂತಾದ ಶರೀರದಲ್ಲಿರುವ ನಾಡೀರೂಪಳೂ ಎಂಬದಾಗಿ ನೀನು ಜ್ಞಾನಿಗಳಿಂದ ಹೇಳಲ್ಪಡುತ್ತೀಯೆ. ||೧೯-೨೦||

ಹೃತ್ಪದ್ಮದಲ್ಲಿ ವಾಸಮಾಡುತ್ತ ಪ್ರಾಣಶಕ್ತಿಸ್ವರೂಪಳಾಗಿಯೂ, ಕಂಠದಲ್ಲಿ ವಾಸಮಾಡುತ್ತಾ, ಸ್ವಪ್ನಜನಕಳಾಗಿಯೂ, ತಾಲುವಿನ (ದವಡೆಯ)ಲ್ಲಿರುತ್ತಾ ಸರ್ವಾಧಾರಳಾಗಿಯೂ, ಭ್ರೂಮಧ್ಯದಲ್ಲಿ (ಹುಬ್ಬಿನ) ಬಿಂದುರೂಪದಿಂದ ಪ್ರಕಾಶಿಸುವಳಾಗಿಯೂ, ಮೂಲಾಧಾರದಲ್ಲಿ ಕುಂಡಲೀಶಕ್ತಿರೂಪಳಾಗಿಯೂ, ಕೇಶಮೂಲದಲ್ಲಿ

**ಶಿಖಾ ಮಧ್ಯಾಸನಾ ತ್ವಂ ಹಿ ಶಿಖಾಗ್ರೇ ತು ಮನೋನ್ಮನೀ ।**
**ಕಿಮನ್ಯದ್ಬಹುನೋಕ್ತೇನ ಯತ್ಕಿಂಚಿಜ್ಜಗತೀತ್ರಯೇ ॥೨೩॥**

**ತತ್ಸರ್ವಂ ತ್ವಂ ಮಹಾದೇವಿ ಶ್ರಿಯೇಸಂಧ್ಯೇ ನಮೋಽಸ್ತು ತೇ ।**
**ಇತೀದಂ ಕೀರ್ತಿದಂ ಸ್ತೋತ್ರಂ ಸಂಧ್ಯಾಯಾಂ ಬಹುಪುಣ್ಯದಂ ॥೨೪॥**

**ಮಹಾಪಾಪಪ್ರಶಮನಂ ಮಹಾಸಿದ್ಧಿವಿಧಾಯಕಂ ।**
**ಯ ಇದಂ ಕೀರ್ತಯೇತ್ ಸ್ತೋತ್ರಂ ಸಂಧ್ಯಾಕಾಲೇ ಸಮಾಹಿತಃ ॥೨೫॥**

**ಅಪುತ್ರಃ ಪ್ರಾಪ್ನುಯಾತ್ಪುತ್ರಂ ಧನಾರ್ಥೀ ಧನಮಾಪ್ನುಯಾತ್ ।**
**ಸರ್ವತೀರ್ಥತಪೋದಾನ ಯಜ್ಞಯೋಗಫಲಂ ಲಭೇತ್ ॥೨೬॥**

**ಭೋಗಾನ್ಭುಕ್ತ್ವಾ ಚಿರಂ ಕಾಲಂ ಅಂತೇ ಮೋಕ್ಷಮವಾಪ್ನುಯಾತ್ ।**
**ತಪಸ್ವಿಭಿಃ ಕೃತಂ ಸ್ತೋತ್ರಂ ಸ್ನಾನಕಾಲೇ ತು ಯಃ ಪಠೇತ್ ॥೨೭॥**

---

ರುತ್ತಾ ಸರ್ವ ವ್ಯಾಪಿಸಿಯಾಗಿಯೂ, ಜ್ಞಾನಜನಕವಾದ ಶಿಖಾಪ್ರದೇಶದಲ್ಲಿರುತ್ತಾ (ಪರಮಾತ್ಮರೂಪಿಣಿಯಾಗಿ ಅಂದರೆ ಬ್ರಹ್ಮರಂಧ್ರದಲ್ಲಿ ಮನಸ್ಸನ್ನು ನಿಲ್ಲಿಸಿದರೆ ಮನೋನ್ಮನೀ ಎಂಬ ಶಕ್ತಿಯು ಉಂಟಾಗುತ್ತದೆ (ಸಿದ್ಧಿಸುತ್ತದೆ) ಎಂದು ಯೋಗ ಶಾಸ್ತ್ರದಲ್ಲಿ ಪ್ರಸಿದ್ಧಿಯನ್ನು ಪಡೆದಿರುತ್ತೀಯೆ. ॥೨೧-೨೨॥

ಓ ಜಗನ್ಮಾತೆಯೇ, ಹೆಚ್ಚು ಹೇಳುವುದರಿಂದ ಪ್ರಯೋಜನವೇನು? ಈ ಮೂರು ಲೋಕಗಳಲ್ಲಿ ಮೋಕ್ಷಪ್ರದಗಳು ಯಾವುಯಾವುವು ಇವೆಯೋ ಆ ಎಲ್ಲಾ ವಸ್ತುಗಳೂ ನೀನೇ ಆಗಿರುತ್ತೀಯೆ. ॥೨೩॥

ಮಹಾ ಪಾಪಪರಿಹಾರಕವೂ, ಮಹಾ ಸಿದ್ಧಿದಾಯಕವೂ, ಅತ್ಯಂತ ಪುಣ್ಯ ಕರವೂ ಆದ ಈ ಸ್ತೋತ್ರವನ್ನು ಯಾವ ಮನುಷ್ಯನು ಸಂಧ್ಯಾಕಾಲದಲ್ಲಿ ಸಮಾ ಧಾನಚಿತ್ತದಿಂದ ಪಠಿಸುವನೋ, ಅಂತಹವನು ಪುತ್ರರಿಲ್ಲದಿದ್ದರೆ ಪುತ್ರರನ್ನೂ, ದರಿದ್ರ ನಾದರೆ ಧನವನ್ನೂ ಪಡೆಯುವನು. ಮತ್ತು ಸರ್ವತೀರ್ಥಗಳಲ್ಲಿ ಸ್ನಾನ, ತಪಸ್ಸು, ದಾನ, ಯಜ್ಞ ಮುಂತಾದುವುಗಳನ್ನು ಮಾಡುವುದರಿಂದ ಯಾವ ಉತ್ತಮ ಫಲ ವನ್ನು ಪಡೆಯುವನೋ ಅಂತಹ ಶ್ರೇಷ್ಠವಾದ ಫಲವನ್ನೂ ಸಹ ಹೊಂದುವನು. ॥೨೪-೨೫-೨೬॥

ಇಹದಲ್ಲಿ ನಾನಾ ಭೋಗಗಳನ್ನು ಅನುಭವಿಸಿ, ಅಂತ್ಯದಲ್ಲಿ ಮೋಕ್ಷವನ್ನೂ ಸಹ ಪಡೆಯುವನು. ತಪಸ್ವಿಗಳಿಂದ ಮಾಡಲ್ಪಟ್ಟ ಈ ಸ್ತೋತ್ರವನ್ನು ಯಾವ

**ಯತ್ರ ಕುತ್ರ ಜಲೇ ಮಗ್ನಃ ಸಂಧ್ಯಾಮಜ್ಜನಜಂ ಫಲಂ ।**
**ಲಭತೇ ನಾತ್ರ ಸಂದೇಹಃ ಸತ್ಯಂ ಸತ್ಯಂ ಚ ನಾರದ ॥೨೮॥**

**ಶೃಣುಯಾದ್ಯೋಽಪಿ ತದ್ಭಕ್ತ್ಯಾ ಸ ತು ಪಾಪಾತ್ಪ್ರಮುಚ್ಯತೇ ।**
**ಪೀಯೂಷಸದೃಶಂ ವಾಕ್ಯಂ ಸಂಧ್ಯೋಕ್ತಂ ನಾರದೇರಿತಂ ॥೨೯॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ**
**ಪಂಚಮೋಽಧ್ಯಾಯಃ**

---

ಮನುಷ್ಯನೇ ಆಗಲಿ, ಯಾವ ತೀರ್ಥದಲ್ಲಿಯೇ ಆಗಲಿ ಸ್ನಾನ ಮಾಡುವಾಗ ಜಪಿಸಿದರೆ, ಸಂಧ್ಯಾಕಾಲದಲ್ಲಿ ಜಪಿಸುತ್ತಾ ಸ್ನಾನ ಮಾಡುವಷ್ಟು ಫಲವನ್ನು ಹೊಂದುವನು. ಈ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ ಎಂದು ಸತ್ಯವಾಗಿಯೂ ಹೇಳುವೆನು. ||೨೭-೨೮||

ಶ್ರೀಮನ್ನಾರಾಯಣನಿಂದ ನಾರದರಿಗೆ ಹೇಳಲ್ಪಟ್ಟ ಅಮೃತಕ್ಕೆ ಸಮನಾದ ಸಂಧ್ಯೋದ್ದೇಶಕವಾದ ಈ ಸ್ತೋತ್ರ (ಮಂತ್ರ) ವನ್ನು ಯಾವ ಮನುಷ್ಯನು ಭಕ್ತಿಯಿಂದ ಕೇಳುತ್ತಾನೆಯೋ ಅವನು ಸರ್ವ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು, ಎಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ||೨೯||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಐದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

|| ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ನಾರದ ಉವಾಚ ||

**ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರವಿಶಾರದ ।**
**ಶ್ರುತಿಸ್ಮೃತಿಪುರಾಣಾನಾಂ ರಹಸ್ಯಂ ತ್ವನ್ಮುಖಾಚ್ಛ್ರುತಂ ॥೧॥**

**ಸರ್ವಪಾಪಹರಂ ದೇವ ಯೇನವಿದ್ಯಾ ಪ್ರವರ್ತತೇ**
**ಕೇನವಾ ಬ್ರಹ್ಮವಿಜ್ಞಾನಂ ಕಿಂತು (ಕೇನ) ವಾ ಮೋಕ್ಷಸಾಧನಂ ॥೨॥**

---

ಈ ಅಧ್ಯಾಯದ ನೂರರವತ್ತೈದು ಶ್ಲೋಕಗಳಲ್ಲಿ ಶ್ರೀಗಾಯತ್ರಿಯ ಸಹಸ್ರ ನಾಮಗಳನ್ನು ವರ್ಣಿಸುತ್ತಾರೆ. ಅನಂತರದಲ್ಲಿ ನಾರದರು ಸರ್ವಾಭೀಷ್ಟಪ್ರದವೂ, ಮನುಷ್ಯನು ತಾನು ಅನುಷ್ಠಾನಮಾಡುವುದರಲ್ಲಿ ಉಂಟಾಗುವ ನ್ಯೂನತೆಯ ಪರಿಹಾರಕ್ಕೋಸ್ಕರವಾಗಿ ಮಾಡತಕ್ಕದ್ದೂ, ಆದ ಶ್ರೀಗಾಯತ್ರೀ ಸಹಸ್ರನಾಮಸ್ತೋತ್ರವನ್ನು ಕೇಳಲಿಚ್ಛೈಯುಳ್ಳವನಾಗಿ ಪರಮಾತ್ಮನನ್ನು ಪ್ರಶ್ನಿಸುತ್ತಾರೆ.

ನಾರದರು ಕೇಳಿದರು—ಸರ್ವಧರ್ಮಜ್ಞನೂ, ಸರ್ವಶಾಸ್ತ್ರಗಳಲ್ಲಿ ಮಹಾಪಂಡಿತನೂ, ಪೂಜ್ಯನೂ ಆದ ಪರಮಾತ್ಮನೇ, ಶ್ರುತಿಸ್ಮೃತಿಪುರಾಣಗಳ ರಹಸ್ಯವು ನಿನ್ನಿಂದ ಕೇಳಲ್ಪಟ್ಟಿತು. ||೧||

ಸಮಸ್ತಪಾಪನಾಶಕವೂ, ವೇದವಿದ್ಯೆಯನ್ನು ಅಭಿವೃದ್ಧಿಪಡಿಸತಕ್ಕದ್ದೂ, ಯಾವುದು ? ಯಾವುದರಿಂದ ಬ್ರಹ್ಮಜ್ಞಾನವೂ, ಮೋಕ್ಷಸಿದ್ಧಿಯೂ ಉಂಟಾಗುತ್ತದೆ ? ಬ್ರಾಹ್ಮಣರಿಗೆ ಉತ್ತಮಗತಿದಾಯಕವಾದದ್ದು ಯಾವುದು ? ಮೃತ್ಯುನಾಶಕವಾದದ್ದು

**ಬ್ರಾಹ್ಮಣಾನಾಂ ಗತಿಃ ಕೇನ ಕೇನ ವಾ ಮೃತ್ಯುನಾಶನಂ ।**
**ಐಹಿಕಾಮುಷ್ಮಿಕ ಫಲಂ ಕೇನ ವಾ ಪದ್ಮಲೋಚನ ॥೩॥**

**ವಕ್ತುಮರ್ಹಸ್ಯಶೇಷೇಣ ಸರ್ವಂ ನಿಖಿಲಮಾದಿತಃ ।**
**ಸಾಧು ಸಾಧು ಮಹಾಪ್ರಾಜ್ಞ ಸಮ್ಯಕ್ಪೃಷ್ಟಂ ತ್ವಯಾಽನಘ ॥೪॥**

**ಶೃಣು ವಕ್ಷ್ಯಾಮಿ ಯತ್ನೇನ ಗಾಯತ್ರ್ಯಷ್ಟಸಹಸ್ರಕಂ ।**
**ನಾಮ್ನಾಂ ಶುಭಾನಾಂ ದಿವ್ಯಾನಾಂ ಸರ್ವಪಾಪ ವಿನಾಶನಂ ॥೫॥**

**ಸೃಷ್ಟ್ಯಾದೌ ಯದ್ಭಗವತಾ ಪೂರ್ವಂ ಪ್ರೋಕ್ತಂ ಬ್ರವೀಮಿ ತೇ ।**
**ಅಷ್ಟೋತ್ತರಸಹಸ್ರಸ್ಯ ಋಷಿಃಬ್ರಹ್ಮಾ ಪ್ರಕೀರ್ತಿತಃ ॥೬॥**

**ಛಂದೋಽನುಷ್ಟುಪ್ತಥಾ ದೈವೀ ಗಾಯತ್ರೀ ದೇವತಾ ಸ್ಮೃತಾ ।**

॥ ಶ್ರೀನಾರಾಯಣ ಉವಾಚ ॥

**ಹಲೋ ಬೀಜಾನಿ ತಸ್ಯೈವ ಸ್ವರಾಃ ಶಕ್ತಯ ಈರಿತಾಃ ॥೭॥**

---

ಯಾವುದು ? ಓ ಕಮಲಲೋಚನನೇ, ಯಾವುದರಿಂದ ಐಹಿಕಾಮುಷ್ಮಿಕಫಲವು ಲಭಿಸುವುದು ? ಇವೆಲ್ಲವನ್ನೂ ಮೊದಲಿನಿಂದ ದಯೆಯಿಟ್ಟು ತಿಳಿಸಬೇಕು ಎಂದು ನಾರದನು ಪ್ರಾರ್ಥಿಸಲು, ॥೨-೩॥

ಶ್ರೀಮನ್ನಾರಾಯಣನು ಹೇಳಿದನು—ಎಲೈ ಪ್ರಜ್ಞಾಶಾಲಿಯೂ, ಮಹಾತ್ಮನೂ ಆದ ನಾರದನೇ, ನಿನ್ನಿಂದ ಅತ್ಯಂತ ಶ್ಲಾಘ್ಯವಾದ ವಿಷಯವು ಕೇಳಲ್ಪಟ್ಟಿತು. ॥೪॥

ಮಂಗಳಕರಗಳೂ, ಶ್ರೇಷ್ಠಗಳೂ, ಸರ್ವಪಾಪಪರಿಹಾರಕಗಳೂ ಆದ ಗಾಯತ್ರಿಯ ಸಾವಿರದೆಂಟು ನಾಮಗಳನ್ನು ಹೇಳುತ್ತೇನೆ. ಕೇಳು. ॥೫॥

ಸೃಷ್ಟಿಯ ಆದಿಯಲ್ಲಿ ಪೂಜ್ಯನಾದ ಬ್ರಹ್ಮನಿಂದ ಯಾವ ವಿಷಯವು ಹೇಳಲ್ಪಟ್ಟಿತೋ ಆ ವಿಷಯವನ್ನೇ ನಾನೂ ನಿನಗೆ ಹೇಳುತ್ತೇನೆ. ಗಾಯತ್ರಿಯ ಅಷ್ಟೋತ್ತರಸಹಸ್ರನಾಮಸ್ತೋತ್ರಕ್ಕೆ ಬ್ರಹ್ಮನೇ ಋಷಿಯು ಎಂದು ಹೇಳಲ್ಪಟ್ಟಿರುತ್ತದೆ. ॥೬॥

ಅನುಷ್ಟುಪ್ ಛಂದಸ್ಸು, ದೈವೀಗಾಯತ್ರೀ ದೇವತಾ, ಹಲಃ (ವ್ಯಂಜನಾಕ್ಷರಗಳೆಲ್ಲ) ಬೀಜವೂ, ಸ್ವರ (ಸ್ವರಾಕ್ಷರಗಳೂ,-ಉದಾತ್ತಾನುದಾತ್ತಸ್ವರಿತ)ಗಳೇ ಶಕ್ತಿಗಳೂ ಎಂದು ಹೇಳಲ್ಪಟ್ಟಿದೆ. ॥೭॥

**ಅಂಗನ್ಯಾಸಕರನ್ಯಾಸಾವುಚ್ಯೇತೇ ಮಾತೃಕಾಕ್ಷರೈಃ ।**
**ಅಥ ಧ್ಯಾನಂ ಪ್ರವಕ್ಷ್ಯಾಮಿ ಸಾಧಕಾನಾಂ ಹಿತಾಯ ವೈ ॥೮॥**

**ರಕ್ತಶ್ವೇತ ಹಿರಣ್ಯ ನೀಲಧವಲೈರ್ಯುಕ್ತಾಂ ತ್ರಿನೇತ್ರೋಜ್ಜ್ವಲಾಂ ।**
**ರಕ್ತಾಂ ರಕ್ತನವಸ್ರಜಂ ಮಣಿಗಣೈರ್ಯುಕ್ತಾಂ ಕುಮಾರೀ ಮಿಮಾಂ ॥**

**ಗಾಯತ್ರೀಂ ಕಮಲಾಸನಾಂ ಕರತಲವ್ಯಾನದ್ಧ ಕುಂಡಾಂಬುಜಾಂ ।**
**ಪದ್ಮಾಕ್ಷೀಂ ಚ ವರಸ್ರಜಂ ಚ ದಧತೀಂ ಹಂಸಾಧಿರೂಢಾಂ ಭಜೇ ॥೯॥**

**ಅಚಿಂತ್ಯಲಕ್ಷಣಾವ್ಯಕ್ತಾಽ ಪ್ಯರ್ಥಮಾತೃಮಹೇಶ್ವರೀ ।**
**ಅಮೃತಾರ್ಣವ ಮಧ್ಯಸ್ಥಾಽಪ್ಯಜಿತಾ ಚಾಪರಾಜಿತಾ ॥೧೦॥**

---

ಗಾಯತ್ರೀ ಮೂಲಮಂತ್ರದ ಷಡಂಗರೂಪವಾದ ಮಾತೃಕಾಕ್ಷರಗಳಿಂದ ಅಂಗನ್ಯಾಸಕರನ್ಯಾಸಗಳು ಹೇಳಲ್ಪಟ್ಟಿವೆ. ಸಾಧಕರಹಿತಕ್ಕಾಗಿ ಧ್ಯಾನಕ್ರಮವನ್ನು ಹೇಳುತ್ತೇನೆ. ॥೮॥

ಅಥಧ್ಯಾನಂ—

ರಕ್ತ, ಶ್ವೇತ, ಹಿರಣ್ಯ (ಚಿನ್ನ), ನೀಲ, ಧವಳಾದಿ ನಾನಾ ವರ್ಣವಿಶಿಷ್ಟವಾದ ಮಣಿಗಣಗಳಿಂದ ಕೂಡಿದ ಹಾರವನ್ನು ಧರಿಸಿರುವಳೂ, ಕಮಲಾಸನಳೂ, ಕುಂಡ (ಕಪಾಲ) ಮತ್ತು ಕಮಲಗಳನ್ನು ಕೈಗಳಲ್ಲಿ ಧರಿಸಿರುವವಳೂ, ಹಂಸವಾಹನಳೂ ಆದ ಕುಮಾರೀ ರೂಪಿಣಿಯಾದ ಗಾಯತ್ರಿಯನ್ನು ಭಜಿಸುವೆನು. ॥೯॥

ಅನಂತರ ಮಾತೃಕಾಕ್ಷರಕ್ರಮದಿಂದ ಸಹಸ್ರನಾಮಗಳು ಹೇಳಲ್ಪಡುತ್ತವೆ. ಮೊದಲಿನಲ್ಲಿ "ಅಚಿಂತ್ಯ ಲಕ್ಷಣಾ" ಎಂಬ ನಾಮದಿಂದ ಆರಂಭಿಸಿ "ಅಂತ್ಯ ಜಾರ್ಜಿತಾ" ಎಂಬ ನಾಮದವರೆಗೆ ಅಕಾರಾದಿಯಾಗಿ ಮೂವತ್ತೈದು ನಾಮಗಳು ಹೇಳಲ್ಪಡುತ್ತವೆ. ೧ ಅಚಿಂತ್ಯ ಲಕ್ಷಣಾ ಬುದ್ಧಿಯಿಂದ ತಿಳಿಯಲಸಾಧ್ಯವಾದ ಲಕ್ಷಣವುಳ್ಳವಳು) ೨ ಅವ್ಯಕ್ತಾ (ನಾಮರೂಪರಹಿತಳು) ೩ ಅರ್ಥಮಾತೃ ಮಹೇಶ್ವರೀ (ಪ್ರಪಂಚರೂಪಾರ್ಥಪರಿಚ್ಛೇದಕ ಬ್ರಹ್ಮಾದಿಗಳಿಗೆ ನಿಯಂತ್ರಿಣಿಯು) ೪ ಅಮೃತಾರ್ಣವಮಧ್ಯಸ್ಥಾ (ಕ್ಷೀರಸಮುದ್ರದ ಮಧ್ಯದಲ್ಲಿರುವವಳು) ೫ ಅಜಿತಾ (ಇತರರಿಂದ ಜಯಿಸಲಸಾಧ್ಯಳು) ೬ ಅಪರಾಜಿತಾ (ಯುದ್ಧದಲ್ಲಿ ಪರಾಜಯವನ್ನು ಹೊಂದದವಳು) ಅಥವಾ (೫-೬ ಅಷ್ಟಪೀಠಶಕ್ತ್ಯಂತರ್ಗತಳು) ॥೧೦॥

**ಅಣಿಮಾದಿಗುಣಾಧಾರಾಽಪ್ಯರ್ಕಮಂಡಲಸಂಸ್ಥಿತಾ ।**
**ಅಜರಾಽಜಾಽಪರಾಽಧರ್ಮಾ ಅಕ್ಷಸೂತ್ರಧರಾಽಧರಾ ॥೧೧॥**

**ಅಕಾರಾದಿ ಕ್ಷಕಾರಾಂತಾಽಪ್ಯರಿಷಡ್ವರ್ಗಭೇದಿನೀ ।**
**ಅಂಜನಾದ್ರಿ ಪ್ರತೀಕಾಶಾಽಪ್ಯಂಜನಾದ್ರಿನಿವಾಸಿನೀ ॥೧೨॥**

**ಅದಿತಿಶ್ಚಾಽಜಪಾಽವಿದ್ಯಾಽಪ್ಯರವಿಂದನಿಭೇಕ್ಷಣಾ ।**
**ಅಂತರ್ಬಹಿಸ್ಸ್ಥಿತಾಽವಿದ್ಯಾಧ್ವಂಸಿನೀ ಚಾಂತರಾತ್ಮಿಕಾ ॥೧೩॥**

---

೭ ಅಣಿಮಾದಿಗುಣಾಧಾರಾ (ಅಣಿಮಾದಿ ಅಷ್ಟಸಿದ್ಧಿಗಳಿಗೆ ಆಶ್ರಯಳು) ೮ ಅರ್ಕಮಂಡಲ ಸಂಸ್ಥಿತಾ (ಸೂರ್ಯಮಂಡಲದಲ್ಲಿರುವವಳು) ೯ ಅಜರಾ (ಮುಪ್ಪಿಲ್ಲದವಳು) ೧೦ ಅಜಾ (ಜನ್ಮರಹಿತಳು) ೧೧ ಅಪರಾ (ತನಗಿಂತಲೂ ಶ್ರೇಷ್ಠರಿಲ್ಲದವಳು) ೧೨ ಅಧರ್ಮಾ (ಜಾತ್ಯಾದಿ ನಿಮಿತ್ತಗಳಾದ ಧರ್ಮರಹಿತಳು) ೧೩ ಅಕ್ಷಸೂತ್ರಧರಾ (ಅಕ್ಷಮಾಲಿಕೆಯನ್ನು ಧರಿಸಿರುವವಳು) ೧೪ ಅಧರಾ (ನಿಕೃಷ್ಟರೂಪಗಳೂ ಸ್ವರೂಪವಾಗಿ ಉಳ್ಳವಳು). ॥೧೧॥

೧೫ ಅಕಾರಾದಿಕ್ಷಕಾರಾಂತಾ (ಅಕಾರವೇ ಆದಿಯಾಗಿಯೂ ಕ್ಷಕಾರವೇ ಅಂತ್ಯವಾಗಿಯೂ ಇರುವ ವರ್ಣಮೂಲಾಸ್ವರೂಪಳು) ೧೬ ಅರಿಷಡ್ವರ್ಗಭೇದಿನೀ (ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳನ್ನು ನಾಶಮಾಡತಕ್ಕವಳು) ೧೭ ಅಂಜನಾದ್ರಿಪ್ರತೀಕಾಶಾ (ಅಂಜನಪರ್ವತಕ್ಕೆ ಸಮಾನಕಾಂತಿಯುಳ್ಳವಳು) ೧೮ ಅಂಜನಾದ್ರಿನಿವಾಸಿನೀ (ಅಂಜನಪರ್ವತದಲ್ಲಿ ವಾಸಮಾಡತಕ್ಕವಳು). ॥೧೨॥

೧೯ ಅದಿತಿಃ (ದೇವಮಾತೆಯಾದ ಅದಿತಿಯು) ೨೦ ಅಜಪಾ (ಗಾಯತ್ರೀ ಮಂತ್ರಧ್ಯೇಯಳು) ೨೧ ಅವಿದ್ಯಾರೂಪಳು ೨೨ ಅರವಿಂದನಿಭೇಕ್ಷಣಾ (ಕಮಲಕ್ಕೆ ಸಮನಾದ ಕಣ್ಣುಳ್ಳವಳು) ೨೩ ಅಂತರ್ಬಹಿಸ್ಸ್ಥಿತಾ (ಹೊರಗೆ ಒಳಗೆ ಎಲ್ಲಾ ಸ್ಥಳದಲ್ಲಿಯೂ ಇರತಕ್ಕವಳು) ೨೪ ಅವಿದ್ಯಾಧ್ವಂಸಿನೀ (ಜೀವೋಪಾಧಿಯನ್ನು ನಾಶಮಾಡತಕ್ಕವಳು) ೨೫ ಅಂತರಾತ್ಮಿಕಾ (ಅಂತರಾತ್ಮಸ್ವರೂಪಳು). ॥೧೩॥

**ಅಜಾಜಾಜಮುಖಾವಾಸಾಽಪ್ಯರವಿಂದನಿಭಾನನಾ ।**
**ಅರ್ಧಮಾತ್ರಾರ್ಥದಾನಜ್ಞಾಽಪ್ಯರಿಮಂಡಲಮರ್ದಿನೀ ॥೧೪॥**

**ಅಸುರಘ್ನೀಹ್ಯಮಾವಾಸ್ಯಾಪ್ಯಲಕ್ಷ್ಮೀಘ್ನ್ಯಂತ್ಯಜಾರ್ಚಿತಾ ।**
**ಆದಿಲಕ್ಷ್ಮೀಶ್ಚಾದಿಶಕ್ತಿರಾಕೃತಿಶ್ಚಾಯತಾನನಾ ॥೧೫॥**

**ಆದಿತ್ಯಪದವೀಚಾರಾಽಪ್ಯಾದಿತ್ಯ ಪರಿಸೇವಿತಾ ।**
**ಆಚಾರ್ಯಾವರ್ತನಾಚಾರಾಽಪ್ಯಾದಿಮೂರ್ತಿನಿವಾಸಿನೀ ॥೧೬॥**

---

೨೬ ಅಜಾ (ಛಾಗಿ-ಹೆಣ್ಣುಮೇಕೆ ಸ್ವರೂಪಳು) ೨೭ ಅಜಮುಖಾವಾಸಾ (ಬ್ರಹ್ಮನ ಮುಖದಲ್ಲಿ ವಾಸಮಾಡುವವಳು) ೨೮ ಅರವಿಂದನಿಭಾನನಾ (ಕಮಲದಂತೆ ಮುಖವುಳ್ಳವಳು) ೨೯ ಅರ್ಧಮಾತ್ರಾ (ಯಾವಾಗಲೂ ಪ್ರಣವದ ತುದಿಯ ಅರ್ಧಮಾತ್ರೆಯಲ್ಲಿರತಕ್ಕವಳು. ೩೦ ಅರ್ಥದಾನಜ್ಞಾ (ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳ ದಾನವನ್ನು ತಿಳಿದಿರತಕ್ಕವಳು) ೩೧ ಅರಿಮಂಡಲಮರ್ದಿನೀ (ಶತ್ರುಸಮೂಹನಾಶಕಳು) ॥೧೪॥

೩೨ ಅಸುರಘ್ನೀ (ರಾಕ್ಷಸಸಂಹಾರಕಳು) ೩೩ ಅಮಾವಾಸ್ಯಾ (ಅಮಾವಾಸ್ಯಾಸ್ವರೂಪಳು) ೩೪ ಅಲಕ್ಷ್ಮೀಘ್ನೀ (ದಾರಿದ್ರ್ಯನಾಶಕಳು–ಐಶ್ವರ್ಯಪ್ರದಳು). ೩೫ ಅಂತ್ಯಜಾರ್ಚಿತಾ (ಮಾತಂಗೀರೂಪದಿಂದಲೂ ಪೂಜಿಸಲ್ಪಡುವವಳು).

"ಆದಿಲಕ್ಷ್ಮೀಃ" ಎಂಬ ನಾಮ ಮೊದಲುಗೊಂಡು, "ಆಂತರಧ್ವಾಂತನಾಶಿನೀ" ಎಂಬ ನಾಮದ ವರೆಗಿನ ಇಪ್ಪತ್ತೆರಡು ನಾಮಗಳು "ಆಕಾರಾದಿಯಾಗಿ" ಹೇಳಲ್ಪಡುತ್ತವೆ.

೩೬ ಆದಿಲಕ್ಷ್ಮೀಃ (ಮಾಯಾಶಬಲಿತ ಬ್ರಹ್ಮಮೂರ್ತಿಯು) "ತಪ್ತಕಾಂಚನ ವರ್ಣಾಭಾತಪ್ತಕಾಂಚನ ಭೂಷಣಾ'' ಎಂದು ರಹಸ್ಯದಲ್ಲಿ ಹೇಳಲ್ಪಟ್ಟಿರುವ ಮಹಾಲಕ್ಷ್ಮಿಯು. ೩೭ ಆದಿಶಕ್ತಿಃ (ಮಾಯಾರೂಪಳು). ೩೮ ಆಕೃತಿಃ (ಆಕಾರರೂಪಿಣಿಯು) ೩೯ ಆಯತಾನನಾ (ಮಂದಹಾಸದಿಂದ ವಿಸ್ತಾರವಾದ ಮುಖವುಳ್ಳವಳು.) ॥೧೫॥

೪೦ ಆದಿತ್ಯಪದವೀಚಾರಾ (ಆದಿತ್ಯನ ಮಾರ್ಗದಲ್ಲಿ ಸಂಚರಿಸುವವಳು). ೪೧ ಆದಿತ್ಯಪರಿಸೇವಿತಾ (ಅದಿತಿಪುತ್ರರಿಂದ ಸೇವಿಸಲ್ಪಡತಕ್ಕವಳು) ಆಚಾರ್ಯಾ (ಸ್ವತಃ ವ್ಯಾಖ್ಯಾನ ಮಾಡತಕ್ಕವಳು). ೪೩ ಆವರ್ತನಾ (ಜಗತ್ತನ್ನು ವರ್ತಿಸು

**ಆಗ್ನೇಯಿಯಾ ಚಾಮರೀ ಚಾದ್ಯಾಽಚಾರಾಧ್ಯಾ ಚಾಸನಸ್ಥಿತಾ ।**
**ಆಧಾರ ನಿಲಯಾಧಾರಾ ಚಾಕಾಶಾಂತ ನಿವಾಸಿನೀ ॥೧೭॥**

**ಆದ್ಯಾಕ್ಷರಸಮಾಯುಕ್ತಾ ಚಾಂತರಾಕಾಶರೂಪಿಣೀ ।**
**ಆದಿತ್ಯಮಂಡಲಗತಾ ಚಾಂತರಧ್ವಾಂತನಾಶಿನೀ ॥೧೮॥**

**ಇಂದಿರಾ ಚೇಷ್ಟದಾ ಚೇಷ್ಟಾ ಚೇಂದೀವರ ನಿಭೇಕ್ಷಣಾ ।**
**ಇರಾವತೀ ಚೇಂದ್ರಪದಾ ಚೇಂದ್ರಾಣೀ ಚೇಂದುರೂಪಿಣೀ ॥೧೯॥**

---

ವವಳು). ೪೪ ಆಚಾರಾ (ದಕ್ಷಿಣಾದಿ ಆಚಾರರೂಪಿಣಿಯು) ೪೫ ಆದಿಮೂರ್ತಿ ನಿವಾಸಿನೀ (ಬ್ರಹ್ಮನಲ್ಲಿ ವಾಸಮಾಡುವ ಶೀಲವುಳ್ಳವಳು). ||೧೬||

೪೬ ಆಗ್ನೇಯೀ (ಅಗ್ನಿದೇವತಾಕವಾದ ಋಕ್ ಅಥವಾ ದಿಕ್‌ಸ್ವರೂಪಳು.) ೪೭ ಆಮರೀ (ದೇವತೆಗಳ ಪುರಸಂಬಂಧಿನಿಯು ಅಮರಾವತೀರೂಪಿಣಿಯು) ೪೮ ಆದ್ಯಾ (ಮೊದಲನೆಯವಳು) ೪೯ ಆರಾಧ್ಯಾ (ಸರ್ವರಿಂದಲೂ ಆರಾಧಿಸಲ್ಪಡತಕ್ಕವಳು). ೫೦ ಆಸನಸ್ಥಿತಾ (ಆಸನದಲ್ಲಿರುವವಳು). ೫೧ ಆಧಾರನಿಲಯಾ (ಮೂಲಾಧಾರವೇ ವಾಸಸ್ಥಾನವಾಗುಳ್ಳ ಕುಂಡಲಿನಿಗೆ ಆಧಾರವಾಗಿರುವವಳು). ೫೨ ಆಧಾರಾ (ಸರ್ವಾಧಾರರೂಪಿಣಿಯು) ೫೩ ಆಕಾಶಾಂತನಿವಾಸಿನೀ (ಅಹಂಕಾರ ತತ್ವದಲ್ಲಿ ನಾಶಹೊಂದುವ ಆಕಾಶದಲ್ಲಿ ವಾಸಮಾಡುವವಳು.) ||೧೭||

೫೪ ಆದ್ಯಾಕ್ಷರ ಸಮಾಯುಕ್ತಾ (ಆದ್ಯಕ್ಷರದಿಂದ ಕೂಡಿದವಳು) ೫೫ ಆಂತರಾಕಾಶರೂಪಿಣೀ (ದೇಹಮಧ್ಯದಲ್ಲಿರುವ ದಹರಾಕಾಶರೂಪಿಣಿಯು) ೫೬ ಆದಿತ್ಯಮಂಡಲಗತಾ (ಸೂರ್ಯಮಂಡಲವನ್ನು ಹೊಂದಿರುವವಳು) ೫೭ ಆಂತರಧ್ವಾಂತನಾಶಿನೀ (ಅವಿದ್ಯಾರೂಪವಾದ ಒಳಗಿನ ಅಂಧಕಾರವನ್ನು ನಾಶಮಾಡತಕ್ಕವಳು.) ||೧೮||

"ಇಂದಿರಾ" ಎಂಬ ನಾಮ ಮೊದಲುಗೊಂಡು "ಇಂದ್ರಾಕ್ಷೀ" ಎಂಬ ನಾಮದ ವರೆಗಿನ ಹದಿಮೂರು ನಾಮಗಳು "ಇಕಾರಾದಿಯಾಗಿ" ಹೇಳಲ್ಪಡುತ್ತವೆ.

೫೮ ಇಂದಿರಾ ೫೯ ಇಷ್ಟದಾ (ಇಷ್ಟಾರ್ಥವನ್ನು ಕೊಡತಕ್ಕವಳು) ೬೦ ಇಷ್ಟಾ ೬೧ ಇಂದೀವರನಿಭೇಕ್ಷಣಾ ಇಂದೀವರ (ಪುಷ್ಪಕ್ಕೆ ಸಮಾನವಾದ ಕಣ್ಣು (ನೋಟವುಳ್ಳವಳು) ೬೨ ಇರಾವತೀ (ಭೂವಾಕ್ಸುರಾಂಬುಗಳುಳ್ಳವಳು)

**ಇಕ್ಷುಕೋದಂಡಸಂಯುಕ್ತಾ ಚೇಷುಸಂಧಾನಕಾರಿಣೀ ।**
**ಇಂದ್ರನೀಲಸಮಾಕಾರಾ ಚೇಡಾಪಿಂಗಳರೂಪಿಣೀ ॥೨೦॥**

**ಇಂದ್ರಾಕ್ಷೀ ಚೇಶ್ವರೀದೇವೀ ಚೇಹಾತ್ರಯ ವಿವರ್ಜಿತಾ ।**
**ಉಮಾಚೋಷಾಹ್ಯುಡುನಿಭಾ ಉರ್ವಾರುಕ ಫಲಾನನಾ ॥೨೧॥**

**ಉಡುಪ್ರಭಾ ಚೋಡುಮತೀ ಹ್ಯುಡುಪಾ ಹ್ಯುಡುಮಧ್ಯಗಾ ।**
**ಊರ್ಧ್ವಂ ಚಾಪ್ಯೂರ್ಧ್ವಕೇಶೀಚಾಪ್ಯೂರ್ಧ್ವಾಧೋಗತಿಭೇದಿನೀ॥೨೨॥**

೬೩ ಇಂದ್ರಪದಾ ೬೪ ಇಂದ್ರಾಣೀ ೬೫ ಇಂದುರೂಪಿಣೀ (ಚಂದ್ರನಂತೆ ಪ್ರಕಾಶಮಾನಳಾದವಳು). ॥೧೯॥

೬೬ ಇಕ್ಷುಕೋದಂಡಸಂಯುಕ್ತಾ (ಪುಂಡ್ರೇಕ್ಷುವೆಂಬ ಕಬ್ಬಿನ ಧನುಸ್ಸಿನಿಂದ ಕೂಡಿದವಳು) ೬೭ ಇಷುಸಂಧಾನಕಾರಿಣೀ (ಬಾಣಸಂಧಾನವನ್ನು ಮಾಡುವವಳು. ೬೮ ಇಂದ್ರನೀಲಸಮಾಕಾರಾ (ಇಂದ್ರನೀಲಮಣಿಗೆ ಸಮವಾದ ಆಕಾರವುಳ್ಳವಳು) ೬೯ ಇಡಾಪಿಂಗಳ ರೂಪಿಣಿ (ಇಡಾ-ಪಿಂಗಳರೂಪವುಳ್ಳವಳು) ॥೨೦॥

೭೦ ಇಂದ್ರಾಕ್ಷೀ (ಶತಾಕ್ಷೀ ಎಂದು ಹೆಸರುಳ್ಳ ದೇವತೆಯು). "ಈ"ಕಾರಕ್ಕೆ ಎರಡು ನಾಮಗಳು. ೭೧ ಈಶ್ವರೀದೇವಿ (ದೇವತೆಗಳಿಗೆಲ್ಲರಿಗೂ ದೇವಿಯು) ೭೨ ಈಹಾತ್ರಯವಿವರ್ಜಿತಾ (ವಿತ್ತೇಷಣ, ದಾರೇಷಣ, ಪುತ್ರೇಷಣ ಎಂಬ ಈಷಣತ್ರಯದಿಂದ ಬಿಡಲ್ಪಟ್ಟವಳು). " ಉಮಾ " ಎಂಬ ನಾಮದಿಂದ " ಉಡುಮಧ್ಯಗಾ " ಎಂಬ ನಾಮದವರೆಗಿನ ಎಂಟು ನಾಮಗಳು " ಉಕಾರಾದಿ "ಯಾಗಿ ಹೇಳಲ್ಪಡುತ್ತವೆ. ೭೩ ಉಮಾ ೭೪ (ರಾತ್ರಿಶೇಷರೂಪಿಣೀ ಅಥವಾ ಬಾಣಾಸುರನ ಮಗಳು) ೭೫ ಉಡುನಿಭಾ (ನಕ್ಷತ್ರಗಳಿಗೆ ಸಮನಾದವಳು) ೭೬ ಉರ್ವಾರುಕಫಲಾನನಾ (ಕರ್ಕಟೀ, ಸೌತೇಕಾಯಿ ಫಲಕ್ಕೆ ಸಮನಾದ ಮುಖವುಳ್ಳವಳು). ॥೨೧॥

೭೭ ಉಡುಪ್ರಭಾ (ನಕ್ಷತ್ರಕಾಂತಿಯುಳ್ಳವಳು) ೭೮ ಉಡುಮತೀ ೭೯ ಉಡುಪಾ (ನಾವೆಯ ರೂಪವುಳ್ಳವಳು ಅಥವಾ ಚಂದ್ರರೂಪಿಣಿಯು) ೮೦ ಉಡುಮಧ್ಯಗಾ (ನಕ್ಷತ್ರಗಳ ಮಧ್ಯವರ್ತಿನಿಯು).

" ಊರ್ಧ್ವಂ " ಎಂಬ ನಾಮ ಮೊದಲುಗೊಂಡು " ವಾಗ್ಗ್ರಂಥದಾಯಿನೀ " ಎಂಬ ನಾಮದವರೆಗಿನ ಐದು ನಾಮಗಳು " ಊಕಾರಾದಿ "ಯಾಗಿ ಹೇಳಲ್ಪಡುತ್ತವೆ.

೮೧ ಊರ್ಧ್ವಂ (ಊರ್ಧ್ವದೇಶರೂಪಿಣಿಯು) ೮೨ ಊರ್ಧ್ವಕೇಶೀ ೮೩ ಊರ್ಧ್ವಾಧೋಗತಿಭೇದಿನೀ (ಉಚ್ಚನೀಚಮಾರ್ಗಭೇದಕಳು). ॥೨೨॥

**ಊರ್ಧ್ವಬಾಹುಪ್ರಿಯಾ ಚೋರ್ಮಿಮಲಾವಾಗ್ಗ್ರಂಥದಾಯಿನೀ ।**
**ಋತಂಚರ್ಷಿ ರ್ಋತುಮತೀ ಋಷಿದೇವನಮಸ್ಕೃತಾ ॥೨೩॥**

**ಋಗ್ವೇದಾ ಋಣಹರ್ತ್ರೀ ಚ ಋಷಿಮಂಡಲಚಾರಿಣೀ ।**
**ಋದ್ಧಿದಾ ಋಜುಮಾರ್ಗಸ್ಥಾ ಋಜುಧರ್ಮಾ ಋತುಪ್ರದಾ ॥೨೪॥**

**ಋಗ್ವೇದನಿಲಯಾ ಋಜ್ವೀ ಲುಪ್ತಧರ್ಮಪ್ರವರ್ತಿನೀ ।**
**ಲೂತಾರಿವರಸಂಭೂತಾ ಲೂತಾದಿವಿಷಹಾರಿಣೀ ॥೨೫॥**

---

೮೪ ಊರ್ಧ್ವಬಾಹುಪ್ರಿಯಾ ೮೫ ಊರ್ಮಿಮಾಲಾವಾಗ್ಗ್ರಂಥ ದಾಯಿನೀ (ಸಮುದ್ರದ ಅಲೆಗಳಂತೆ ಬರುವ ಕವಿತಾಶಕ್ತಿಯನ್ನು ಕೊಡತಕ್ಕವಳು).

" ಋತಂ " ಎಂಬ ನಾಮ ಮೊದಲುಗೊಂಡು " ಋಜ್ವೀ " ಎಂಬ ನಾಮದ ವರೆಗಿನ ಹದಿಮೂರು ನಾಮಗಳು " ಋಕಾರಾದಿಯಾಗಿ " ಹೇಳಲ್ಪಡುತ್ತವೆ.

೮೬ ಋತಂ (ಒಳ್ಳೆಯ ವಾಕ್ಸ್ವರೂಪಳು) ೮೭ ಋಷಿಃ (ದೇವರೂಪಳು) ೮೮ ಋತುಮತೀ (ರಜಸ್ವಲೆಯು) ೮೯ ಋಷಿದೇವನಮಸ್ಕೃತಾ (ಋಷಿ ಗಳಿಂದಲೂ, ದೇವತೆಗಳಿಂದಲೂ ನಮಸ್ಕರಿಸಲ್ಪಡತಕ್ಕವಳು). ॥೨೩॥

೯೦ ಋಗ್ವೇದಾ (ಋಗ್ವೇದ ಸ್ವರೂಪಳು) ೯೧ ಋಣಹರ್ತ್ರೀ (ಮೂರು ಸಾಲ ಗಳನ್ನು ಹೋಗಲಾಡಿಸತಕ್ಕವಳು) ೯೨ ಋಷಿಮಂಡಲ ಚಾರಿಣೀ (ಯಾವಾಗಲೂ ಋಷಿಸಮೂಹದಲ್ಲಿ ಸಂಚರಿಸುತ್ತಿರುವವಳು) ೯೩ ಋದ್ಧಿದಾ (ಅಭಿವೃದ್ಧಿಯ ನ್ನುಂಟುಮಾಡತಕ್ಕವಳು) ೯೪ ಋಜುಮಾರ್ಗಸ್ಥಾ (ಋಜುಮಾರ್ಗದಲ್ಲಿ ಸಂಚರಿ ಸುವವಳು) ೯೫ ಋಜುಧರ್ಮಾ (ಋಜುಧರ್ಮವುಳ್ಳವಳು) ೯೬ ಋತುಪ್ರದಾ (ಋತುಗಳನ್ನುಂಟುಮಾಡತಕ್ಕವಳು) ॥೨೪॥

೯೭ ಋಗ್ವೇದ ನಿಲಯಾ (ಋಗ್ವೇದವೇ ವಾಸಸ್ಥಾನವಾಗುಳ್ಳವಳು) ೯೮ ಋಜ್ವೀ (ಋಜುವಾಗಿರುವವಳು) (ದೀರ್ಘ " ೠ " ಕಾರಾದಿ ನಾಮಗಳು ಅಪ್ರಸಿದ್ಧವಾಗಿರುವುದರಿಂದ ಆ ನಾಮಗಳು ಹೇಳಲ್ಪಡಲಿಲ್ಲ) (" ಲೃ " ಕಾರಾದಿ ನಾಮಗಳು ಅಪ್ರಸಿದ್ಧವಾದಾಗ್ಯೂ ಅದರಲ್ಲಿ " ಲ " ಕಾರ ಸಂಬಂಧವಿರುವುದರಿಂದ ಅಂತಹ ಮೂರು ನಾಮಗಳು ಮಾತ್ರ ಹೇಳಲ್ಪಟ್ಟಿವೆ) ೯೯ ಲುಪ್ತಧರ್ಮಪ್ರವರ್ತಿನೀ ೧೦೦ ಲೂತಾರಿವರಸಂಭೂತಾ (ಲೂತವೆಂಬ ಕಾಹಿಲೆಯನ್ನು ನಾಶಮಾಡತಕ್ಕ

**ಏಕಾಕ್ಷರಾಚೈಕಮಾತ್ರಾ ಚೈಕಾ ಚೈಕೈಕನಿಷ್ಠಿತಾ ।**
**ಐಂದ್ರೀಹ್ಯೈರಾವತಾರೂಢಾ ಚೈಹಿಕಾಮುಷ್ಮಿಕಪ್ರದಾ ॥೨೬॥**

**ಓಂಕಾರಾ ಹ್ಯೋಷಧೀ ಚೋತಾ ಚೋತಪ್ರೋತ ನಿವಾಸಿನೀ ।**
**ಔರ್ವಾ ಹ್ಯೌಷಧಸಂಪನ್ನಾ ಔಪಾಸನಫಲಪ್ರದಾ ॥೨೭॥**

---

ಮಂತ್ರದ ಉತ್ಪತ್ತಿಯುಳ್ಳವಳು) ೧೦೧ ಲೂತಾದಿ ವಿಷಹಾರಿಣೀ (ಲೂತವೆಂಬ ವಿಷವನ್ನು ನಾಶಮಾಡತಕ್ಕವಳು)

" ಏಕಾಕ್ಷರಾ " ಎಂಬ ನಾಮದಿಂದ " ಏಕೈಕನಿಷ್ಠಿತಾ " ಎಂಬುದರವರೆಗೆ ನಾಲ್ಕು ನಾಮಗಳು ಏಕಾರಾದಿಯಾಗಿ ಹೇಳಲ್ಪಟ್ಟಿವೆ. ॥೨೫॥

೧೦೨ ಏಕಾಕ್ಷರಾ ೧೦೩ ಏಕಮಾತ್ರಾ ೧೦೪ ಏಕಾ ೧೦೫ ಏಕೈಕನಿಷ್ಠಿತಾ. " ಐಂದ್ರೀ " ಮುಂತಾದ ಮೂರು ನಾಮಗಳು ಐಕಾರಾದಿಯಾಗಿ ಹೇಳಲ್ಪಟ್ಟಿವೆ.

೧೦೬ ಐಂದ್ರೀ ೧೦೭ ಐರಾವತಾರೂಢಾ (ಐರಾವತವಾಹನವಾಗುಳ್ಳವಳು) ೧೦೮ ಐಹಿಕಾಮುಷ್ಮಿಕಪ್ರದಾ (ಇಹಪರಲೋಕಗಳ ಸೌಖ್ಯವನ್ನು ನೀಡುವವಳು) ॥೨೬॥

" ಓಂ " ಕಾರವೇ ಮೊದಲಾದ ನಾಲ್ಕು ನಾಮಗಳು " ಓ " ಕಾರಾದಿಯಾಗಿ ಹೇಳಲ್ಪಟ್ಟಿವೆ.

೧೦೯ ಓಂಕಾರಾ (ಪ್ರಣವಸ್ವರೂಪಿಣಿಯು) ೧೧೦ ಓಷಧೀ (ಔಷಧಿರೂಪಿಣಿಯು) ೧೧೧ ಓತಾ (ರತ್ನಗಳಲ್ಲಿ ಸೂತ್ರವು ಹೇಗೋ ಹಾಗೆ ಸರ್ವವಸ್ತುಗಳ ಒಳಗೂ ಇರತಕ್ಕವಳು) ೧೧೨ ಓತಪ್ರೋತನಿವಾಸಿನೀ (ಪರಮಾತ್ಮನಲ್ಲಿ ಸಮಸ್ತ ಪ್ರಪಂಚವೂ ಓತಪ್ರೋತದಂತೆ ಇರುತ್ತದೆ. ಅಂಥ ಓತಪ್ರೋತ ಜಗತ್ತಿನಲ್ಲಿ ಹಾಸು ಹೊಕ್ಕು ನೂಲುಗಳಂತೆ ವಾಸಮಾಡತಕ್ಕವಳು.)

" ಔರ್ವಾ " ಮುಂತಾದ ಮೂರು ನಾಮಗಳು " ಔ "ಕಾರಾದಿಗಳಾಗಿ ಹೇಳಲ್ಪಟ್ಟಿವೆ.

೧೧೩ ಔರ್ವಾ (ಭೂಮಿಸಂಭೂತಳು) ೧೧೪ ಔಷಧಸಂಪನ್ನಾ ಭವರೋಗಕ್ಕೆ ಔಷಧಿಯಾದ ಜ್ಞಾನವನ್ನು ಕೊಡುವವಳು. ೧೧೫ ಔಪಾಸನಫಲಪ್ರದಾ. (ಉಪಾಸನೆಯ ಫಲವನ್ನು ಕೊಡತಕ್ಕವಳು.) ॥೨೭॥

**ಅಂಡಮಧ್ಯಸ್ಥಿತಾ ದೇವೀ ಚಾಃಕಾರ ಮನುರೂಪಿಣೀ ।**
**ಕಾತ್ಯಾಯನೀ ಕಾಲರಾತ್ರಿಃ ಕಾಮಾಕ್ಷೀ ಕಾಮಸುಂದರೀ ॥೨೮॥**

**ಕಮಲಾ ಕಾಮಿನೀ ಕಾಂತಾ ಕಾಮದಾ ಕಾಲಕಂಠಿನೀ ।**
**ಕರಿಕುಂಭಸ್ತನಭರಾ ಕರವೀರಸುವಾಸಿನೀ ॥೨೯॥**

**ಕಲ್ಯಾಣೀ ಕುಂಡಲವತೀ ಕುರುಕ್ಷೇತ್ರನಿವಾಸಿನೀ ।**
**ಕುರುವಿಂದ ದಲಾಕಾರಾ ಕುಂಡಲೀ ಕುಮುದಾಲಯಾ ॥೩೦॥**

---

" ಅನುಸ್ವಾರವಿಸರ್ಗ "ಗಳಿಗೆ ಒಂದೊಂದು ನಾಮಗಳು.

೧೧೬ ಅಂಡಮಧ್ಯಸ್ಥಿತಾದೇವೀ (ಅಂಡಮಧ್ಯಸ್ಥಿತಗಳಾದ ಶಕ್ತಿಗಳಿಗೆ ದೇವಿಯು) ೧೧೭ ಅಃ ಕಾರ ಮನುರೂಪಿಣೀ (ವಿಸರ್ಗರೂಪವಾದ ಮಂತ್ರರೂಪಿಣಿಯು).

" ಕಾತ್ಯಾಯನೀ " ಎಂಬ ನಾಮ ಮೊದಲುಗೊಂಡು " ಕುಕ್ಷಿಸ್ಥಾಖಿಲ ವಿಷ್ಟಪಾ " ಎಂಬ ನಾಮದ ವರೆಗಿನ ಅರವತ್ತೊಂಬತ್ತು ನಾಮಗಳು " ಕಕಾರಾದಿಯಾಗಿ " ಹೇಳಲ್ಪಟ್ಟಿವೆ.

೧೧೮ ಕಾತ್ಯಾಯನೀ ೧೧೯ ಕಾಲರಾತ್ರಿಃ ೧೨೦ ಕಾಮಾಕ್ಷೀ ೧೨೧ ಕಾಮಸುಂದರೀ (ಮನ್ಮಥನ ಹೆಂಡಿತಿಯಾದ ರತಿಯಂತೆ ಸುಂದರಿಯು). ॥೨೮॥

೧೨೨ ಕಮಲಾ ೧೨೩ ಕಾಮಿನೀ ೧೨೪ ಕಾಂತಾ (ಮನೋಹರಸ್ವರೂಪಳು). ೧೨೫ ಕಾಮದಾ (ಇಷ್ಟಾರ್ಥವನ್ನು ಕೊಡತಕ್ಕವಳು) ೧೨೬ ಕಾಲಕಂಠಿನೀ ೧೨೭ ಕರಿಕುಂಭಸ್ತನಭರಾ (ಆನೆಯ ಕುಂಭಸ್ಥಳಕ್ಕೆ ಸಮನಾದ ಸ್ತನಗಳುಳ್ಳವಳು) ೧೨೮ ಕರವೀರ ಸುವಾಸಿನೀ (ಕರವೀರಪುರದಲ್ಲಿ ವಾಸಮಾಡುವವಳು, ಅಥವಾ ಕರವೀರನೆಂಬ ದೈತ್ಯ (ವಿಶೇಷ)ನಿಂದ ಪೂಜಿಸಲ್ಪಡತಕ್ಕ ಸುವಾಸಿನಿಯು, ಅಥವಾ ಮಹಾಲಕ್ಷ್ಮೀಕ್ಷೇತ್ರದಲ್ಲಿ ವಾಸಮಾಡತಕ್ಕವಳು). ॥೨೯॥

೧೨೯ ಕಲ್ಯಾಣೀ (ಮಂಗಳಕರಳು) ೧೩೦ ಕುಂಡಲವತೀ ೧೩೧ ಕುರುಕ್ಷೇತ್ರ ನಿವಾಸಿನೀ (ಕುರುಕ್ಷೇತ್ರದಲ್ಲಿ ವಾಸಮಾಡುವವಳು) ೧೩೨ ಕುರುವಿಂದ ದಲಾಕಾರಾ (ಕುರುವಿಂದವೆಂಬ ದಳಾಕಾರಳು) ೧೩೩ ಕುಂಡಲೀ ೧೩೪ ಕುಮುದಾಲಯಾ (ಕುಮುದಪುಷ್ಪವೇ ಮನೆಯಾಗಿ ಉಳ್ಳವಳು). ॥೩೦॥

ಕಾಲಜಿಹ್ವಾ ಕರಾಲಾಸ್ಯಾ ಕಾಲಿಕಾ ಕಾಲರೂಪಿಣೀ ।
ಕಮನೀಯಗುಣಾ ಕಾಂತಿಃ ಕಲಾಧಾರಾ ಕುಮುದ್ವತೀ ॥೩೧॥

ಕೌಶಿಕೀ ಕಮಲಾಕಾರಾ ಕಾಮಚಾರಪ್ರಭಂಜಿನೀ ।
ಕೌಮಾರೀ ಕರುಣಾಪಾಂಗೀ ಕಕುಬಂತಾ ಕರಿಪ್ರಿಯಾ ॥೩೨॥

ಕೇಸರೀ ಕೇಶವನುತಾ ಕದಂಬಕುಸುಮಪ್ರಿಯಾ
ಕಾಲಿಂದೀ ಕಾಲಿಕಾ ಕಾಂಚೀ ಕಲಶೋದ್ಭವಸಂಸ್ತುತಾ ॥೩೩॥

ಕಾಮಮಾತಾ ಕ್ರತುಮತೀ ಕಾಮರೂಪಾ ಕೃಪಾವತೀ ।
ಕುಮಾರೀ ಕುಂಡನಿಲಯಾ ಕಿರಾತೀ ಕೀರವಾಹನಾ ॥೩೪॥

---

೧೩೫ ಕಾಲಜಿಹ್ವಾ (ಭಯಂಕರವಾದ ನಾಲಿಗೆಯುಳ್ಳವಳು) ೧೩೬ ಕರಾಲಾಸ್ಯಾ (ಭಯಂಕರವಾದ ಮುಖವುಳ್ಳವಳು) ೧೩೭ ಕಾಲಿಕಾ ೧೩೮ ಕಾಲರೂಪಿಣೀ (ಭಯಂಕರವಾದ ಸ್ವರೂಪವುಳ್ಳವಳು) ೧೩೯ ಕಮನೀಯಗುಣಾ (ಶ್ರೇಷ್ಠವಾದ ಮನೋಹರವಾದ ಗುಣಗಳುಳ್ಳವಳು) ೧೪೦ ಕಾಂತಿಃ ೧೪೧ ಕಲಾಧಾರಾ (ಕಲೆಗಳಿಗೆ ಆಧಾರಳು) ೧೪೨ ಕುಮುದ್ವತೀ. ॥೩೧॥

೧೪೩ ಕೌಶಿಕೀ ೧೪೪ ಕಮಲಾಕಾರಾ (ಪದ್ಮಾಕಾರಳು) ೧೪೫ ಕಾಮಚಾರಪ್ರಭಂಜಿನೀ (ಸ್ವೇಚ್ಛಾಚಾರವನ್ನು ನಾಶಮಾಡತಕ್ಕವಳು) ೧೪೬ ಕೌಮಾರೀ (ಕುಮಾರ್ಯಾಕೃತಿಯುಳ್ಳವಳು) ೧೪೭ ಕರುಣಾಪಾಂಗೀ (ಕರುಣಾಮಯವಾದ ಓರೆನೋಟವುಳ್ಳವಳು) ೧೪೮ ಕಕುಬಂತಾ (ದಿಕ್ಕುಗಳೇ ಕೊನೆಯಾಗುಳ್ಳವಳು) ೧೪೯ ಕರಿಪ್ರಿಯಾ. ॥೩೨॥

೧೫೦ ಕೇಸರೀ (ಸಿಂಹರೂಪಿಣಿಯು) ೧೫೧ ಕೇಶವನುತಾ (ವಿಷ್ಣುವಿನಿಂದ ಹೊಗಳಲ್ಪಡತಕ್ಕವಳು) ೧೫೨ ಕದಂಬಕುಸುಮಪ್ರಿಯಾ (ಕದಂಬ (ಈಚಲ) ಪುಷ್ಪದಲ್ಲಿ ಪ್ರೀತಿಯುಳ್ಳವಳು) ೧೫೩ ಕಾಲಿಂದೀ ೧೫೪ ಕಾಲಿಕಾ ೧೫೫ ಕಾಂಚೀ ೧೫೬ ಕಲಶೋದ್ಭವಸಂಸ್ತುತಾ (ಅಗಸ್ತ್ಯನಿಂದ ಹೊಗಳಲ್ಪಡತಕ್ಕವಳು) ॥೩೩॥

೧೫೭ ಕಾಮಮಾತಾ (ಮನ್ಮಥ ಜನನೀ) ೧೫೮ ಕ್ರತುಮತೀ (ಯಜ್ಞಸ್ವರೂಪಿಣಿಯು) ೧೫೯ ಕಾಮರೂಪಾ (ಸ್ವೇಚ್ಛಾರೂಪವುಳ್ಳವಳು) ೧೬೦ ಕೃಪಾವತೀ (ದಯೆಯುಳ್ಳವಳು) ೧೬೧ ಕುಮಾರೀ ೧೬೨ ಕುಂಡನಿಲಯಾ

ಕೈಕೇಯೀ ಕೋಕಿಲಾಲಾಪಾ ಕೇತಕೀಕುಸುಮಪ್ರಿಯಾ ।
ಕಮಂಡಲುಧರಾ ಕಾಲೀ ಕರ್ಮನಿರ್ಮೂಲಕಾರಿಣೀ ॥೩೫॥

ಕಲಹಂಸಗತಿಃ ಕಕ್ಸಾ ಕೃತ ಕೌತುಕಮಂಗಳಾ ।
ಕಸ್ತೂರೀತಿಲಕಾ ಕಮ್ರಾ ಕರೀಂದ್ರಗಮನಾ ಕುಹೂಃ ॥೩೬॥

ಕರ್ಪೂರಲೇಪನಾ ಕೃಷ್ಣಾ ಕಪಿಲಾ ಕುಹರಾಶ್ರಯಾ ।
ಕೂಟಸ್ಥಾ ಕುಧರಾ ಕಮ್ರಾ ಕುಕ್ಷಿಸ್ಥಾಖಿಲವಿಷ್ಟಪಾ ॥೩೭॥

---

(ಚಿದಗ್ನಿಹೋತ್ರಕುಂಡವೇ ವಾಸಸ್ಥಾನವಾಗುಳ್ಳವಳು) ೧೬೩ ಕಿರಾತೀ ೧೬೪ ಕೀರವಾಹನಾ (ಶುಕವಾಹನಳು) ||೩೪||

೧೬೫ ಕೈಕೇಯೀ ೧೬೬ ಕೋಕಿಲಾಲಾಪಾ (ಕೋಗಿಲೆಯಂತೆ ಮನೋಹರವಾದ ಧ್ವನಿವುಳ್ಳವಳು; ೧೬೭ ಕೇತಕೀ ೧೬೮ ಕುಸುಮಪ್ರಿಯಾ ೧೬೯ ಕಮಂಡಲುಧರಾ ಕಮಂಡಲುವನ್ನು ಧರಿಸಿರುವವಳು (೧೭೦) ಕಾಲೀ (ಕ್ರೂರಸ್ವರೂಪಿಣಿಯು) ೧೭೧ ಕರ್ಮನಿರ್ಮೂಲಕಾರಿಣೀ (ಕರ್ಮವನ್ನು ನಾಶಮಾಡತಕ್ಕವಳು. ಎಂದರೆ ಮೋಕ್ಷಪ್ರದಳು) ||೩೫||

೧೭೨ ಕಲಹಂಸಗತಿಃ (ಹಂಸಪಕ್ಷಿಯಂತೆ ಮಂದಗಮನವುಳ್ಳವಳು) ೧೭೩ ಕಕ್ಸಾ (ಕುಬ್ಜಳು) ೧೭೪ ಕೃತಕೌತುಕಮಂಗಳಾ (ಕೌತುಕಬಂಧವೆಂಬ ಮಂಗಳಕಾರ್ಯವನ್ನು ಮಾಡಿರುವವಳು) ೧೭೫ ಕಸ್ತೂರೀತಿಲಕಾ (ಕಸ್ತೂರಿಯನ್ನು ತಿಲಕವಾಗಿ ಧರಿಸುವವಳು) ೧೭೬ ಕಮ್ರಾ (ಸುಂದರಿಯು) ೧೭೭ ಕರೀಂದ್ರಗಮನಾ (ಆನೆಯಂತೆ ನಡಿಗೆಯುಳ್ಳವಳು) ೧೭೮ ಕುಹೂಃ (ನಷ್ಟೇಂದು ಕಲಾಸ್ವರೂಪಿಣಿಯು) ||೩೬||

೧೭೯ ಕರ್ಪೂರಲೇಪನಾ (ಸರ್ವಾವಯವಗಳಿಗೂ ಕರ್ಪೂರವನ್ನು ಲೇಪಿಸಿಕೊಳ್ಳುವವಳು) ೧೮೦ ಕೃಷ್ಣಾ (ಷ್ಣಾ) (ಸರ್ವಭಕ್ತರಿಂದಲೂ ಆಕರ್ಷಿಸಲ್ಪಡತಕ್ಕವಳು) ೧೮೧ ಕಪಿಲಾ (ಕಪಿಲವರ್ಣವುಳ್ಳವಳು) ೧೮೨ ಕುಹರಾಶ್ರಯಾ (ಪಾತಾಳವನ್ನು ಆಶ್ರಯಿಸಿರತಕ್ಕವಳು) ೧೮೩ ಕೂಟಸ್ಥಾ ೧೮೪ ಕುಧರಾ (ಭೂಮಿಯನ್ನು ಧರಿಸಿರತಕ್ಕವಳು) ೧೮೫ ಕಮ್ರಾ (ಒಬ್ಬ ದೇವಾಂಗನಾಸ್ವರೂಪಳು) ೧೮೬ ಕುಕ್ಷಿಸ್ಥಾಖಿಲವಿಷ್ಟಪಾ (ಸಮಸ್ತಲೋಕಗಳನ್ನು ಹೃದಯದಲ್ಲಿ ಧರಿಸಿರತಕ್ಕವಳು.) ||೩೭||

ಖಡ್ಗಖೇಟಕರಾ ಖರ್ವಾ ಖೇಚರೀ ಖಗವಾಹನಾ ।
ಖಟ್ವಾಂಗಧಾರಿಣೀ ಖ್ಯಾತಾ ಖಗರಾಜೋಪರಿಸ್ಥಿತಾ ॥೩೮॥

ಖಲಘ್ನೀ ಖಂಡಿತಜರಾ ಖಂಡಾಖ್ಯಾನಪ್ರದಾಯಿನೀ ।
ಖಂಡೇಂದುತಿಲಕಾ ಗಂಗಾ ಗಣೇಶಗುಹಪೂಜಿತಾ ॥೩೯॥

ಗಾಯತ್ರೀ ಗೋಮತೀ ಗೀತಾ ಗಾಂಧಾರೀ ಗಾನಲೋಲುಪಾ ।
ಗೌತಮೀ ಗಾಮಿನೀ ಗಾಧಾ ಗಂಧರ್ವಾಪ್ಸರಸೇವಿತಾ ॥೪೦॥

---

"ಖಡ್ಗಖೇಟಕರಾ" ಎಂಬ ನಾಮ ಮೊದಲುಗೊಂಡು "ಖಂಡೇಂದುತಿಲಕಾ" ಎಂಬ ನಾಮದ ವರೆಗಿನ ಹನ್ನೊಂದು ನಾಮಗಳು "ಖ"ಕಾರಾದಿಯಾಗಿ ಹೇಳಲ್ಪಡುತ್ತವೆ.

೧೮೭ ಖಡ್ಗಖೇಟಕರಾ ಖಡ್ಗ ಖೇಟ ಮೊದಲಾದ ಆಯುಧಗಳನ್ನು ಕೈಯಲ್ಲುಳ್ಳವಳು) ೧೮೮ ಖರ್ವಾ ೧೮೯ ಖೇಚರೀ (ಆಕಾಶದಲ್ಲಿ ಸಂಚರಿಸುವವಳು) ೧೯೦ ಖಗವಾಹನಾ (ಪಕ್ಷಿವಾಹನಳು) ೧೯೧ ಖಟ್ವಾಂಗಧಾರಿಣೀ ೧೯೨ ಖ್ಯಾತಾ ೧೯೩ ಖಗರಾಜೋಪರಿಸ್ಥಿತಾ (ಗರುಡನ ಮೇಲೆ ಕುಳಿತಿರತಕ್ಕವಳು.॥೩೮॥

೧೯೪ ಖಲಘ್ನೀ (ದುಷ್ಟನಾಶಕಳು) ೧೯೫ ಖಂಡಿತಜರಾ (ಮುಪ್ಪಿಲ್ಲದವಳು) ೧೯೬ ಖಂಡಾಖ್ಯಾನಪ್ರದಾಯಿನೀ (ಪಾನಶಾಸ್ತ್ರ ಅಥವಾ ಭೇದಶಾಸ್ತ್ರವನ್ನು ತಿಳಿಸಿಕೊಡುವವಳು) ೧೯೭ ಖಂಡೇಂದುತಿಲಕಾ (ಅರ್ಧಚಂದ್ರಾಕಾರವಾದ ತಿಲಕವುಳ್ಳವಳು).

"ಗಂಗಾ" ಎಂಬ ನಾಮ ಮೊದಲುಗೊಂಡು "ಗುಹ್ಯಮಂಡಲವರ್ತಿನೀ" ಎಂಬ ನಾಮದವರೆಗಿನ ಮೂವತ್ತಾರು ನಾಮಗಳು "ಗ"ಕಾರಾದಿಯಾಗಿ ಹೇಳಲ್ಪಡುತ್ತವೆ. ೧೯೮ ಗಂಗಾ ೧೯೯ ಗಣೇಶಗುಹಪೂಜಿತಾ (ಗಣಪತಿ, ಷಣ್ಮುಖ ಇವರಿಂದ ಪೂಜಿಸಲ್ಪಡತಕ್ಕವಳು). ॥೩೯॥

೨೦೦ ಗಾಯತ್ರೀ ೨೦೧ ಗೋಮತೀ ೨೦೨ ಗೀತಾ ೨೦೩ ಗಾಂಧಾರೀ ೨೦೪ ಗಾನಲೋಲುಪಾ (ಸಂಗೀತದಲ್ಲಿ ಲೋಲಳಾಗಿರತಕ್ಕವಳು) ೨೦೫ ಗೌತಮೀ ೨೦೬ ಗಾಮಿನೀ (ಗಮನಸ್ವಭಾವವುಳ್ಳವಳು) ೨೦೭ ಗಾಧಾ (ಪ್ರತಿಷ್ಠಾರೂಪಿಣಿಯು) ೨೦೮ ಗಂಧರ್ವಾಪ್ಸರಸೇವಿತಾ (ಗಂಧರ್ವರಿಂದಲೂ, ಅಪ್ಸರೆಯರಿಂದಲೂ ಸೇವಿಸಲ್ಪಡತಕ್ಕವಳು) ॥೪೦॥

ಗೋವಿಂದಚರಣಾಕ್ರಾಂತಾ ಗುಣತ್ರಯವಿಭಾವಿತಾ ।
ಗಂಧರ್ವೀ ಗಹ್ವರೀ ಗೋತ್ರಾ ಗಿರಿಶಾ ಗಹನಾ ಗಮೀ ॥೪೧॥

ಗುಹಾವಾಸಾ ಗುಣವತೀ ಗುರುಪಾಪಪ್ರಣಾಶಿನೀ ।
ಗುರ್ವೀ ಗುಣವತೀ ಗುಹ್ಯಾ ಗೋಪ್ತವ್ಯಾ ಗುಣದಾಯಿನೀ ॥೪೨॥

ಗಿರಿಜಾ ಗುಹ್ಯಮಾತಂಗೀ ಗರುಡಧ್ವಜವಲ್ಲಭಾ ।
ಗರ್ವಾಪಹಾರಿಣೀ ಗೋದಾ ಗೋಕುಲಸ್ಥಾ ಗದಾಧರಾ ॥೪೩॥

ಗೋಕರ್ಣನಿಲಯಾಸಕ್ತಾ ಗುಹ್ಯಮಂಡಲವರ್ತಿನೀ ।
ಘರ್ಮದಾ ಘನದಾ ಘಂಟಾ ಘೋರದಾನವಮರ್ದಿನೀ ॥೪೪॥

---

೨೦೯ ಗೋವಿಂದ ಚರಣಾಕ್ರಾಂತಾ ೨೧೦ ಗುಣತ್ರಯವಿಭಾವಿತಾ (ಸತ್ವರಜಸ್ತಮೋಗುಣಗಳಿಂದ ತಿಳಿಯಲ್ಪಡತಕ್ಕವಳು) ೨೧೧ ಗಂಧರ್ವೀ ೨೧೨ ಗಹ್ವರೀ ೨೧೩ ಗೋತ್ರಾ (ಭೂದೇವಿಯು) ೨೧೪ ಗಿರಿಶಾ ೨೧೫ ಗಹನಾ (ತಿಳಿಯಲಸಾಧ್ಯಳಾದವಳು) ೨೧೬ ಗಮೀ (ಪರ್ಯಾಲೋಚನೆಮಾಡುವವಳು) ॥೪೧॥

೨೧೭ ಗುಹಾವಾಸಾ ೨೧೮ ಗುಣವತೀ ೨೧೯ ಗುರುಪಾಪಪ್ರಣಾಶಿನೀ (ಮಹಾಪಾಪಗಳನ್ನು ನಾಶಮಾಡತಕ್ಕವಳು) ೨೨೦ ಗುರ್ವೀ (ಶ್ರೇಷ್ಠಳಾದವಳು) ೨೨೧ ಗುಣವತೀ ೨೨೨ ಗುಹ್ಯಾ (ಅತಿರಹಸ್ಯವಾಗಿರುವವಳು) ೨೨೩ ಗೋಪ್ತವ್ಯಾ (ರಕ್ಷಿಸಲ್ಪಡತಕ್ಕವಳು) ೨೨೪ ಗುಣದಾಯಿನೀ (ಒಳ್ಳೆಯ ಗುಣಗಳನ್ನು ಕೊಡತಕ್ಕವಳು) ॥೪೨॥

೨೨೫ ಗಿರಿಜಾ ೨೨೬ ಗುಹ್ಯಮಾತಂಗೀ ೨೨೭ ಗರುಡಧ್ವಜವಲ್ಲಭಾ (ವಿಷ್ಣುಪತ್ನಿಯು) ೨೨೮ ಗರ್ವಾಪಹಾರಿಣೀ (ಅಹಂಕಾರನಾಶಕಳು) ೨೨೯ ಗೋದಾ ೨೩೦ ಗೋಕುಲಸ್ಥಾ (ಗೋಕುಲದಲ್ಲಿ ವಾಸಮಾಡುವವಳು) ೨೩೧ ಗದಾಧರಾ (ಗದೆಯನ್ನು ಧರಿಸಿರುವವಳು). ॥೪೩॥

೨೩೨ ಗೋಕರ್ಣನಿಲಯಾಸಕ್ತಾ (ಗೋಕರ್ಣದಲ್ಲಿ ವಾಸಮಾಡಲು ಆಸಕ್ತಿಯುಳ್ಳವಳು) ೨೩೩ ಗುಹ್ಯಮಂಡಲವರ್ತಿನೀ (ಗೋಪ್ಯವಾಗಿ ಮಂಡಲದಲ್ಲಿರತಕ್ಕವಳು).

ಘೃಣಿಮಂತ್ರಮಯೀ ಘೋಷಾ ಘನಸಂಪಾತದಾಯಿನೀ ।
ಘಂಟಾರವಪ್ರಿಯಾ ಘ್ರಾಣಾ ಘೃಣಿಸಂತುಷ್ಟ(ಷ್ಟಿ)ಕಾರಿಣೀ ॥೪೫॥

ಘನಾರಿಮಂಡಲಾ ಘೂರ್ಣಾ ಘೃತಾಚೀ ಘನವೇಗಿನೀ ।
ಜ್ಞಾನಧಾತುಮಯೀ ಚರ್ಚಾ ಚರ್ಚಿತಾ ಚಾರುಹಾಸಿನೀ ॥೪೬॥

---

" ಘರ್ಮದಾ " ಎಂಬ ನಾಮದಿಂದ " ಘನವೇಗಿನೀ " ಎಂಬ ನಾಮದವರೆಗಿನ ಹದಿನಾಲ್ಕು ನಾಮಗಳು " ಘ "ಕಾರಾದಿಯಾಗಿ ಹೇಳಲ್ಪಡುತ್ತವೆ.

೨೩೪ ಘರ್ಮದಾ (ಔಷ್ಣ್ಯವನ್ನುಂಟುಮಾಡುವವಳು) ೨೩೫ ಘನದಾ (ಮೋಡವನ್ನುಂಟುಮಾಡುವವಳು) ೨೩೬ ಘಂಟಾ ೨೩೭ ಘೋರದಾನವ ಮರ್ದಿನೀ (ಭಯಂಕರಸ್ವರೂಪರಾದ ರಾಕ್ಷಸರನ್ನು ನಾಶಮಾಡುವವಳು). ॥೪೪॥

೨೩೮ ಘೃಣಿಮಂತ್ರಮಯೀ (ಸೂರ್ಯಮಂತ್ರಮಯಿಯು) ೨೩೯ ಘೋಷಾ ೨೪೦ ಘನಸಂಪಾತದಾಯಿನೀ (ಮೇಘಗಳಿಂದ ಮಳೆ ಸುರಿಸತಕ್ಕವಳು) ೨೪೧ ಘಂಟಾರವಪ್ರಿಯಾ (ಘಂಟೆಯ ಶಬ್ದವನ್ನು ಕೇಳುವುದರಲ್ಲಿ ಪ್ರಿಯಳು) ೨೪೨ ಘ್ರಾಣಾ ೨೪೩ ಘೃಣಿಸಂತುಷ್ಟಕಾರಿಣೀ (ಸೂರ್ಯನಿಗೆ ಸಂತೋಷ ವನ್ನುಂಟುಮಾಡುವವಳು). ॥೪೫॥

೨೪೪ ಘನಾರಿಮಂಡಲಾ (ಅನೇಕ ರಾಕ್ಷಸರು ಶತ್ರುಗಳಾಗಿ ಉಳ್ಳವಳು) ೨೪೫ ಘೂರ್ಣಾ ೨೪೬ ಘೃತಾಚೀ ೨೪೭ ಘನವೇಗಿನೀ (ಮೇಘಸದೃಶ ವೇಗವುಳ್ಳವಳು).

(" ಙ "ಕಾರಾದಿ ನಾಮವು ಅಪ್ರಸಿದ್ಧವಾಗಿರುವುದರಿಂದಲೂ ಇದರಿಂದ ' ಜ್ಞ ' ಎಂಬ ಅಕ್ಷರವು ಉತ್ಪನ್ನವಾಗಿರುವುದರಿಂದಲೂ, ಅದನ್ನು ಭಾಷೆಯಲ್ಲಿ " ಙ "ಕಾರ ವೆಂದು ಉಚ್ಚಾರಮಾಡುವುದರಿಂದಲೂ ತದಾದಿಯಾದ ಒಂದೇ ನಾಮವು ಹೇಳಲ್ಪಡು ತ್ತದೆ.) ೨೪೮ ಜ್ಞಾನಧಾತುಮಯೀ (ಚಿತ್ಸ್ವರೂಪಳು).

" ಚರ್ಚಾ " ಎಂಬ ನಾಮ ಮೊದಲುಗೊಂಡು " ಚಾರುಹೇತುಕೀ " ಎಂಬ ನಾಮದ ವರೆಗಿನ ನಲವತ್ತೊಂಬತ್ತು ನಾಮಗಳು ಚಕಾರಾದಿಯಾಗಿ ಹೇಳಲ್ಪಡುತ್ತವೆ.

೨೪೯ ಚರ್ಚಾ (ವಿಷಯಗಳನ್ನು ಚರ್ಚಿಸುವವಳು) ೨೫೦ ಚರ್ಚಿತಾ (ಚಂದನಾದಿಗಳಿಂದ ಚರ್ಚಿತಳು) ೨೫೧ ಚಾರುಹಾಸಿನೀ (ನಗುವಸ್ವಭಾವವುಳ್ಳ ವಳು) ॥೪೬॥

ಚಟುಲಾ ಚಂಡಿಕಾ ಚಿತ್ರಾ ಚಿತ್ರಮಾಲ್ಯವಿಭೂಷಿತಾ ।
ಚತುರ್ಭುಜಾ ಚಾರುದಂತಾ ಚಾತುರೀ ಚರಿತಪ್ರದಾ ॥೪೭॥

ಚೂಲಿಕಾ ಚಿತ್ರವಸ್ತ್ರಾಂತಾ ಚಂದ್ರಮಃ ಕರ್ಣಕುಂಡಲಾ ।
ಚಂದ್ರಹಾಸಾ ಚಾರುದಾತ್ರೀ ಚಕೋರೀ ಚಂದ್ರಹಾಸಿನೀ ॥೪೮॥

ಚಂದ್ರಿಕಾ ಚಂದ್ರಧಾತ್ರೀ ಚ ಚೌರೀ ಚೌರಾ ಚ ಚಂಡಿಕಾ ।
ಚಂಚದ್ವಾಗ್ವಾದಿನೀ ಚಂದ್ರಚೂಡಾ ಚೋರವಿನಾಶಿನೀ ॥೪೯॥

ಚಾರುಚಂದನಲಿಪ್ತಾಂಗೀ ಚಂಚಚ್ಚಾಮರವೀಜಿತಾ ।
ಚಾರುಮಧ್ಯಾ ಚಾರುಗತಿಶ್ಚಂದಿಲಾ ಚಂದ್ರರೂಪಿಣೀ ॥೫೦॥

---

೨೫೨ ಚಟುಲಾ ೨೫೩ ಚಂಡಿಕಾ ೨೫೪ ಚಿತ್ರಾ ೨೫೫ ಚಿತ್ರಮಾಲ್ಯವಿಭೂಷಿತಾ (ಚಿತ್ರವಾದ ಹಾರದಿಂದ ಅಲಂಕರಿಸಲ್ಪಟ್ಟವಳು) ೨೫೬ ಚತುರ್ಭುಜಾ (ನಾಲ್ಕು ತೋಳುಗಳುಳ್ಳವಳು) ೨೫೭ ಚಾರುದಂತಾ (ಮನೋಹರವಾದ ಹಲ್ಲುಗಳುಳ್ಳವಳು) ೨೫೮ ಚಾತುರೀ ೨೫೯ ಚರಿತಪ್ರದಾ. ॥೪೭॥

೨೬೦ ಚೂಲಿಕಾ (ನಾಟಕಾಂಗಸ್ವರೂಪಳು) ೨೬೧ ಚಿತ್ರವಸ್ತ್ರಾಂತಾ (ವಿಚಿತ್ರವಾದ ವಸ್ತ್ರವುಳ್ಳವಳು) ೨೬೨ ಚಂದ್ರಮಃಕರ್ಣಕುಂಡಲಾ (ಚಂದ್ರನೇ ಕರ್ಣಾಭರಣವಾಗುಳ್ಳವಳು) ೨೬೩ ಚಂದ್ರಹಾಸಾ (ಚಂದ್ರನಂತೆ ಆಹ್ಲಾದಕರವಾದ ನಗುವುಳ್ಳವಳು) ೨೬೪ ಚಾರುದಾತ್ರೀ ೨೬೫ ಚಕೋರೀ ೨೬೬ ಚಂದ್ರಹಾಸಿನೀ (ಚಂದ್ರನನ್ನೂ ಹಾಸ್ಯಮಾಡುವಂತಹ ತೇಜಸ್ಸುಳ್ಳವಳು) ॥೪೮॥

೨೬೭ ಚಂದ್ರಿಕಾ ೨೬೮ ಚಂದ್ರಧಾತ್ರೀ ೨೬೯ ಚೌರೀ (ಭಕ್ತರ ಪಾಪಭಯಗಳ ನಾಶಕಳು) ೨೭೦ ಚೌರಾ (ಔಷಧಿವಿಶೇಷರೂಪಳು) ೨೭೧ ಚಂಡಿಕಾ ೨೭೨ ಚಂಚದ್ವಾಗ್ವಾದಿನೀ ೨೭೩ ಚಂದ್ರಚೂಡಾ (ಚಂದ್ರಶೇಖರಳು) ೨೭೪ ಚೋರವಿನಾಶಿನೀ (ಚೋರರನ್ನು ನಾಶಮಾಡತಕ್ಕವಳು) ॥೪೯॥

೨೭೫ ಚಾರುಚಂದನಲಿಪ್ತಾಂಗೀ (ಶ್ರೇಷ್ಠವಾದ ಚಂದನದಿಂದ ಲೇಪಿಸಲ್ಪಟ್ಟ ಅವಯವಗಳುಳ್ಳವಳು) ೨೭೬ ಚಂಚಚ್ಚಾಮರವೀಜಿತಾ (ಚಂಚಲವಾದ ಚಾಮರಗಳಿಂದ ಬೀಸಲ್ಪಡತಕ್ಕವಳು) ೨೭೭ ಚಾರುಮಧ್ಯಾ (ಮನೋಹರವಾದ ಸೊಂಟವುಳ್ಳವಳು) ೨೭೮ ಚಾರುಗತಿಃ (ಮನೋಹರವಾದ ಗಮನವುಳ್ಳವಳು)

**ಚಾರುಹೋಮಪ್ರಿಯಾ ಚಾರ್ವಾಚರಿತಾ ಚಕ್ರಬಾಹುಕಾ ।**
**ಚಂದ್ರಮಂಡಲಮಧ್ಯಸ್ಥಾ ಚಂದ್ರಮಂಡಲದರ್ಪಣಾ ॥೫೧॥**

**ಚಕ್ರವಾಕಸ್ತನೀ ಚೇಷ್ಟಾ ಚಿತ್ರಾ ಚಾರುವಿಲಾಸಿನೀ ।**
**ಚಿತ್ಸ್ವರೂಪಾ ಚಂದ್ರವತೀ ಚಂದ್ರಮಾಶ್ಚಂದನಪ್ರಿಯಾ ॥೫೨॥**

**ಚೋದಯಿತ್ರೀ ಚಿರಪ್ರಜ್ಞಾ ಚಾತಕಾ ಚಾರುಹೇತುಕೀ ।**
**ಛತ್ರಯಾತಾ ಛತ್ರಧರಾ ಛಾಯಾ ಛಂದಃಪರಿಚ್ಛದಾ ॥೫೩॥**
**ಛಾಯಾದೇವೀ ಛಿದ್ರನಖಾ ಛನ್ನೇಂದ್ರಿಯ ವಿಸರ್ಪಿಣೀ ।**

---

೨೭೯ ಚಂದಿಲಾ (ಕರ್ಣಾಟದೇಶದಲ್ಲಿ ಪ್ರಸಿದ್ಧವಾದ ದೇವತಾಸ್ವರೂಪಳು ಅಥವಾ ಚಂದ್ರಿಕಾಸ್ವರೂಪಳು) ೨೮೦ ಚಂದ್ರರೂಪಿಣೀ. ||೫೦||

೨೮೧ ಚಾರುಹೋಮಪ್ರಿಯಾ ೨೮೨ ಚಾರ್ವಾಚರಿತಾ ೨೮೩ ಚಕ್ರ ಬಾಹುಕಾ (ಸುದರ್ಶನವನ್ನು ಕೈಯಲ್ಲುಳ್ಳವಳು) ೨೮೪ ಚಂದ್ರಮಂಡಲಮಧ್ಯಸ್ಥಾ ೨೮೫ ಚಂದ್ರಮಂಡಲದರ್ಪಣಾ. ||೫೧||

೨೮೬ ಚಕ್ರವಾಕಸ್ತನೀ ೨೮೭ ಚೇಷ್ಟಾ ೨೮೮ ಚಿತ್ರಾ ೨೮೯ ಚಾರುವಿಲಾಸಿನೀ ೨೯೦ ಚಿತ್ಸ್ವರೂಪಾ (ಜ್ಞಾನಸ್ವರೂಪಳು) ೨೯೧ ಚಂದ್ರ ವತೀ ೨೯೨ ಚಂದ್ರಮಾಃ (ಚಂದ್ರಸ್ವರೂಪಳು) ೨೯೩ ಚಂದನಪ್ರಿಯಾ. ||೫೨||

೨೯೪ ಚೋದಯಿತ್ರೀ (ಪ್ರೇರಿಸುವವಳು) ೨೯೫ (ಚಿರಪ್ರಜ್ಞಾ) ೨೯೬ ಚಾತಕಾ ೨೯೭ ಚಾರುಹೇತುಕೀ. (ಜಗತ್ತಿನ ಸೃಷ್ಟಿಗೆ ಕಾರಣಳಾದವಳು).

" ಛತ್ರಯಾತಾ " ಎಂಬ ನಾಮ ಮೊದಲುಗೊಂಡು " ಛೇದನಪ್ರಿಯಾ " ಎಂಬ ನಾಮದವರೆಗಿನ ಹದಿನಾಲ್ಕು ನಾಮಗಳು " ಛಕಾರಾದಿ "ಯಾಗಿ ಹೇಳ ಲ್ಪಡುತ್ತವೆ.

೨೯೮ ಛತ್ರಯಾತಾ ೨೯೯ ಛತ್ರಧರಾ ೩೦೦ ಛಾಯಾ ೩೦೧ ಛಂದಃ ಪರಿಚ್ಛದಾ (ಛಂದಸ್ಸ್ವರೂಪಳು) ೩೦೨ ಛಾಯಾದೇವೀ ೩೦೩ ಛಿದ್ರ ನಖಾ (ರಂಧ್ರಯುಕ್ತ ಉಗುರುಗಳುಳ್ಳವಳು) ೩೦೪ ಛನ್ನೇಂದ್ರಿಯವಿಸರ್ಪಿಣೀ (ಗೋಪ್ಯೇಂದ್ರಿಯ ಸಂಚರಣ ಸ್ವಭಾವವುಳ್ಳವಳು). ||೫೩||

ಛಂದೋಽನುಷ್ಟುಪ್ ಪ್ರತಿಷ್ಠಾಂತಾ ಛಿದ್ರೋಪದ್ರವಭೇದಿನೀ ॥೫೪॥

ಛೇದಾ ಛತ್ರೇಶ್ವರೀ ಛಿನ್ನಾ ಛುರಿಕಾ ಛೇದನಪ್ರಿಯಾ ।
ಜನನೀ ಜನ್ಮರಹಿತಾ ಜಾತವೇದಾ ಜಗನ್ಮಯೀ ॥೫೫॥

ಜಾಹ್ನವೀ ಜಟಿಲಾ ಜೇತ್ರೀ ಜರಾಮರಣವರ್ಜಿತಾ ।
ಜಂಬೂದ್ವೀಪವತೀ ಜ್ವಾಲಾ ಜಯಂತೀ ಜಯಶಾಲಿನೀ ॥೫೬॥

ಜಿತೇಂದ್ರಿಯಾ ಜಿತಕ್ರೋಧಾ ಜಿತಾಮಿತ್ರಾ ಜಗತ್ಪ್ರಿಯಾ ।
ಜಾತರೂಪಮಯೀ ಜಿಹ್ವಾ ಜಾನಕೀ ಜಗತೀ ಜರಾ ॥೫೭॥

---

೨೦೫ ಛಂದೋಽನುಷ್ಟುಪ್ರತಿಷ್ಠಾಂತಾ (ಅನುಷ್ಟುಪ್‌ಛಂದಸ್ಥ ಮಂತ್ರದಿಂದ ಬೋಧ್ಯಳು) ೨೦೬ ಛಿದ್ರೋಪದ್ರವಭೇದಿನೀ (ಕೃತ್ರಿಮೋಪದ್ರವಗಳನ್ನು ನಾಶ ಮಾಡತಕ್ಕವಳು) ॥೫೪॥

೨೦೭ ಛೇದಾ ೨೦೮ ಛತ್ರೇಶ್ವರೀ ೨೦೯ ಛಿನ್ನಾ ೨೧೦ ಛುರಿಕಾ ೨೧೧ ಛೇದನಪ್ರಿಯಾ ಭಕ್ತರ ದುಃಖನಾಶಿನಿಯು. " ಜನನೀ " ಎಂಬ ನಾಮ ಮೊದಲುಗೊಂಡು " ಜ್ವಲನ್ಮಾಣಿಕ್ಯ ಕುಂಡಲಾ" ಎಂಬ ನಾಮದ ವರೆಗಿನ ನಲವತ್ತು ನಾಮಗಳು " ಜ " ಕಾರಾದಿಯಾಗಿ ಹೇಳಲ್ಪಡುತ್ತವೆ.

೨೧೨ ಜನನೀ (ಜಗನ್ಮಾತೆಯು) ೨೧೩ ಜನ್ಮರಹಿತಾ (ಜನ್ಮವಿಲ್ಲದವಳು) ೨೧೪ ಜಾತವೇದಾ (ಅಗ್ನಿಗೆ ಸಮನಾದವಳು) ೨೧೫ ಜಗನ್ಮಯೀ (ಸರ್ವಲೋಕವ್ಯಾಪಕಳು) ॥೫೫॥

೨೧೬ ಜಾಹ್ನವೀ (ಜಹ್ನುತನಯೆಯು) ೨೧೭ ಜಟಿಲಾ ೨೧೮ ಜೇತ್ರೀ (ಜಯಶೀಲಳು) ೨೧೯ ಜರಾಮರಣವರ್ಜಿತಾ (ಮುಪ್ಪುಸಾವು ಇಲ್ಲದವಳು) ೨೨೦ ಜಂಬೂದ್ವೀಪವತೀ (ಜಂಬೂದ್ವೀಪದಲ್ಲಿ ವಾಸಿಸುವವಳು) ೨೨೧ ಜ್ವಾಲಾ ೨೨೨ ಜಯಂತೀ ೨೨೩ ಜಯಶಾಲಿನೀ. ॥೫೬॥

೨೨೪ ಜಿತೇಂದ್ರಿಯಾ ೨೨೫ ಜಿತಕ್ರೋಧಾ ೨೨೬ ಜಿತಾಮಿತ್ರಾ (ಶತ್ರುಗಳನ್ನು ಜಯಿಸಿದವಳು) ೨೨೭ ಜಗತ್ಪ್ರಿಯಾ ೨೨೮ ಜಾತರೂಪಮಯೀ ೨೨೯ ಜಿಹ್ವಾ ೨೩೦ ಜಾನಕೀ ೨೩೧ ಜಗತೀ ೨೩೨ ಜರಾ. ॥೫೭॥

ಜನಿತ್ರೀ ಜಹ್ನುತನಯಾ ಜಗತ್ತ್ರಯ ಹಿತೈಷಿಣೀ ।
ಜ್ವಾಲಾಮುಖೀ ಜಪವತೀ ಜ್ವರಘ್ನೀ ಜಿತವಿಷ್ಟಪಾ ॥೫೮॥

ಜಿತಾಕ್ರಾಂತಮಯೀ ಜ್ವಾಲಾ ಜಾಗ್ರತೀ ಜ್ವರದೇವತಾ ।
ಜ್ವಲಂತೀ ಜಲದಾ ಜ್ಯೇಷ್ಠಾ ಜ್ಯಾಘೋಷಾಸ್ಫೋಟದಿಙ್ಮುಖೀ ॥೫೯॥

ಜಂ(ಜ್ಯಂ)ಭಿನೀ ಜೃಂಭಣಾ ಜೃಂಭಾ ಜ್ವಲನ್ಮಾಣಿಕ್ಯಕುಂಡಲಾ ।
ಝಿಂಝಿಕಾ ಝಣನಿರ್ಘೋಷಾ ಝಂಝಾಮಾರುತವೇಗಿನೀ ॥೬೦॥

---

೩೩೩ ಜನಿತ್ರೀ ೩೩೪ ಜಹ್ನುತನಯಾ ೩೩೫ ಜಗತ್ತ್ರಯಹಿತೈಷಿಣೀ ೩೩೬ ಜ್ವಾಲಾಮುಖೀ ೩೩೭ ಜಪವತೀ ೩೩೮ ಜ್ವರಘ್ನೀ (ಜ್ವರವನ್ನು ನಾಶಮಾಡತಕ್ಕವಳು) ೩೩೯ ಜಿತವಿಷ್ಟಪಾ (ಸಮಸ್ತ ಲೋಕಗಳನ್ನೂ ಜಯಿಸಿದವಳು) ॥೫೮॥

೩೪೦ ಜಿತಾಕ್ರಾಂತಮಯೀ (ಜಯದಿಂದ ಆಕ್ರಮಿಸಲ್ಪಟ್ಟ ಪುರುಷರುಳ್ಳವಳು) ೩೪೧ ಜ್ವಾಲಾ ೩೪೨ ಜಾಗ್ರತೀ (ಎಚ್ಚರವಾಗಿರುವವಳು) ೩೪೩ ಜ್ವರದೇವತಾ ೩೪೪ ಜ್ವಲಂತೀ (ಪ್ರಕಾಶಮಾನಳು) ೩೪೫ ಜಲದಾ (ನೀರನ್ನುಂಟುಮಾಡುವವಳು) ೩೪೬ ಜ್ಯೇಷ್ಠಾ ೩೪೭ ಜ್ಯಾಘೋಷಾಸ್ಫೋಟದಿಙ್ಮುಖೀ (ಧನುಷ್ಟಂಕಾರದಿಂದ ವ್ಯಾಪಿಸಿದ ದಿಗಂತವುಳ್ಳವಳು) ॥೫೯॥

೩೪೮ ಜಂಭಿನೀ (ಒಳ್ಳೆಯ ಭಕ್ಷ್ಯ ಮತ್ತು ದಂತಗಳುಳ್ಳವಳು) ೩೪೯ ಜೃಂಭಣಾ ೩೫೦ ಜೃಂಭಾ ೩೫೧ ಜ್ವಲನ್ಮಾಣಿಕ್ಯ ಕುಂಡಲಾ (ಪ್ರಕಾಶಮಾನವಾದ ಮಾಣಿಕ್ಯದ ಕರ್ಣಾಭರಣವುಳ್ಳವಳು)

" ಝುಂಝುತಾ " ಎಂಬ ನಾಮದಿಂದ ನಾಲ್ಕು ನಾಮಗಳು " ಝ "ಕಾರಾದಿಯಾದವುಗಳು.

೩೫೨ ಝುಂಝುತಾ (ಪಕ್ಷಿವಿಶೇಷಸ್ವರೂಪಳು) ೩೫೩ ಝಣನಿರ್ಘೋಷಾ (ಝಣವೆಂಬ ಶಬ್ದವುಳ್ಳವಳು) ೩೫೪ ಝಂಝಾಮಾರುತವೇಗಿನೀ (ಝಂಝಾಮಾರುತ ವೇಗದಂತೆ ವೇಗವುಳ್ಳವಳು) ॥೬೦॥

**ಝಲ್ಲರೀವಾದ್ಯಕುಶಲಾ ಞರೂಪಾ ಞಭುಜಾಸ್ಮೃತಾ ।**
**ಟಂಕಬಾಣಸಮಾಯುಕ್ತಾ ಟಂಕಿನೀ ಟಂಕಭೇದಿನೀ ॥೬೧॥**

**ಟಂಕೀಗಣ ಕೃತಾಘೋಷಾ ಟಂಕನೀಯಮಹೋರಸಾ ।**
**ಟಂಕಾರಕಾರಿಣೀ ದೇವೀ ಠಠಶಬ್ದನಿನಾದಿನೀ ॥೬೨॥**

**ಡಾಮರೀ ಡಾಕಿನೀ ಡಿಂಭಾ ಡುಂಡುಮಾರೈಕನಿರ್ಜಿತಾ ।**
**ಡಾಮರೀ ತಂತ್ರಮಾರ್ಗಸ್ಥಾ ಡಮಡ್ಡಮರು ನಾದಿನೀ ॥೬೩॥**

---

೩೫೫ ಝಲ್ಲರೀವಾದ್ಯಕುಶಲಾ (ಝಲ್ಲರೀ ಎಂಬ ವಾದ್ಯವನ್ನು ನುಡಿಸುವುದರಲ್ಲಿ ಕುಶಲಳು) "ಞ" ಕಾರಾದಿಯಾದ ನಾಮಗಳು ಎರಡು ಹೇಳಲ್ಪಟ್ಟಿವೆ.

೩೫೬ ಞರೂಪಾ (ವೃಷಭಸ್ವರೂಪಳು) ೩೫೭ ಞಭುಜಾ (ಹಸ್ತದಲ್ಲಿ ಶುಕವುಳ್ಳವಳು)

"ಟಂಕಬಾಣಾ" ಎಂಬ ನಾಮದಿಂದ ಮೊದಲಾದ ಆರು ನಾಮಗಳು "ಟ" ಕಾರಾದಿಯಾಗಿ ಹೇಳಲ್ಪಟ್ಟಿವೆ.

೩೫೮ ಟಂಕಬಾಣಸಮಾಯುಕ್ತಾ ೩೫೯ ಟಂಕಿನೀ (ಕೊಡಲಿಯನ್ನು ಧರಿಸಿರುವವಳು) ೩೬೦ ಟಂಕಭೇದಿನೀ (ಕೊಡಲಿಯನ್ನು ಭೇದಿಸುವವಳು) ॥೬೧॥

೩೬೧ ಟಂಕೀಗಣಕೃತಾಘೋಷಾ (ರುದ್ರಗಣದಂತೆ "ಆ" ಎಂಬ ಗರ್ಜನೆಯನ್ನು ಮಾಡತಕ್ಕವಳು) ೩೬೨ ಟಂಕನೀಯ ಮಹೋರಸಾ (ವರ್ಣನೀಯವಾದ ವಿಶಾಲ ವಕ್ಷಸ್ಥಳವುಳ್ಳವಳು) ೩೬೩ ಟಂಕಾರಕಾರಿಣೀದೇವೀ (ಟಂಕಾರಮಾಡುವ ದೇವಿಯರ ದೇವಿಯು)

"ಠ" ಕಾರಾದಿ ನಾಮವು ಒಂದು. ೩೬೪ ಠಠಶಬ್ದನಿನಾದಿನೀ. ॥೬೨॥

"ಡ" ಕಾರಾದಿಯಾದ ನಾಮಗಳು ಎಂಟು ಹೇಳಲ್ಪಡುತ್ತವೆ.

೩೬೫ ಡಾಮರೀ ೩೬೬ ಡಾಕಿನೀ ೩೬೭ ಡಿಂಭಾ (ಬಾಲರೂಪಳು) ೩೬೮ ಡುಂಡುಮಾರೈಕನಿರ್ಜಿತಾ (ಡುಂಡುಮಾರನೆಂಬ ರಾಕ್ಷಸನನ್ನು ಒಬ್ಬಳೇ ಜಯಿಸಿದವಳು) ೩೬೯ ಡಾಮರೀ ತಂತ್ರಮಾರ್ಗಸ್ಥಾ ೩೭೦ ಡಮಡ್ಡಮರುನಾದಿನೀ. ॥೬೩॥

ಡಿಂಡೀರವಸಹಾ ಡಿಂಭಲಸತ್ಕ್ರೀಡಾಪರಾಯಣಾ ।
ಢುಂಢಿವಿಘ್ನೇಶಜನನೀ ಢಕ್ಕಾಹಸ್ತಾ ಢಿಲಿವ್ರಜಾ ॥೬೪॥

ನಿತ್ಯಜ್ಞಾನಾ ನಿರುಪಮಾ ನಿರ್ಗುಣಾ ನರ್ಮದಾ ನದೀ ।
ತ್ರಿಗುಣಾ ತ್ರಿಪದಾ ತಂತ್ರೀ ತುಲಸೀ ತರುಣಾ ತರುಃ ॥೬೫॥

ತ್ರಿವಿಕ್ರಮಪದಾಕ್ರಾಂತಾ ತುರೀಯಪದಗಾಮಿನೀ ।
ತರುಣಾದಿತ್ಯಸಂಕಾಶಾ ತಾಮಸೀ ತುಹಿನಾ ತುರಾ ॥೬೬॥

---

೩೭೧ ಡಿಂಡೀರವಸಹಾ (ಡಿಂಡೀರವೆಂಬ ವಾದ್ಯಶಬ್ದವನ್ನು ಸಹಿಸುವವಳು) ೩೭೨ ಡಿಂಭಲಸತ್ಕ್ರೀಡಾಪರಾಯಣಾ ಮಕ್ಕಳ ಒಳ್ಳೆಯ ಆಟದಲ್ಲಿ ಆಸಕ್ತಳು.

"ಢ" ಕಾರಾದಿಯಾಗಿ ಮೂರು ನಾಮಗಳು ಹೇಳಲ್ಪಡುತ್ತವೆ.

೩೭೩ ಢುಂಢಿವಿಘ್ನೇಶಜನನೀ (ಢುಂಢಿರಾಜನ ತಾಯಿಯು) ೩೭೪ ಢಕ್ಕಾಹಸ್ತಾ (ಢಕ್ಕೆಯನ್ನು ಕೈಯಲ್ಲಿ ಹಿಡಿದಿರುವವಳು) ೩೭೫ ಢಿಲಿವ್ರಜಾ (ಢಿಲಿ ಎಂಬ ದೇವಗಣದಿಂದ ಕೂಡಿರುವವಳು) ॥೬೪॥

"ಣ"ಕಾರಾದಿ ನಾಮಗಳು ಅಪ್ರಸಿದ್ಧವಾದ್ದರಿಂದ ಅದಕ್ಕೆ ಬದಲು ನಕಾರಾದಿಯಾದ ಐದು ನಾಮಗಳು ಹೇಳಲ್ಪಡುತ್ತವೆ.

೩೭೬ ನಿತ್ಯಜ್ಞಾನಾ ೩೭೭ ನಿರುಪಮಾ ೩೭೮ ನಿರ್ಗುಣಾ ೩೭೯ ನರ್ಮದಾ ೩೮೦ ನದೀ.

"ತ್ರಿಗುಣಾ" ಎಂಬ ನಾಮ ಮೊದಲುಗೊಂಡು ಆರವತ್ತೆರಡು ನಾಮಗಳು "ತ"ಕಾರಾದಿಯಾಗಿ ಹೇಳಲ್ಪಟ್ಟಿವೆ.

೩೮೧ ತ್ರಿಗುಣಾ (ಸತ್ವರಜಸ್ತಮೋಗುಣಯುಕ್ತಳು) ೩೮೨ ತ್ರಿಪದಾ ೩೮೩ ತಂತ್ರೀ ೩೮೪ ತುಲಸೀ ೩೮೫ ತರುಣಾ ೩೮೬ ತರುಃ. ॥೬೫॥

೩೮೭ ತ್ರಿವಿಕ್ರಮಪದಾಕ್ರಾಂತಾ ೩೮೮ ತುರೀಯಪದಗಾಮಿನೀ (ಮೋಕ್ಷಮಾರ್ಗದಲ್ಲಿ ಸಂಚರಿಸುವವಳು) ೩೮೯ ತರುಣಾದಿತ್ಯಸಂಕಾಶಾ (ಬಾಲಸೂರ್ಯಸಮಪ್ರಭೆಯುಳ್ಳವಳು) ೩೯೦ ತಾಮಸೀ (ತಾಮಸಸ್ವಭಾವವೂ ಉಳ್ಳವಳು) ೩೯೧ ತುಹಿನಾ ೩೯೨ ತುರಾ. ॥೬೬॥

ತ್ರಿಕಾಲಜ್ಞಾನಸಂಪನ್ನಾ ತ್ರಿವಲೀ ಚ ತ್ರಿಲೋಚನಾ ।
ತ್ರಿಶಕ್ತಿಸ್ತ್ರಿಪುರಾ ತುಂಗಾ ತುರಂಗವದನಾ ತಥಾ ॥೬೭॥

ತಿಮಿಂಗಿಲಗಿಲಾ ತೀವ್ರಾ ತ್ರಿಸ್ರೋತಾ ತಾಮಸಾದಿನೀ ।
ತಂತ್ರಮಂತ್ರವಿಶೇಷಜ್ಞಾ ತನುಮಧ್ಯಾ ತ್ರಿವಿಷ್ಟಪಾ ॥೬೮॥ ✓

ತ್ರಿಸಂಧ್ಯಾ ತ್ರಿಸ್ತನೀ ತೋಷಾಸಂಸ್ಥಾ ತಾಲಪ್ರತಾಪಿನೀ ।
ತಾಟಂಕಿನೀ ತುಷಾರಾಭಾ ತುಹಿನಾಚಲವಾಸಿನೀ ॥೬೯॥

ತಂತುಜಾಲಸಮಾಯುಕ್ತಾ ತಾರಹಾರಾವಲಿಪ್ರಿಯಾ ।
ತಿಲಹೋಮಪ್ರಿಯಾ ತೀರ್ಥಾ ತಮಾಲಕುಸುಮಾಕೃತಿಃ ॥೭೦॥

ತಾರಕಾ ತ್ರಿಯುತಾ ತನ್ವೀ ತ್ರಿಶಂಕುಪರಿವಾರಿತಾ ।
ತಲೋದರೀ ತಿಲಾಭೂಷಾ ತಾಟಂಕಪ್ರಿಯವಾಹಿನೀ ॥೭೧॥

---

೩೯೩ ತ್ರಿಕಾಲಜ್ಞಾನಸಂಪನ್ನಾ ೩೯೪ ತ್ರಿವಲೀ ೩೯೫ ತ್ರಿಲೋಚನಾ ೩೯೬ ತ್ರಿಶಕ್ತಿಃ ೩೯೭ ತ್ರಿಪುರಾ ೩೯೮ ತುಂಗಾ ೩೯೯ ತುರಂಗವದನಾ. ॥೬೭॥

೪೦೦ ತಿಮಿಂಗಿಲಗಿಲಾ ೪೦೧ ತೀವ್ರಾ ೪೦೨ ತ್ರಿಸ್ರೋತಾ ೪೦೩ ತಾಮಸಾದಿನೀ ೪೦೪ ತಂತ್ರಮಂತ್ರವಿಶೇಷಜ್ಞಾ ೪೦೫ ತನುಮಧ್ಯಾ ೪೦೬ ತ್ರಿವಿಷ್ಟಪಾ. ॥೬೮॥

೪೦೭ ತ್ರಿಸಂಧ್ಯಾ ೪೦೮ ತ್ರಿಸ್ತನೀ (ಮಲಯಧ್ವಜರಾಜನ ಮಗಳಾದ ಪಾರ್ವತಿಯು) ೪೦೯ ತೋಷಾಸಂಸ್ಥಾ (ಸಂತೋಷಸ್ಥಿತಿಯುಳ್ಳವಳು.) ೪೧೦ ೪೧೧ ತಾಟಂಕಿನೀ ೪೧೨ ತುಷಾರಾಭಾ ಶುಭ್ರಕಾಂತಿಯುಳ್ಳವಳು. ೪೧೩ ತುಹಿನಾಚಲವಾಸಿನೀ (ಹಿಮಾಲಯದಲ್ಲಿ ವಾಸಿಸುವವಳು.) ॥೬೯॥

೪೧೪ ತಂತುಜಾಲಸಮಾಯುಕ್ತಾ (ಸಣ್ಣ ದಾರದ ಬಲೆಗಳಿಂದ ಕೂಡಿದ ಸ್ವರೂಪವುಳ್ಳವಳು) ೪೧೫ ತಾರಹಾರಾವಲಿಪ್ರಿಯಾ (ಮಣಿಹಾರಾವಳಿಯಲ್ಲಿ ಪ್ರೀತಿಯುಳ್ಳವಳು) ೪೧೬ ತಿಲಹೋಮಪ್ರಿಯಾ (ತಿಲಹೋಮದಲ್ಲಿ ಪ್ರೀತಿಯುಳ್ಳವಳು.) ೪೧೭ ತೀರ್ಥಾ (ತೀರ್ಥಸ್ವರೂಪಳು) ೪೧೮ ತಮಾಲಕುಸುಮಾಕೃತಿಃ (ಹೊಂಗೇ ಹೂವಿನ ಆಕಾರವುಳ್ಳವಳು). ॥೭೦॥

೪೧೯ ತಾರಕಾ (ನಕ್ಷತ್ರಸ್ವರೂಪಳು) ೪೨೦ ತ್ರಿಯುತಾ (ವೇದತ್ರಯಸ್ವರೂಪಳು) ೪೨೧ ತನ್ವೀ ೪೨೨ ತ್ರಿಶಂಕುಪರಿವಾರಿತಾ (ತ್ರಿಶಂಕುವಿನಿಂದ ಸೇವಿಸಲ್ಪ

ತ್ರಿಜಟಾ ತಿತ್ತಿರೀ ತೃಷ್ಣಾ ತ್ರಿವಿಧಾ ತರುಣಾಕೃತಿಃ ।
ತಪ್ತಕಾಂಚನಸಂಕಾಶಾ ತಪ್ತಕಾಂಚನ ಭೂಷಣಾ ॥೭೨॥

ತ್ರ್ಯಯಂಬಕಾ ತ್ರಿವರ್ಗಾ ಚ ತ್ರಿಕಾಲಜ್ಞಾನದಾಯಿನೀ ।
ತರ್ಪಣಾ ತೃಪ್ತಿದಾ ತೃಪ್ತಾ ತಾಮಸೀ ತುಂಬುರುಸ್ತುತಾ ॥೭೩॥

ತಾರ್ಕ್ಷ್ಯಸ್ಥಾ ತ್ರಿಗುಣಾಕಾರಾ ತ್ರಿಭಂಗೀ ತನುವಲ್ಲರೀ ।
ಥಾತ್ಕಾರೀ ಥಾರವಾ ಥಾಂತಾ ದೋಹಿನೀ ದೀನವತ್ಸಲಾ ॥೭೪॥

---

ಡುವವಳು) ೪೨೩ ತಲೋದರೀ ಸೂಕ್ಷ್ಮವಾದ ಹೊಟ್ಟೆಯುಳ್ಳವಳು) ೪೨೪ ತಿಲಾಭೂಷಾ (ರತ್ನಕಣ) (ತಿಲವೇ ಆಭರಣವಾಗುಳ್ಳವಳು) ೪೨೫ ತಾಂಟಕಪ್ರಿಯ ವಾಹಿನೀ ॥೭೧॥

೪೨೬ ತ್ರಿಜಟಾ (ಮೂರು ಜಡೆಗಳನ್ನು ಧರಿಸಿರುವವಳು) ೪೨೭ ತಿತ್ತಿರಿ ಎಂಬ ಪಕ್ಷಿಸ್ವರೂಪಳು) ೪೨೮ ತೃಷ್ಣಾ (ಬಾಯಾರಿಕೆಯುಳ್ಳವಳು) ೪೨೯ ತ್ರಿವಿಧಾ (ಮೂರು ಬಗೆಗಳುಳ್ಳವಳು) ೪೩೦ ತರುಣಾಕೃತಿಃ ೪೩೧ ತಪ್ತಕಾಂಚನ ಸಂಕಾಶಾ (ಸ್ವರ್ಣವರ್ಣವುಳ್ಳವಳು) ೪೩೨ ತಪ್ತಕಾಂಚನ ಭೂಷಣಾ (ಸ್ವರ್ಣಾಭರಣವುಳ್ಳವಳು). ॥೭೨॥

೪೩೩ ತ್ರ್ಯಯಂಬಕಾ (ಮೂರು ಕಣ್ಣುಳ್ಳವಳು) ೪೩೪ ತ್ರಿವರ್ಗಾ ಚ (ಧರ್ಮ, ಅರ್ಥ, ಕಾಮವೆಂಬ ತ್ರಿವರ್ಗಸ್ವರೂಪಳು) ೪೩೫ ತ್ರಿಕಾಲಜ್ಞಾನದಾಯಿನೀ (ಭೂತ ಭವಿಷ್ಯದ್ವರ್ತಮಾನಕಾಲದ ಜ್ಞಾನವನ್ನುಂಟುಮಾಡುವವಳು) ೪೩೬ ತರ್ಪಣಾ (ತೃಪ್ತಿಪಡಿಸುವವಳು) ೪೩೭ ತೃಪ್ತಿದಾ (ತೃಪ್ತಿಯನ್ನು ಕೊಡುವವಳು) ೪೩೮ ತೃಪ್ತಾ (ತಾನೂ ತೃಪ್ತಿಪಟ್ಟಿರುವವಳು) ೪೩೯ ತಾಮಸೀ (ತಾಮಸಸ್ವಭಾವವೂ ಉಳ್ಳವಳು) ೪೪೦ ತುಂಬುರುಸ್ತುತಾ (ತುಂಬುರು ಋಷಿಯಿಂದ ಸ್ತೋತ್ರಮಾಡಲ್ಪಡುವವಳು). ॥೭೩॥

೪೪೧ ತಾರ್ಕ್ಷ್ಯಸ್ಥಾ (ಗರುಡವಾಹನಳು) ೪೪೨ ತ್ರಿಗುಣಾಕಾರಾ (ಸತ್ವರಜಸ್ತಮೋಗುಣಾಕಾರಳು) ೪೪೩ ತ್ರಿಭಂಗೀ (ಸ್ಥಾನತ್ರಯ) (ಶರೀರದಲ್ಲಿ ವಕ್ರತೆಯುಳ್ಳ, ಬಳುಕುವವಳು) ೪೪೪ ತನುವಲ್ಲರೀ (ಲತೆಯಂತೆ ಇರುವ ಶರೀರವುಳ್ಳವಳು).

೪೪೫ ಥಾತ್ಕಾರೀ (ಥಾತ್ ಎಂದು ಶಬ್ದಮಾಡುವವಳು) ೪೪೬ ಥಾರವಾ (ಭಯರಕ್ಷಕವಾದ "ಥಾ" ಎಂಬ ಶಬ್ದವುಳ್ಳವಳು) ೪೪೭ ಥಾಂತಾ ("ಥಾ" ಎಂಬ ಅಕ್ಷರದಿಂದ ಆಗುವ (ಮಂಗಳವೇ ಕೊನೆಯಾಗುಳ್ಳವಳು).

**ದಾನವಾಂತಕರೀ ದುರ್ಗಾ ದುರ್ಗಾಸುರನಿಬರ್ಹಿಣೀ ।**
**ದೇವರೀತಿರ್ದಿವಾರಾತ್ರಿಃ ದ್ರೌಪದೀ ದುಂದುಭಿಸ್ವನಾ ॥೭೫॥**

**ದೇವಯಾನೀ ದುರಾವಾಸಾ ದಾರಿದ್ರ್ಯೋದ್ಭೇದಿನೀ ದಿವಾ ।**
**ದಾಮೋದರಪ್ರಿಯಾ ದೀಪ್ತಾ ದಿಗ್ವಾಸಾ ದಿಗ್ವಿಮೋಹಿನೀ ॥೭೬॥**

**ದಂಡಕಾರಣ್ಯನಿಲಯಾ ದಂಡಿನೀ ದೇವಪೂಜಿತಾ ।**
**ದೇವವಂದ್ಯಾ ದಿವಿಷದಾ ದ್ವೇಷಿಣೀ ದಾನವಾಕೃತಿಃ ॥೭೭॥**

---

"ಮೋಹಿನೀ" ಎಂಬ ನಾಮ ಮೊದಲುಗೊಂಡು ಇಪ್ಪತ್ತೇಳು ನಾಮಗಳು "ದ" ಕಾರಾದಿಯಾದವುಗಳು.

೪೪೮ ಮೋಹಿನೀ (ಇಷ್ಟಾರ್ಥವನ್ನು ಕೊಡುವವಳು) ೪೪೯ ದೀನವತ್ಸಲಾ ದೀನರ ವಿಷಯದಲ್ಲಿ ಪ್ರೀತಿಯುಳ್ಳವಳು). ॥೭೪॥

೪೫೦ ದಾನವಾಂತಕರೀ (ರಾಕ್ಷಸನಾಶಕಳು) ೪೫೧ ದುರ್ಗಾ ೪೫೨ ದುರ್ಗಾಸುರನಿಬರ್ಹಿಣೀ (ದುರ್ಗಾಸುರನನ್ನು ಸಂಹರಿಸಿದವಳು ೪೫೩ ದೇವರೀತಿಃ ೪೫೪ ದಿವಾರಾತ್ರಿಃ (ಹಗಲು ರಾತ್ರಿಗಳ ಸ್ವರೂಪಳು) ೪೫೫ ದ್ರೌಪದೀ ೪೫೬ ದುಂದುಭಿಸ್ವನಾ (ದುಂದುಭಿವಾದ್ಯದಂತೆ ಶಬ್ದವುಳ್ಳವಳು.) ॥೭೫॥

೪೫೭ ದೇವಯಾನೀ ೪೫೮ ದುರಾವಾಸಾ (ಮನಸ್ಸಿನಲ್ಲಿ ವಾಸಿಸಲು ದುಸ್ಸಾಧ್ಯಳು) ೪೫೯ ದಾರಿದ್ರ್ಯೋದ್ಭೇದಿನೀ (ಬಡತನವನ್ನು ಹೋಗಲಾಡಿಸುವವಳು) ೪೬೦ ದಿವಾ (ದಿವಾಯುಕ್ತವಾದ ರಾತ್ರಿಸ್ವರೂಪಳು) ೪೬೧ ದಾಮೋದರಪ್ರಿಯಾ (ವಿಷ್ಣುಪ್ರಿಯಳು) ೪೬೨ ದೀಪ್ತಾ (ಪ್ರಕಾಶಮಾನಳು) ೪೬೩ ದಿಗ್ವಾಸಾಃ (ದಿಕ್ಕೇ ವಸ್ತ್ರವಾಗುಳ್ಳವಳು) ೪೬೪ ದಿಗ್ವಿಮೋಹಿನೀ (ದಿಕ್ಕುಗಳಿಗೂ ಮೋಹಕಳು). ॥೭೬॥

೪೬೫ ದಂಡಕಾರಣ್ಯನಿಲಯಾ (ದಂಡಕಾರಣ್ಯದಲ್ಲಿ ವಾಸಮಾಡುವವಳು) ೪೬೬ ದಂಡಿನೀ (ವಾರಾಹೀರೂಪಳು) ೪೬೭ ದೇವಪೂಜಿತಾ (ದೇವತೆಗಳಿಂದ ಪೂಜಿಸಲ್ಪಡುವವಳು) ೪೬೮ ದೇವವಂದ್ಯಾ (ದೇವತೆಗಳಿಂದ ನಮಸ್ಕರಿಸಲ್ಪಡುವವಳು) ೪೬೯) ದಿವಿಷದಾ (ಸ್ವರ್ಗವಾಸಿನಿಯು) ೪೭೦ ದ್ವೇಷಿಣೀ (ರಾಕ್ಷಸರನ್ನು ದ್ವೇಷಿಸುವವಳು) ೪೭೧ ದಾನವಾಕೃತಿಃ (ರಾಕ್ಷಸರಂತೆ ಭಯಂಕರಸ್ವರೂಪಳು) ॥೭೭॥

ದೀನಾನಾಥಸ್ತುತಾ ದೀಕ್ಷಾ ದೈವತಾದಿಸ್ವರೂಪಿಣೀ ।
ಧಾತ್ರೀ ಧನುರ್ಧರಾ ಧೇನುಃ ಧಾರಿಣೀ ಧರ್ಮಚಾರಿಣೀ ॥೭೮॥

ಧ(ಧು)ರಂಧರಾ ಧರಾಧಾರಾ ಧನದಾ ಧಾನ್ಯದೋಹಿನೀ ।
ಧರ್ಮಶೀಲಾ ಧನಾಧ್ಯಕ್ಷಾ ಧನುರ್ವೇದವಿಶಾರದಾ ॥೭೯॥

ಧೃತಿರ್ಧನ್ಯಾ ಧೃತಪದಾ ಧರ್ಮರಾಜಪ್ರಿಯಾ ಧ್ರುವಾ ।
ಧೂಮಾವತೀ ಧೂಮಕೇಶೀ ಧರ್ಮಶಾಸ್ತ್ರಪ್ರಕಾಶಿನೀ ॥೮೦॥

---

೪೭೨ ದೀನಾನಾಥಸ್ತುತಾ ೪೭೩ ದೀಕ್ಷಾ (ದೀಕ್ಷೆಯನ್ನು ಧರಿಸಿರುವವಳು) ೪೭೪ ದೈವತಾದಿಸ್ವರೂಪಿಣೀ.

"ಧಾತ್ರೀ" ಎಂಬ ನಾಮ ಮೊದಲುಗೊಂಡು ಇಪ್ಪತ್ತು "ಧ" ಕಾರಾದಿ ನಾಮಗಳು ಹೇಳಲ್ಪಡುತ್ತವೆ.

೪೭೫ ಧಾತ್ರೀ (ರಕ್ಷಕಳು) ೪೭೬ ಧನುರ್ಧರಾ (ಧನುಸ್ಸನ್ನು ಧರಿಸಿರುವವಳು) ೪೭೭ ಧೇನುಃ (ಗೋಸ್ವರೂಪಳು) ೪೭೮ ಧಾರಿಣೀ (ಭೂಸ್ವರೂಪಳು) ೪೭೯ ಧರ್ಮಚಾರಿಣೀ (ಧರ್ಮಮಾರ್ಗದಲ್ಲಿ ಸಂಚರಿಸುವವಳು) ॥೭೮॥

೪೮೦ ಧ(ಧು)ರಂಧರಾ (ಪರ್ವತಭಾರವನ್ನು ಧರಿಸಿರುವವಳು) ೪೮೧ ಧರಾಧಾರಾ (ಭೂಮಿಗೆ ಆಧಾರವಾಗಿರುವವಳು) ೪೮೨ ಧನದಾ (ಐಶ್ವರ್ಯಪ್ರದಳು) ೪೮೩ ಧಾನ್ಯದೋಹಿನೀ (ಧಾನ್ಯಗಳನ್ನು ಕೊಡುವವಳು) ೪೮೪ ಧರ್ಮಶೀಲಾ (ಧರ್ಮಸ್ವಭಾವವುಳ್ಳವಳು) ೪೮೫ ಧನಾಧ್ಯಕ್ಷಾ (ಐಶ್ವರ್ಯಕ್ಕೆ ಒಡೆಯಳು) ೪೮೬ ಧನುರ್ವೇದವಿಶಾರದಾ (ಧನುರ್ವೇದದಲ್ಲಿ ಪಂಡಿತಳು) ॥೭೯॥

೪೮೭ ಧೃತಿಃ (ಧೈರ್ಯವುಳ್ಳವಳು) ೪೮೮ ಧನ್ಯಾ ೪೮೯ ಧೃತಪದಾ (ಪದವೀಧರಳು) ೪೯೦ ಧರ್ಮರಾಜಪ್ರಿಯಾ (ಯಮಧರ್ಮನಿಗೆ ಪ್ರೀತಿಪಾತ್ರಳು) ಧ್ರುವಾ (ಶಾಶ್ವತಳು) ೪೯೨ ಧೂಮಾವತೀ ೪೯೩ ಧೂಮಕೇಶೀ (ಹೊಗೆಯಂತೆ ೪೯೧ ಕೂದಲುಗಳುಳ್ಳವಳು) ೪೯೪ ಧರ್ಮಶಾಸ್ತ್ರಪ್ರಕಾಶಿನೀ (ಧರ್ಮಶಾಸ್ತ್ರವನ್ನು ಪ್ರಕಾಶಪಡಿಸುವವಳು) ॥೮೦॥

ನಂದಾ ನಂದಪ್ರಿಯಾ ನಿದ್ರಾ ನೃನುತಾ ನಂದನಾತ್ಮಿಕಾ ।
ನರ್ಮದಾ ನಲಿನೀ ನೀಲಾ ನೀಲಕಂಠಸಮಾಶ್ರಯಾ ॥೮೧॥

ನಾರಾಯಣಪ್ರಿಯಾ ನಿತ್ಯಾ ನಿರ್ಮಲಾ ನಿರ್ಗುಣಾ ನಿಧಿಃ ।
ನಿರಾಧಾರಾ ನಿರುಪಮಾ ನಿತ್ಯಶುದ್ಧಾ ನಿರಂಜನಾ ॥೮೨॥

ನಾದಬಿಂದುಕಲಾತೀತಾ ನಾದಬಿಂದುಕಲಾತ್ಮಿಕಾ ।
ನೃಸಿಂಹಿನೀ ನಗಧರಾ ನೃಪನಾಗವಿಭೂಷಿತಾ ॥೮೩॥

---

"ನಂದಾ" ಎಂಬ ನಾಮ ಮೊದಲುಗೊಂಡು ಐವತ್ತೈದು "ನ" ಕಾರಾದಿ ನಾಮಗಳು ಹೇಳಲ್ಪಡುತ್ತವೆ.

೪೯೫ ನಂದಾ (ಆನಂದಜನಕಳು) ೪೯೬ ನಂದಪ್ರಿಯಾ (ನಂದನಪ್ರೀತಿ ಜನಕಳು) ೪೯೭ ನಿದ್ರಾ ೪೯೮ ನೃನುತಾ (ಮನುಷ್ಯರಿಂದ ಹೊಗಳಲ್ಪಡತಕ್ಕವಳು) ೪೯೯ ನಂದನಾತ್ಮಿಕಾ (ನಂದನಸ್ವಭಾವಳು) ೫೦೦ ನರ್ಮದಾ (ನರ್ಮದಾ ನದೀ ಸ್ವರೂಪಳು) ೫೦೧ ನಲಿನೀ (ಕಮಲಿನೀಪ್ರಾಯಳು) ೫೦೨ ನೀಲಾ ೫೦೩ ನೀಲ ಕಂಠಸಮಾಶ್ರಯಾ (ಈಶ್ವರನಿಂದ ಆಶ್ರಯಿಸಲ್ಪಡುವವಳು) ॥೮೧॥

೫೦೪ ನಾರಾಯಣಪ್ರಿಯಾ (ವಿಷ್ಣುವಿಗೆ ಪ್ರಿಯಳು) ೫೦೫ ನಿತ್ಯಾ ೫೦೬ ನಿರ್ಮಲಾ ೫೦೭ ನಿರ್ಗುಣಾ (ಗುಣರಹಿತಳು) ೫೦೮ ನಿಧಿಃ (ನಿಧಿಪ್ರಾಯಳು) ೫೦೯ ನಿರಾಧಾರಾ (ಆಧಾರವಿಲ್ಲದವಳು) ೫೧೦ ನಿರುಪಮಾ (ಹೋಲಿಕೆಯಿಲ್ಲದವಳು) ೫೧೧ ನಿತ್ಯಶುದ್ಧಾ (ಯಾವಾಗಲೂ ಪರಿಶುದ್ಧಳಾಗಿರುವವಳು) ೫೧೨ ನಿರಂಜನಾ (ನಿರ್ಲಿಪ್ತಳು) ॥೮೨॥

೫೧೩ ನಾದಬಿಂದುಕಲಾತೀತಾ (ಹದಿನೈದು ಕಲೆಗಳಿಂದ ಅತೀತವಾದ, ನಾದ ಮುಂತಾದ ಕಳಾತೀತಳಾದ, ಶ್ರೀವಿದ್ಯಾತ್ಮಕಳು) ೫೧೪ ನಾದಬಿಂದು ಕಲಾತ್ಮಿಕಾ (ನಾದಬಿಂದು ಕಳೆಗಳೆಂಬ ಸ್ವರೂಪವುಳ್ಳವಳು) ೫೧೫ ನೃಸಿಂಹಿನೀ (ನೃಸಿಂಹನ ವೇಷವುಳ್ಳವಳು) ೫೧೬ ನಗಧರಾ (ಪರ್ವತವನ್ನು ಧರಿಸಿರುವವಳು) ೫೧೭ ನೃಪನಾಗ ವಿಭೂಷಿತಾ (ಆದಿಶೇಷನೇ ಆಭರಣವಾಗುಳ್ಳವಳು) ॥೮೩॥

ನರಕಕ್ಲೇಶಶಮನೀ ನಾರಾಯಣಪದೋದ್ಭವಾ ।
ನಿರವದ್ಯಾ ನಿರಾಕಾರಾ ನಾರದಪ್ರಿಯಕಾರಿಣೀ ॥೮೪॥

ನಾನಾಜ್ಯೋತಿಸ್ಸಮಾಖ್ಯಾತಾ ನಿಧಿದಾ ನಿರ್ಮಲಾತ್ಮಿಕಾ ।
ನವಸತ್ರಧರಾ ನೀತಿಃ ನಿರುಪದ್ರವಕಾರಿಣೀ ॥೮೫॥

ನಂದಜಾ ನವರತ್ನಾಢ್ಯಾ ನೈಮಿಶಾರಣ್ಯವಾಸಿನೀ ।
ನವನೀತಪ್ರಿಯಾ ನಾರೀ ನೀಲಜೀಮೂತನಿಸ್ವನಾ ॥೮೬॥

ನಿಮೇಷಿಣೀ ನದೀರೂಪಾ ನೀಲಗ್ರೀವಾ ನಿಶೀಶ್ವರೀ ।
ನಾಮಾವಲಿರ್ನಿಶುಂಭಘ್ನೀ ನಾಗಲೋಕನಿವಾಸಿನೀ ॥೮೭॥

---

೫೧೮ ನರಕಕ್ಲೇಶಶಮನೀ (ನರಕದುಃಖವನ್ನು ಹೋಗಲಾಡಿಸುವವಳು) ೫೧೯ ನಾರಾಯಣಪದೋದ್ಭವಾ (ವಿಷ್ಣುವಿನ ಪಾದದಲ್ಲಿ ಹುಟ್ಟಿದವಳು) ೫೨೦ ನಿರವದ್ಯಾ (ದೋಷವಿಲ್ಲದವಳು—ಶ್ರೇಷ್ಠಳು) ೫೨೧ ನಿರಾಕಾರಾ (ಆಕಾರರಹಿತಳು) ೫೨೨ ನಾರದಪ್ರಿಯಕಾರಿಣೀ (ನಾರದನಿಗೆ ಪ್ರಿಯವನ್ನುಂಟುಮಾಡುವವಳು) ॥೮೪॥

೫೨೩ ನಾನಾಜ್ಯೋತಿಸ್ಸಮಾಖ್ಯಾತಾ (ನಾನಾವಿಧವಾದ ಜ್ಯೋತಿಶ್ಶಾಸ್ತ್ರಗಳಿಂದ ಹೊಗಳಲ್ಪಡತಕ್ಕವಳು) ೫೨೪ ನಿಧಿದಾ (ನಿಧಿಯನ್ನು ಕೊಡುವವಳು) ೫೨೫ ನಿರ್ಮಲಾತ್ಮಿಕಾ (ಪರಿಶುದ್ಧವಾದ ಆತ್ಮವುಳ್ಳವಳು) ೫೨೬ ನವಸತ್ರಧರಾ (ಹೊಸಯಜ್ಞಗಳನ್ನು ಹೊಂದಿರುವವಳು) ೫೨೭ ನೀತಿಃ (ನೀತಿಶಾಸ್ತ್ರವನ್ನನುಸರಿಸುವವಳು) ೫೨೮ ನಿರುಪದ್ರವಕಾರಿಣೀ (ಕಷ್ಟಗಳನ್ನು ಹೋಗಲಾಡಿಸುವವಳು.॥೮೫॥

೫೨೯ ನಂದಜಾ (ನಂದಪುತ್ರಿಯು) ೫೩೦ ನವರತ್ನಾಢ್ಯಾ (ನವರತ್ನಗಳಿಂದ ಪೂರ್ಣಳಾಗಿರುವವಳು) ೫೩೧ ನೈಮಿಶಾರಣ್ಯವಾಸಿನೀ (ನೈಮಿಶಾರಣ್ಯದಲ್ಲಿ ವಾಸಿಸುವವಳು) ೫೩೨ ನವನೀತಪ್ರಿಯಾ (ಬೆಣ್ಣೆಯನ್ನು ಪ್ರೀತಿಸುವವಳು) ೫೩೩ ನಾರೀ ೫೩೪ ನೀಲಜೀಮೂತನಿಸ್ವನಾ (ನೀಲಮೇಘದಂತೆ ಶಬ್ದವುಳ್ಳವಳು). ॥೮೬॥

೫೩೫ ನಿಮೇಷಿಣೀ (ಮಹಿಮೆಯರೆಪ್ಪೆಯುಳ್ಳವಳು) ೫೩೬ ನದೀರೂಪಾ ೫೩೭ ನೀಲಗ್ರೀವಾ (ಕಪ್ಪಾದ ಕುತ್ತಿಗೆಯುಳ್ಳವಳು) ೫೩೮ ನಿಶೀಶ್ವರೀ (ರಾತ್ರಿಗೆ ಒಡೆಯಳು) ೫೩೯ ನಾಮಾವಳಿಃ (ಹೆಸರಿನ ಸಮೂಹವುಳ್ಳವಳು) ೫೪೦ ನಿಶುಂಭಘ್ನೀ (ನಿಶುಂಭನೆಂಬ ರಾಕ್ಷಸನನ್ನು ಸಂಹರಿಸಿದವಳು) ೫೪೧ ನಾಗಲೋಕನಿವಾಸಿನೀ (ಪಾತಾಳಲೋಕದಲ್ಲಿ ವಾಸಿಸುವವಳು.) ॥೮೭॥

**ನವಜಾಂಬೂನದಪ್ರಖ್ಯಾ ನಾಗಲೋಕಾಧಿದೇವತಾ ।**
**ನೂಪುರಾಕ್ರಾಂತಚರಣಾ ನರಚಿತ್ತಪ್ರಮೋದಿನೀ ॥೪೮॥**

**ನಿಮಗ್ನಾರಕ್ತನಯನಾ ನಿರ್ಘಾತಸಮನಿಸ್ವನಾ ।**
**ನಂದನೋದ್ಯಾನನಿಲಯಾ ನಿರ್ವ್ಯೂಹೋಪರಿಚಾರಿಣೀ ॥೪೯॥**

**ಪಾರ್ವತೀ ಪರಮೋದಾರಾ ಪರಬ್ರಹ್ಮಾತ್ಮಿಕಾ ಪರಾ ।**
**ಪಂಚಕೋಶವಿನಿರ್ಮುಕ್ತಾ ಪಂಚಪಾತಕನಾಶಿನೀ ॥೫೦॥**

**ಪರಚಿತ್ತವಿಧಾನಜ್ಞಾ ಪಂಚಿಕಾ ಪಂಚರೂಪಿಣೀ ।**
**ಪೂರ್ಣಿಮಾ ಪರಮಾ ಪ್ರೀತಿಃ ಪರತೇಜಃ ಪ್ರಕಾಶಿನೀ ॥೫೧॥**

---

೫೪೩ ನವಜಾಂಬೂನದಪ್ರಖ್ಯಾ (ಶುದ್ಧಚಿನ್ನದಂತೆ ಪ್ರಕಾಶವುಳ್ಳವಳು) ನಾಗಲೋಕಾಧಿದೇವತಾ (ನಾಗಲೋಕಕ್ಕೆ ಒಡೆಯಳು) ೫೪೪ ನೂಪುರಾಕ್ರಾಂತಚರಣಾ (ಕಾಲಿನಲ್ಲಿ ಸರಪಣಿಯ ಒಡವೆಯುಳ್ಳವಳು) ೫೪೫ ನರಚಿತ್ತಪ್ರಮೋದಿನೀ (ಮನುಷ್ಯನ ಮನಸ್ಸನ್ನು ಸಂತೋಷಪಡಿಸುವವಳು.) ॥೪೮॥

೫೪೬ ನಿಮಗ್ನಾರಕ್ತನಯನಾ (ಕೆಂಪಾದ ಕಣ್ಣುಳ್ಳವಳು) ೫೪೭ ನಿರ್ಘಾತಸಮನಿಸ್ವನಾ (ಬಿರುಗಾಳಿ ಸಿಡಿಲಿಗೆ ಸಮನಾದ ಧ್ವನಿಯುಳ್ಳವಳು) ೫೪೮ ನಂದನೋದ್ಯಾನನಿಲಯಾ (ನಂದನವನದಲ್ಲಿ ವಾಸಮಾಡುವವಳು) ೫೪೯ ನಿರ್ವ್ಯೂಹೋಪರಿಚಾರಿಣೀ (ಗಣಗಳಮೇಲೆ ಸಂಚರಿಸುವವಳು). ॥೪೯॥

"ಪಾರ್ವತೀ" ಎಂಬ ನಾಮ ಮೊದಲುಗೊಂಡು "ಪಲ್ಲವೋದರೀ" ಎಂಬ ನಾಮದ ವರೆಗಿನ ನೂರಿಪ್ಪತ್ತೈದು ನಾಮಗಳು "ಪ"ಕಾರಾದಿಯಾಗಿ ಹೇಳಲ್ಪಡುತ್ತವೆ.

೫೫೦ ಪಾರ್ವತೀ ೫೫೧ ಪರಮೋದಾರಾ (ಉದಾರಸ್ವಭಾವವುಳ್ಳವಳು) ೫೫೨ ಪರಬ್ರಹ್ಮಾತ್ಮಿಕಾ (ಸದ್ಯೋಜಾತಾದಿ ಪರಬ್ರಹ್ಮಸ್ವರೂಪಳು) ೫೫೩ ಪರಾ (ಸರ್ವಶ್ರೇಷ್ಠಳು) ೫೫೪ ಪಂಚಕೋಶವಿನಿರ್ಮುಕ್ತಾ (ಪಂಚಕೋಶಗಳಿಂದ ಬಿಡಲ್ಪಟ್ಟವಳು) ೫೫೫ ಪಂಚಪಾತಕನಾಶಿನೀ (ಪಂಚಮಹಾಪಾಪಗಳನ್ನು ನಾಶಮಾಡತಕ್ಕವಳು). ॥೫೦॥

೫೫೬ ಪರಚಿತ್ತವಿಧಾನಜ್ಞಾ (ಇತರರ ಮನಸ್ಸನ್ನು ಅರಿಯತಕ್ಕವಳು) ೫೫೭ ಪಂಚಿಕಾ (ಶ್ರೀವಿದ್ಯೆಯಲ್ಲಿ ಪೂಜಿಸಲ್ಪಡತಕ್ಕ ಪಂಚಿಕಾದೇವತಾರೂಪಳು)

**ಪುರಾಣೀ ಪೌರುಷೀ ಪುಣ್ಯಾ ಪುಂಡರೀಕನಿಭೇಕ್ಷಣಾ ।**
**ಪಾತಾಲತಲನಿರ್ಮಗ್ನಾ ಪ್ರೀತಾ ಪ್ರೀತಿವಿವರ್ಧಿನೀ ॥೯೨॥**

**ಪಾವನೀ ಪಾದಸಹಿತಾ ಪೇಶಲಾ ಪಾಪನಾಶಿನೀ ।**
**ಪ್ರಜಾಪತಿಃ ಪರಿಶ್ರಾಂತಾ ಪರ್ವತ ಸ್ತನಮಂಡಲಾ ॥೯೩॥**

**ಪದ್ಮಪ್ರಿಯಾ ಪದ್ಮಸಂಸ್ಥಾ ಪದ್ಮಾಕ್ಷೀ ಪದ್ಮಸಂಭವಾ ।**
**ಪದ್ಮಪತ್ರಾ ಪದ್ಮಪದಾ ಪದ್ಮಿನೀ ಪ್ರಿಯಭಾಷಿಣೀ ॥೯೪॥** ✓

---

೫೫೮ ಪಂಚರೂಪಿಣೀ (ಪಂಚದೇವೀಸ್ವರೂಪಿಣಿಯು) ೫೫೯ ಪೂರ್ಣಿಮಾಸ್ವರೂಪಳು) ೫೬೦ ಪರಮಾ (ಉತ್ಕೃಷ್ಟಳು) ೫೬೧ ಪ್ರೀತಿಃ (ಪ್ರೀತಿಜನಕಳು) ೫೬೨ ಪರತೇಜಃಪ್ರಕಾಶಿನೀ (ಇತರ ತೇಜಸ್ಸುಗಳನ್ನೂ ಪ್ರಕಾಶಗೊಳಿಸುವವಳು). ॥೯೧॥

೫೬೩ ಪುರಾಣೀ (ಪ್ರಾಚೀನಳು) ೫೬೪ ಪೌರುಷೀ (ಪುರುಷಸಂಬಂಧಿಸಿಯು) ೫೬೫ ಪುಣ್ಯಾ ೫೬೬ ಪುಂಡರೀಕನಿಭೇಕ್ಷಣಾ (ಕಮಲನೇತ್ರಿಯು) ೫೬೭ ಪಾತಾಲ ತಲ ನಿರ್ಮಗ್ನಾ (ಪಾತಾಲದಲ್ಲಿಯೂ ವಾಸಿಸತಕ್ಕವಳು) ೫೬೮ ಪ್ರೀತಾ (ತಾನು ಸಂತೋಷಪಡುವವಳು) ೫೬೯ ಪ್ರೀತಿವಿವರ್ಧಿನೀ (ಪ್ರೀತಿಯನ್ನು ಹೆಚ್ಚಿಸುವವಳು) ॥೯೨॥

೫೭೦ ಪಾವನೀ (ಪರಿಶುದ್ಧಳಾದವಳು) ೫೭೧ ಪಾದಸಹಿತಾ (ಕಿರಣಸಹಿತಳು) ೫೭೨ ಪೇಶಲಾ (ಮೃದುಸಮರ್ಥಳು) ೫೭೩ ಪ್ರಜಾಪತಿಃ (ಬ್ರಹ್ಮರೂಪಿಣಿಯು) ೫೭೪ ಪರಿಶ್ರಾಂತಾ (ತಿಳಿವಳಿಕೆಯುಳ್ಳವಳು) ೫೭೫ ಪರ್ವತಸ್ತನಮಂಡಲಾ (ಕ್ಷೀರಪುಷ್ಟವಾದ ದೊಡ್ಡ ಸ್ತನಗಳುಳ್ಳವಳು) ॥೯೩॥

೫೭೬ ಪದ್ಮಪ್ರಿಯಾ (ಪದ್ಮದಲ್ಲಿ ಪ್ರೀತಿಯುಳ್ಳವಳು) ೫೭೭ ಪದ್ಮಸಂಸ್ಥಾ (ಪದ್ಮದಲ್ಲಿ ವಾಸಿಸುವವಳು) ೫೭೮ ಪದ್ಮಾಕ್ಷೀ (ಪದ್ಮದಂತೆ ಕಣ್ಣುಳ್ಳವಳು) ೫೭೯ (ಪದ್ಮಸಂಭವಾ- ಪದ್ಮದಲ್ಲಿ ಹುಟ್ಟಿದವಳು) ೫೮೦ ಪದ್ಮಪತ್ರಾ (ಪದ್ಮಪತ್ರಳು) ೫೮೧ ಪದ್ಮಪದಾ (ಪದ್ಮರೇಖೆಯುಳ್ಳ ಕಾಲುಗಳುಳ್ಳವಳು) ೫೮೨ ಪದ್ಮಿನೀ (ಕಮಲಸ್ವರೂಪಳು)೫೮೩ ಪ್ರಿಯಭಾಷಿಣೀ (ಪ್ರಿಯವಾದ ಮಾತುಗಳನ್ನಾಡುವವಳು)॥೯೪॥

**ಪಶುಪಾಶವಿನಿರ್ಮುಕ್ತಾ ಪುರಂಧ್ರೀ ಪುರವಾಸಿನೀ ।**
**ಪುಷ್ಕಲಾ ಪುರುಷಾ ಪರ್ವಾ ಪಾರಿಜಾತಸುಮಪ್ರಿಯಾ ॥೯೫॥**

**ಪತಿವ್ರತಾ ಪವಿತ್ರಾಂಗೀ ಪುಷ್ಪಹಾಸಪರಾಯಣಾ ।**
**ಪ್ರಜ್ಞಾವತೀಸುತಾ ಪೌತ್ರೀ ಪುತ್ರಪೂಜ್ಯಾ ಪಯಸ್ವಿನೀ ॥೯೬॥**

**ಪಟ್ಟಿಪಾಶಧರಾ ಪಙ್ಕ್ತಿಃ ಪಿತೃಲೋಕಪ್ರದಾಯಿನೀ ।**
**ಪುರಾಣೀ ಪುಣ್ಯಶೀಲಾ ಚ ಪ್ರಣತಾರ್ತಿವಿನಾಶಿನೀ ॥೯೭॥**

**ಪ್ರದ್ಯುಮ್ನಜನನೀ ಪುಷ್ಟಾ ಪಿತಾಮಹ ಪರಿಗ್ರಹಾ ।**
**ಪುಂಡರೀಕಪುರಾವಾಸಾ ಪುಂಡರೀಕಸಮಾನನಾ ॥೯೮॥**

---

೫೮೪ ಪಶುಪಾಶವಿನಿರ್ಮುಕ್ತಾ(ಪಶುಪಾಶದಿಂದ ಬಿಡಲ್ಪಟ್ಟಿರುವವಳು) ೫೮೫ ಪುರಂಧ್ರೀ (ಕುಟುಂಬಿನಿಯು) ೫೮೬ ಪುರವಾಸಿನೀ (ಶ್ರೀನಗರವಾಸಿನೀ ಮಾತೆಯು) ೫೮೭ ಪುಷ್ಕಲಾ (ಪೂರ್ಣಳು) ೫೮೮ ಪುರುಷಾ (ಪುರುಷಸ್ವರೂಪಳು) ೫೮೯ ಪರ್ವಾ (ಪರ್ವಕಾಲಸ್ವರೂಪಳು) ೫೯೦ ಪಾರಿಜಾತಸುಮಪ್ರಿಯಾ (ಪಾರಿಜಾತಪುಷ್ಪದಲ್ಲಿ ಪ್ರೀತಿಯುಳ್ಳವಳು) ॥೪೫॥

೫೯೧ ಪತಿವ್ರತಾ ೫೯೨ ಪವಿತ್ರಾಂಗೀ (ಪರಿಶುದ್ಧವಾದ ಶರೀರವುಳ್ಳವಳು) ೫೯೩ ಪುಷ್ಪಹಾಸಪರಾಯಣಾ (ಪುಷ್ಪಗಳನ್ನು ಹಾಸ್ಯಮಾಡತಕ್ಕವಳು) ೫೯೪ ಪ್ರಜ್ಞಾವತೀಸುತಾ (ಪ್ರಜ್ಞಾವತಿಯ ಮಗಳು) ೫೯೫ ಪೌತ್ರೀ ೫೯೬ ಪುತ್ರಪೂಜ್ಯಾ (ಮಗನಿಂದ ಪೂಜಿಸಲ್ಪಡತಕ್ಕವಳು) ೫೯೭ ಪಯಸ್ವಿನೀ (ಧೇನುಸ್ವರೂಪಳು) ॥೯೬॥

೫೯೮ ಪಟ್ಟಿಪಾಶಧರಾ (ಪಟ್ಟಿಪಾಶಗಳೆಂಬ ಆಯುಧಗಳನ್ನು ಧರಿಸಿರುವವಳು) ೫೯೯ ಪಂಙ್ಕ್ತಿಃ (ಛಂದಃಸ್ವರೂಪಳು) ೬೦೦ ಪಿತೃಲೋಕಪ್ರದಾಯಿನೀ (ಪಿತೃಲೋಕವನ್ನು ಕೊಡತಕ್ಕವಳು) ೬೦೧ ಪುರಾಣೀ (ಪುರಾತನಳು) ೬೦೨ ಪುಣ್ಯಶೀಲಾ (ಪುಣ್ಯಶೀಲಳು) ೬೦೩ ಪ್ರಣತಾರ್ತಿವಿನಾಶಿನೀ (ಭಕ್ತರ ದುಃಖನಾಶಕಳು) ॥೯೭॥

೬೦೪ ಪ್ರದ್ಯುಮ್ನಜನನೀ (ಮನ್ಮಥ ಮಾತೆಯು) ೬೦೫ ಪುಷ್ಟಾ ೬೦೬ ಪಿತಾಮಹಪರಿಗ್ರಹಾ (ಬ್ರಹ್ಮಪತ್ನಿಯು) ೬೦೭ ಪುಂಡರೀಕಪುರಾವಾಸಾ (ಚಿದಂಬರದಲ್ಲಿ ವಾಸಿಸುವವಳು) ೬೦೮ ಪುಂಡರೀಕಸಮಾನನಾ (ಕಮಲಸದೃಶಮುಖವುಳ್ಳವಳು) ॥೯೮॥

**ಪೃಥುಜಂಘಾ ಪೃಥುಭುಜಾ ಪೃಥುಪಾದಾ ಪೃಥೂದರೀ ।**
**ಪ್ರವಾಲ ಶೋಭಾ ಪಿಂಗಾಕ್ಷೀ ಪೀತವಾಸಾಃ ಪ್ರಚಾಪಲಾ ॥೯೯॥**

**ಪ್ರಸವಾ ಪುಷ್ಟಿದಾ ಪುಣ್ಯಾ ಪ್ರತಿಷ್ಠಾ ಪ್ರಣವಾಗತಿಃ ।**
**ಪಂಚವರ್ಣಾ ಪಂಚವಾಣೀ ಪಂಚಿಕಾ ಪಂಜರಸ್ಥಿತಾ ॥೧೦೦॥**

**ಪರಮಾಯಾ ಪರಜ್ಯೋತಿಃ ಪರಪ್ರೀತಿಃ ಪರಾಗತಿಃ ।**
**ಪರಾಕಾಷ್ಠಾ ಪರೇಶಾನೀ ಪಾವಿನೀ ಪಾವಕದ್ಯುತಿಃ ॥೧೦೦॥**

---

೬೦೯ ಪೃಥುಜಂಘಾ (ವಿಶಾಲವಾದ ಜಂಘೆಯುಳ್ಳವಳು) ೬೧೦ ಪೃಥುಭುಜಾ (ವಿಶಾಲವಾದ ಭುಜಗಳುಳ್ಳವಳು) ೬೧೧ ಪೃಥುಪಾದಾ (ವಿಸ್ತಾರವಾದ ಕಾಲುಗಳುಳ್ಳವಳು) ೬೧೨ ಪೃಥೂದರೀ (ವಿಸ್ತಾರವಾದ ಹೊಟ್ಟೆಯುಳ್ಳವಳು) ೬೧೩ ಪ್ರವಾಲಶೋಭಾ (ಹವಳದಂತೆ ಕಾಂತಿಯುಳ್ಳವಳು) ೬೧೪ ಪಿಂಗಾಕ್ಷೀ (ಹೊಂಬಣ್ಣದ ಕಣ್ಣುಳ್ಳವಳು) ೬೧೫ ಪೀತವಾಸಾಃ (ಪೀತಾಂಬರ ಧಾರಿಣಿಯು) ೬೧೬ ಪ್ರಚಾಪಲಾ (ವಿಶೇಷ ಚಾಪಲ್ಯವುಳ್ಳವಳು). ॥೯೯॥

೬೧೭ ಪ್ರಸವಾ (ಪ್ರಸೂತಿಯುಳ್ಳವಳು) ೬೧೮ ಪುಷ್ಟಿದಾ (ಪುಷ್ಟಿಯನ್ನುಂಟುಮಾಡುವವಳು) ೬೧೯ ಪುಣ್ಯಾ (ಪುಣ್ಯಕರಳು) ೯೨೦ ಪ್ರತಿಷ್ಠಾ ೬೨೧ ಪ್ರಣವಾಗತಿಃ (ಪ್ರಸ್ತೋತ್ರೀದೇವಿಯರ ಗತಿಯುಳ್ಳವಳು) ೬೨೨ ಪಂಚವರ್ಣಾ ಐದು ಬಣ್ಣಗಳುಳ್ಳವಳು) ೬೨೩ ಪಂಚವಾಣೀ (ವಿಶಾಲವಾದ ವಾಣಿಯುಳ್ಳವಳು) ೬೨೪ ಪಂಚಿಕಾ (ಪಂಚಿಕೆಯೆಂಬ ದೇವತಾಸ್ವರೂಪಳು) ೬೨೫ ಪಂಚಸ್ಥಿತಾ (ಪಂಜರದಲ್ಲಿ ವಾಸಮಾಡುವವಳು). ॥೧೦೦॥

೬೨೬ ಪರಮಾಯಾ (ಮೂಲಮಾಯಾಸ್ವರೂಪಳು) ೬೨೭ ಪರಜ್ಯೋತಿಃ (ಉತ್ಕೃಷ್ಟಪ್ರಕಾಶಸ್ವರೂಪಳು) ೬೨೮ ಪರಪ್ರೀತಿಃ (ಅತಿಶಯವಾದ ಪ್ರೀತಿಯುಳ್ಳವಳು) ೬೨೯ ಪರಾಗತಿಃ (ಉತ್ತಮಗತಿದಾಯಕಳು) ೬೩೦ ಪರಾಕಾಷ್ಠಾ (ಉತ್ಕೃಷ್ಟವಾದವಳು) ೬೩೧ ಪರೇಶಾನೀ (ಉತ್ತಮ ನಾಯಕಳು) ೬೩೨ ಪಾವಿನೀ (ಪರಿಶುದ್ಧಳು) ೬೩೩ ಪಾವಕದ್ಯುತಿಃ (ಬೆಂಕಿಯಂತೆ ಪ್ರಕಾಶವುಳ್ಳವಳು). ॥೧೦೧॥

ಪುಣ್ಯಭದ್ರಾ ಪರಿಚ್ಛೇದ್ಯಾ ಪುಷ್ಪಹಾಸಾ ಪೃಥೂದರೀ ।
ಪೀತಾಂಗೀ ಪೀತವಸನಾ ಪೀತಶಯ್ಯಾ ಪಿಶಾಚಿನೀ ॥೧೦೨॥

ಪೀತಕ್ರಿಯಾ ಪಿಶಾಚಘ್ನೀ ಪಾಟಲಾಕ್ಷೀ ಪಟುಕ್ರಿಯಾ ।
ಪಂಚಭಕ್ಷಾ ಪ್ರಿಯಾಚಾರಾ ಪೂತನಾ ಪ್ರಾಣಘಾತಿನೀ ॥೧೦೩॥

ಪುನ್ನಾಗವನಮಧ್ಯಸ್ಥಾ ಪುಣ್ಯತೀರ್ಥನಿಷೇವಿತಾ ।
ಪಂಚಾಂಗೀ ಚ ಪರಾಶಕ್ತಿಃ ಪರಮಾಹ್ಲಾದಕಾರಿಣೀ ॥೧೦೪॥

ಪುಷ್ಪಕಾಂಡಸ್ಥಿತಾ ಪೂಷಾ ಪೋಷಿತಾಖಿಲವಿಷ್ಟಪಾ ।
ಪಾನಪ್ರಿಯಾ ಪಂಚಶಿಖಾ ಪನ್ನಗೋಪರಿಶಾಯಿನೀ ॥೧೦೫॥

---

೬೩೪ ಪುಣ್ಯಭದ್ರಾ (ಮಂಗಳಕರಳು) ೬೩೫ ಪರಿಚ್ಛೇದ್ಯಾ (ಜಗದ್ರೂಪದಲ್ಲಿ ಅಳತೆಗೆ ಒಳಪಟ್ಟಿರುವವಳು) ಅಪರಿಚ್ಛೇದ್ಯಾ (ವಿಭಾಗಿಸಲು ಅಸಾಧ್ಯಳು) ೬೩೬ ಪುಷ್ಪಹಾಸಾ (ಪುಷ್ಪದಂತೆಹಾಸವುಳ್ಳವಳು) ೬೩೭ ಪೃಥೂದರೀ ವಿಸ್ತಾರದ ಹೊಟ್ಟೆಯುಳ್ಳವಳು) ೬೩೮ ಪೀತಾಂಗೀ (ಪೀತವರ್ಣವಾದ ಶರೀರವುಳ್ಳವಳು) ೬೩೯ ಪೀತವಸನಾ (ಪೀತವರ್ಣವಾದ ಬಟ್ಟೆಯುಳ್ಳವಳು) ೬೪೦ ಪೀತಶಯ್ಯಾ (ಪೀತವರ್ಣವಾದ ಶಯ್ಯೆಯುಳ್ಳವಳು) ೬೪೧ ಪಿಶಾಚಿನೀ (ಪಿಶಾಚಿಗಳಿಗೂ ನಿಯಾಮಕಳು). ॥೧೦೨॥

೬೪೨ ಪೀತಕ್ರಿಯಾ ೬೪೩ ಪಿಶಾಚಘ್ನೀ (ಪಿಶಾಚವನ್ನು ನಾಶಮಾಡತಕ್ಕವಳು) ೬೪೪ ಪಾಟಲಾಕ್ಷೀ (ಪಾಟಲವರ್ಣವಾದ ಕಣ್ಣುಳ್ಳವಳು) ೬೪೫ ಪಟುಕ್ರಿಯಾ (ಸಮರ್ಥಕ್ರಿಯೆಯುಳ್ಳವಳು) ೬೪೬ ಪಂಚಭಕ್ಷಾ (ವಾಮಾಚಾರಪ್ರಿಯಳು) ೬೪೭ ಪ್ರಿಯಾಚಾರಾ (ಪ್ರಿಯಕರವಾದ ಆಚಾರವುಳ್ಳವಳು) ೬೪೮ ಪೂತನಾ ೬೪೯ ಪ್ರಾಣಘಾತಿನೀ (ಪ್ರಾಣನಾಶಕಳು). ॥೧೦೩॥

೬೫೦ ಪುನ್ನಾಗವನಮಧ್ಯಸ್ಥಾ (ಪುನ್ನಾಗಪುಷ್ಪವನಮಧ್ಯದಲ್ಲಿರುವವಳು) ೬೫೧ ಪುಣ್ಯತೀರ್ಥನಿಷೇವಿತಾ (ಪುಣ್ಯತೀರ್ಥದಲ್ಲಿ ಇರುವವಳು) ೬೫೨ ಪಂಚಾಂಗೀ (ಪಂಚಾಂಗಗಳುಳ್ಳವಳು) ೬೫೩ ಪರಾಶಕ್ತಿಃ (ಪರಾಶಕ್ತಿಸ್ವರೂಪಳು) ೬೫೪ ಪರಮಾಹ್ಲಾದಕಾರಿಣೀ (ಪರಮಸಂತೋಷವನ್ನುಂಟುಮಾಡುವವಳು). ॥೧೦೪॥

೬೫೫ ಪುಷ್ಪಕಾಂಡಸ್ಥಿತಾ (ಪುಷ್ಪಕಾಂಡದಲ್ಲಿರುವವಳು) ೬೫೬ ಪೂಷಾ ೬೫೭ ಪೋಷಿತಾಖಿಲವಿಷ್ಟಪಾ (ಸಮಸ್ತಲೋಕರಕ್ಷಕಳು) ೬೫೮ ಪಾನಪ್ರಿಯಾ

**ಪಂಚಮಾತ್ರಾತ್ಮಿಕಾ ಪೃಥ್ವೀ ಪಥಿಕಾ ಪೃಥುದೋಹಿನೀ ।**
**ಪುರಾಣನ್ಯಾಯಮೀಮಾಂಸಾ ಪಾಟಲೀ ಪುಷ್ಪಗಂಧಿನೀ ॥೧೦೬॥**

**ಪುಣ್ಯಪ್ರಜಾ ಪಾರದಾತ್ರೀ ಪರಮಾರ್ಗೈಕಗೋಚರಾ ।**
**ಪ್ರವಾಲಶೋಭಾ ಪೂರ್ಣಾಶಾ ಪ್ರಣವಾ ಪಲ್ಲವೋದರೀ ॥೧೦೭॥**

**ಫಲಿನೀ ಫಲದಾ ಫಲ್ಗುಃ ಫೂತ್ಕಾರೀ ಫಲಕಾಕೃತಿಃ ।**
**ಫಣೀಂದ್ರ ಭೋಗ ಶಯನಾ ಫಣಿಮಂಡಲಮಂಡಿತಾ ॥೧೦೮॥**

---

೬೫೯ ಪಂಚಶಿಖಾ (ಪಂಚಶಿಖೆಗಳುಳ್ಳವಳು) ೬೬೦ ಪನ್ನಗೋಪರಿಶಾಯಿನೀ (ಹಾವಿನಮೇಲೆ ಮಲಗುವವಳು). ॥೧೦೫॥

೬೬೧ ಪಂಚಮಾತ್ರಾತ್ಮಿಕಾ ,ಪಂಚಮಾತ್ರಾ (ಅಕ್ಷರ, ಸ್ವರೂಪಳು ೬೬೨ ಪೃಥ್ವೀ (ಭೂಸ್ವರೂಪಳು) ೬೬೩ ಪಥಿಕಾ (ಮಾರ್ಗಚಾರಿಣಿಯು) ೬೬೪ ಪೃಥುದೋಹಿನೀ ೬೬೫ ಪುರಾಣನ್ಯಾಯಮೀಮಾಂಸಾ ೬೬೬ ಪಾಟಲೀ (ಪಾಟಲೀಪುಷ್ಪರೂಪಳು) ೬೬೭ ಪುಷ್ಪಗಂಧಿನೀ (ಪುಷ್ಪಗಂಧವುಳ್ಳವಳು) ॥೧೦೬॥

೬೬೮ ಪುಣ್ಯಪ್ರಜಾ (ಪುಣ್ಯಕರವಾದ ಪ್ರಜೆಗಳುಳ್ಳವಳು) ೬೬೯ ಪಾರದಾತ್ರೀ (ಸಂಸಾರಸಾಗರವನ್ನು ದಾಟಿಸುವವಳು) ೬೭೦ ಪರಮಾರ್ಗೈಕಗೋಚರಾ (ಮೋಕ್ಷಮಾರ್ಗಗೋಚರಳು) (ತಪಸ್ವಿಗಳಿಗೆ ಮಾತ್ರ ಗೋಚರಿಸುವವಳು) ೬೭೧ ಪ್ರವಾಲಶೋಭಾ (ಪ್ರವಾಳದಂತೆ ಪ್ರಕಾಶಿಸುವವಳು) ೬೭೨ ಪೂರ್ಣಾಶಾ (ಪರಿಪೂರ್ಣಕಾಮಳು) ೬೭೩ ಪ್ರಣವಾ (ಪ್ರಣವಸ್ವರೂಪಳು) ೬೭೪ ಪಲ್ಲವೋದರೀ (ಚಿಗುರಿನಂತೆ ಇರುವ ಹೊಟ್ಟೆಯುಳ್ಳವಳು) ॥೧೦೭॥

"ಫಲಿನೀ" ಎಂಬ ನಾಮ ಮೊದಲುಗೊಂಡು ಏಳು "ಫ". ಕಾರಾದಿಯಾದ ನಾಮಗಳು ಹೇಳಲ್ಪಡುತ್ತವೆ.

೬೭೫ ಫಲಿನೀ (ಅಗ್ನಿಶಿಖಾಸ್ವರೂಪಳು) ೬೭೬ ಫಲದಾ (ಫಲವನ್ನು ಕೊಡತಕ್ಕವಳು) ೬೭೭ ಫಲ್ಗುಃ (ನದೀಭೇದಸ್ವರೂಪಳು) (ಅಸಾರಳು) ೬೭೮ ಫೂತ್ಕಾರೀ ("ಫೂ" ಎಂದು ಶಬ್ದಮಾಡತಕ್ಕವಳು) ೬೭೯ ಫಲಕಾಕೃತಿಃ (ಹಲಗೆಯ ಆಕಾರವುಳ್ಳವಳು) ೬೮೦ ಫಣೀಂದ್ರಭೋಗಶಯನಾ (ಹಾವಿನ ಶರೀರದಮೇಲೆ ಮಲಗತಕ್ಕವಳು) ೬೮೧ ಫಣಿಮಂಡಲಮಂಡಿತಾ (ಸರ್ಪಗಳಿಂದ ಅಲಂಕೃತಳಾದವಳು) ॥೧೦೮॥

**ಬಾಲಬಾಲಾ ಬಹುಮತಾ ಬಾಲಾತಪನಿಭಾಂಶುಕಾ ।**
**ಬಲಭದ್ರಪ್ರಿಯಾ ವಂದ್ಯಾ ವಡವಾ ಬುದ್ಧಿಸಂಸ್ತುತಾ ॥೧೦೯॥**

**ಬಂದೀದೇವೀ ಬಿಲವತೀ ಬಡಿಶಘ್ನೀ ಬಲಿಪ್ರಿಯಾ ।**
**ಬಾಂಧವೀ ಬೋಧಿತಾ ಬುದ್ಧಿಃ ಬಂಧೂಕಕುಸುಮಪ್ರಿಯಾ ॥೧೧೦॥**

**ಬಾಲಭಾನುಪ್ರಭಾಕಾರಾ ಬ್ರಾಹ್ಮೀ ಬ್ರಾಹ್ಮಣದೇವತಾ ।**
**ಬೃಹಸ್ಪತಿಸ್ತುತಾ ವೃಂದಾ ವೃಂದಾವನವಿಹಾರಿಣೀ ॥೧೧೧॥**

---

"ಬಾಲಬಾಲಾ" ಎಂಬ ನಾಮ ಮೊದಲುಗೊಂಡು "ಬ್ರಹ್ಮಕಂಕಣ ಸೂತ್ರಿಣೀ" ಎಂಬ ನಾಮದವರೆಗಿನ ಐವತ್ತು ನಾಮಗಳು "ಬ"ಕಾರಾದಿಯಾಗಿ ಹೇಳಲ್ಪಡುತ್ತವೆ.

೬೮೨ ಬಾಲಬಾಲಾ (ಬಾಲೆಗಿಂತಲೂ ಬಾಲಿಕೆಯ ಸ್ವರೂಪಳು) ೬೮೩ ಬಹುಮತಾ (ಪೂಜಾಯೋಗ್ಯಳು) ೬೮೪ ಬಾಲಾತಪನಿಭಾಂಶುಕಾ (ಎಳೆಬಿಸಿಲಿನಕಾಂತಿಗೆ ಸಮವಾದ ವಸ್ತ್ರವುಳ್ಳವಳು) ೬೮೫ ಬಲಭದ್ರಪ್ರಿಯಾ (ಬಲರಾಮನಿಗೆ ಪ್ರಿಯಳಾದವಳು) ೬೮೬ ವಂದ್ಯಾ (ನಮಸ್ಕಾರಾರ್ಹಳು) ೬೮೭ ವಡವಾ (ಬಡಬಾಗ್ನಿಪ್ರಾಯಳು) "ವ-ಬ ಯೋರಭೇದಃ" ಎಂಬುದರಿಂದ ಮಧ್ಯೆ ಈ ಪದಗಳನ್ನು ಉಪಯೋಗಿಸಲಾಗಿದೆ) ೬೮೮ ಬುದ್ಧಿಸಂಸ್ತುತಾ (ಬುದ್ಧಿಯಿಂದ ಹೊಗಳಲ್ಪಡತಕ್ಕವಳು.) ॥೧೦೯॥

೬೮೯ ಬಂದೀದೇವೀ (ಬಂದೀ ಎಂಬ ಹೆಸರುಳ್ಳವಳು) ೬೯೦ ಬಿಲವತೀ (ಕರ್ಮಛಿದ್ರವನ್ನು ತಿಳಿಯತಕ್ಕವಳು) ೬೯೧ ಬಡಿಶಘ್ನೀ (ಕಪಟದ ಬಲೆಯ ನಾಶಕಳು) ೬೯೨ ಬಲಿಪ್ರಿಯಾ (ಬಲಿಯನ್ನು ಪ್ರೀತಿಸುವವಳು) ೬೯೩ ಬಾಂಧವೀ ೬೯೪ ಬೋಧಿತಾ (ಎಚ್ಚರಗೊಳಿಸುವವಳು) ೬೯೫ ಬುದ್ಧಿಃ (ಬುದ್ಧಿಸ್ವರೂಪಳು) ೬೯೬ ಬಂಧೂಕ ಕುಸುಮಪ್ರಿಯಾ (ಬಂಧೂಕಪುಷ್ಪದಲ್ಲಿ ಪ್ರೀತಿಯುಳ್ಳವಳು.) ॥೧೧೦॥

೬೯೭ ಬಾಲಭಾನುಪ್ರಭಾಕಾರಾ (ಬಾಲಸೂರ್ಯಸಮಕಾಂತಿಯುಳ್ಳವಳು) ೬೯೮ ಬ್ರಾಹ್ಮೀ ೬೯೯ ಬ್ರಾಹ್ಮಣದೇವತಾ (ಬ್ರಾಹ್ಮಣರಿಂದ ಆರಾಧಿಸಲ್ಪಡತಕ್ಕವಳು) ೭೦೦ ಬೃಹಸ್ಪತಿಸ್ತುತಾ (ಬೃಹಸ್ಪತಿಯಿಂದ ಹೊಗಳಲ್ಪಡತಕ್ಕವಳು) ೭೦೧ ವೃಂದಾ (ಬೃಂದೆಯೆಂದು ಹೆಸರುಳ್ಳವಳು) ೭೦೨ ವೃಂದಾವನವಿಹಾರಿಣೀ (ಬೃಂದಾವನದಲ್ಲಿ ವಿಹಾರಮಾಡುವವಳು). ॥೧೧೧॥

ಬಾಲಾಕಿನೀ ಬಿಲಾಹಾರಾ ಬಿಲವಾಸಾ ಬಹೂದಕಾ ।
ಬಹುನೇತ್ರಾ ಬಹುಪದಾ ಬಹುಕರ್ಣಾವತಂಸಿಕಾ ॥೧೧೨॥

ಬಹುಬಾಹುಯುತಾ ಬೀಜರೂಪಿಣೀ ಬಹುರೂಪಿಣೀ !
ಬಿಂದುನಾದಕಲಾತೀತಾ ಬಿಂದುನಾದಸ್ವರೂಪಿಣೀ ॥೧೧೩॥

ಬದ್ಧಗೋಧಾಂಗುಲಿತ್ರಾಣಾ ಬದರ್ಯಾಶ್ರಮವಾಸಿನೀ ।
ಬೃಂದಾರಕಾ ಬೃಹತ್‌ಸ್ಕಂಧಾ ಬೃಹತೀ ಬಾಣಪಾತಿನೀ ॥೧೧೪॥

ವೃಂದಾಧ್ಯಕ್ಷಾ ಬಹುನುತಾ ವನಿತಾ ಬಹುವಿಕ್ರಮಾ ।
ಬದ್ಧಪದ್ಮಾಸನಾಸೀನಾ ಬಿಲ್ವಪತ್ರತಲಸ್ಥಿತಾ ॥೧೧೫॥ ✓

---

೭೦೩ ಬಾಲಾಕಿನೀ (ಬಕಸಮೂಹದಿಂದ ಕೂಡಿದವಳು) ೭೦೪ ಬಿಲಾಹಾರಾ (ಕರ್ಮಛಿದ್ರವನ್ನು (ನಾಶ) ಭಕ್ಷಣಮಾಡತಕ್ಕವಳು) ೭೦೫ ಬಿಲಾವಾಸಾ (ಬುದ್ಧಿಗುಹೆಯಲ್ಲಿ ವಾಸಮಾಡುವವಳು) ೭೦೬ ಬಹೂದಕಾ (ಜಲಸಮೃದ್ಧಿಯುಳ್ಳವಳು) ೭೦೭ ಬಹುನೇತ್ರಾ (ಅನೇಕ ದೃಷ್ಟಿಯುಳ್ಳವಳು) ೭೦೮ ಬಹುಪದಾ(ಅನೇಕ ಕಾಲುಗಳುಳ್ಳವಳು) ೭೦೯ ಬಹುಕರ್ಣಾವತಂಸಿಕಾ (ಕಿವಿಗಳಲ್ಲಿ ಅನೇಕ ಶಿರೀಷ ಪುಷ್ಪ ಮುಂತಾದ ಆಭರಣಗಳನ್ನು ಧರಿಸಿರುವವಳು). ॥೧೧೨॥

೭೧೦ ಬಹುಬಾಹುಯುತಾ (ಅನೇಕ ತೋಳುಗಳಿಂದ ಕೂಡಿದವಳು) ೭೧೧ ಬೀಜರೂಪಿಣೀ (ಬೀಜ (ಕಾರಣ) ಸ್ವರೂಪಳು) ೭೧೨ ಬಹುರೂಪಿಣೀ (ಅನೇಕ ರೂಪಗಳುಳ್ಳವಳು) ೭೧೩ ಬಿಂದುನಾದಕಲಾತೀತಾ (ಹದಿನೈದು ಕಲೆಗಳಿಂದ ಅತೀತವಾದ "ಸಾದಾ" ಎಂಬ ಕಲಾಸಹಿತಳಾದ ಶ್ರೀವಿದ್ಯಾಸ್ವರೂಪಳು) ೭೧೪ ಬಿಂದುನಾದಸ್ವರೂಪಿಣೀ (ಬಿಂದು ನಾದ ಮುಂತಾದ ಬಗೆಬಗೆಯ ಸ್ವರೂಪಳು). ॥೧೧೩॥

೭೧೫ ಬದ್ಧಗೋಧಾಂಗುಲಿತ್ರಾಣಾ (ಹಸ್ತತಲ ಮತ್ತು ಅಂಗುಲಿಗಳ ರಕ್ಷಣೆ ಮಾಡಿರುವವಳು) ೭೧೬ ಬದರ್ಯಾಶ್ರಮವಾಸಿನೀ (ಬದರಿಕಾಶ್ರಮದಲ್ಲಿ ವಾಸ ಮಾಡುವವಳು) ೭೧೭ ಬೃಂದಾರಕಾ (ದೇವತಾಸ್ವರೂಪಳು) ೭೧೮ ಬೃಹತ್ಸ್ಕಂಧಾ ೭೧೯ ಬೃಹತೀ (ಸರ್ವರಿಗೂ ದೊಡ್ಡವಳು) ೭೨೦ ಬಾಣಪಾತಿನೀ (ಬಾಣವನ್ನು ಸುರಿಸುವವಳು) ॥೧೧೪॥

೭೨೧ ವೃಂದಾಧ್ಯಕ್ಷಾ (ವೃಂದ ಅಥವಾ ಸಮೂಹಕ್ಕೆ ಅಧ್ಯಕ್ಷಳು) ೭೨೨ ಬಹುನುತಾ(ಅನೇಕರಿಂದ ಹೊಗಳಲ್ಪಡತಕ್ಕವಳು) ೭೨೩ ವನಿತಾ(ಶಿವನಲ್ಲಿ ಏಕಾಂತ

**ಬೋಧಿದ್ರುಮನಿಜಾವಾಸಾ ಬಡಿಸ್ಥಾ ಬಿಂದುದರ್ಪಣಾ ।**
**ಬಾಲಾ ಬಾಣಾಸನವತೀ ವಡವಾನಲವೇಗಿನೀ ॥೧೧೬॥**

**ಬ್ರಹ್ಮಾಂಡ ಬಹಿರಂತಸ್ಥಾ ಬ್ರಹ್ಮಕಂಕಣಸೂತ್ರಿಣೀ ।**
**ಭವಾನೀ ಭೀಷಣವತೀ ಭಾವಿನೀ ಭಯಹಾರಿಣೀ ॥೧೧೭॥**

**ಭದ್ರಕಾಲೀ ಭುಜಂಗಾಕ್ಷೀ ಭಾರತೀ ಭಾರತಾಶಯಾ ।**
**ಭೈರವೀ ಭೀಷಣಾಕಾರಾ ಭೂತಿದಾ ಭೂತಿಮಾಲಿನೀ ॥೧೧೮॥**

---

ಪ್ರೀತಿಯುಳ್ಳವಳು) ೬೨೪ ಬಹುವಿಕ್ರಮಾ (ಬಹಳ ಪರಾಕ್ರಮಶಾಲಿನಿಯು) ೬೨೫ ಬದ್ಧಪದ್ಮಾಸನಾಸೀನಾ (ಬದ್ಧಪದ್ಮಾಸನದಲ್ಲಿ ಕುಳಿತಿರುವವಳು) ೬೨೬ ಬಿಲ್ವಪತ್ರತಲಸ್ಥಿತಾ (ಬಿಲ್ವಪತ್ರದಲ್ಲಿರುವವಳು.) ॥೧೧೫॥

೬೨೭ ಬೋಧಿದ್ರುಮನಿಜಾವಾಸಾ (ಬೋಧಿವೃಕ್ಷದ ಕೆಳಗೆ ವಾಸಮಾಡುವವಳು) ೬೨೮ ಬಡಿಸ್ಥಾ (ಲಡಯೋರಭೇದಃ-ಬಲಿಸ್ಥಾ-ಪರಾಕ್ರಮಶಾಲಿನಿಯು) ೬೨೯ ಬಿಂದುದರ್ಪಣಾ (ಅವ್ಯಕ್ತಮಾಯಾತ್ಮಕವಾದ ದರ್ಪಣವುಳ್ಳವಳು) ೬೩೦ ಬಾಲಾ ೬೩೧ ಬಾಣಾಸನವತೀ (ಧನುಸ್ಸನ್ನು ಕೈಯಲ್ಲಿ ಧರಿಸಿರುವವಳು) ೬೩೨ ವಡವಾನಲವೇಗಿನೀ (ಬಡಬಾಗ್ನಿಸಮವೇಗವುಳ್ಳವಳು.) ॥೧೧೬॥

೬೩೩ ಬ್ರಹ್ಮಾಂಡಬಹಿರಂತಸ್ಥಾ (ಬ್ರಹ್ಮಾಂಡದ ಎಲ್ಲಾ ಭಾಗಗಳಲ್ಲಿಯೂ ಇರತಕ್ಕವಳು) ೬೩೪ ಬ್ರಹ್ಮಕಂಕಣಸೂತ್ರಿಣೀ (ಬ್ರಹ್ಮವಿದ್ಯಾಪ್ರಚಾರದಲ್ಲಿ ನಿರತಳು.)

"ಭವಾನೀ" ಎಂಬ ನಾಮ ಮೊದಲುಗೊಂಡು "ಭಾಗಧೇಯಿನೀ" ಎಂಬ ನಾಮದವರೆಗಿನ ಮೂವತ್ತೊಂಬತ್ತು ನಾಮಗಳು ಭಕಾರಾದಿಯಾಗಿ ಹೇಳಲ್ಪಡುತ್ತವೆ. ೬೩೫ ಭವಾನೀ ೬೩೬ ಭೀಷಣವತೀ (ಭಯಂಕರಳು) ೬೩೭ ಭಾವಿನೀ (ಧ್ಯಾನಾರ್ಹಳು) ೬೩೮ ಭಯಹಾರಿಣೀ (ಭಯನಾಶಕಳು). ॥೧೧೭॥

೬೩೯ ಭದ್ರಕಾಲೀ (ಭದ್ರಕಾಳೀ ಸ್ವರೂಪಳು) ೬೪೦ ಭುಜಂಗಾಕ್ಷೀ (ಸರ್ಪದಂತೆ ಸೂಕ್ಷ್ಮವಾದ ಕಣ್ಣುಳ್ಳವಳು) ೬೪೧ ಭಾರತೀ (ವಾಕ್ಸ್ವರೂಪಳು) ೬೪೨ ಭಾರತಾಶಯಾ (ಜ್ಞಾನಿಗಳ ಜ್ಞಾನಗೋಚರಳು) ೬೪೩ ಭೈರವೀ ೬೪೪ ಭೀಷಣಾಕಾರಾ (ಭಯಂಕರಸ್ವರೂಪಳು) ೬೪೫ ಭೂತಿದಾ (ಐಶ್ವರ್ಯವನ್ನು ಕೊಡತಕ್ಕವಳು) ೬೪೬ ಭೂತಿಮಾಲಿನೀ (ಐಶ್ವರ್ಯಪರಂಪರೆಯ ರಕ್ಷಕಳು). ॥೧೧೮॥

ಭಾಮಿನೀ ಭೋಗನಿರತಾ ಭದ್ರದಾ ಭೂರಿವಿಕ್ರಮಾ ।
ಭೂತವಾಸಾ ಭೃಗುಲತಾ ಭಾರ್ಗವೀ ಭೂಸುರಾರ್ಚಿತಾ ॥೧೧೯॥

ಭಾಗೀರಥೀ ಭೋಗವತೀ ಭವನಸ್ಥಾ ಭಿಷಗ್ವರಾ ।
ಭಾಮಿನೀ ಭೋಗಿನೀ ಭಾಷಾ ಭವಾನೀ ಭೂರಿದಕ್ಷಿಣಾ ॥೧೨೦॥

ಭರ್ಗಾತ್ಮಿಕಾ ಭೀಮವತೀ ಭವಬಂಧವಿಮೋಚಿನೀ ।
ಭಜನೀಯಾ ಭೂತಧಾತ್ರೀ ರಂಜಿತಾ ಭುವನೇಶ್ವರೀ ॥೧೨೧॥

ಭುಜಂಗವಲಯಾ ಭೀಮಾ ಭೇರುಂಡಾ ಭಾಗಧೇಯಿನೀ ।
ಮಾತಾ ಮಾಯಾ ಮಧುಮತೀ ಮಧುಜಿಹ್ವಾ ಮಧುಪ್ರಿಯಾ॥೧೨೨॥

---

೭೪೭ ಭಾಮಿನೀ ೭೪೮ ಭೋಗನಿರತಾ (ಭೋಗಾಸಕ್ತಳು ೭೪೯ ಭದ್ರದಾ (ಮಂಗಳಕರಳು) ೭೫೦ ಭೂರಿವಿಕ್ರಮಾ (ಬಹಳ ಪರಾಕ್ರಮಶಾಲಿನಿಯು) ೭೫೧ ಭೂತವಾಸಾ (ಸಮಸ್ತ ಪ್ರಾಣಿಗಳಲ್ಲಿಯೂ ವಾಸಿಸತಕ್ಕವಳು) ೭೫೨ ಭೃಗುಲತಾ (ಪ್ರಪಾತಸ್ಥಿತಲತಾಸ್ವರೂಪಳು) ೭೫೩ ಭಾರ್ಗವೀ (ಪಾರ್ವತೀ ಅಥವಾ ಲಕ್ಷ್ಮೀ ಸ್ವರೂಪಳು) ೭೫೪ ಭೂಸುರಾರ್ಚಿತಾ (ಬ್ರಾಹ್ಮಣರಿಂದ ಪೂಜಿಸಲ್ಪಡತಕ್ಕವಳು) ॥೧೧೯॥

೭೫೫ ಭಾಗೀರಥೀ ೭೫೬ ಭೋಗವತೀ ೭೫೭ ಭವನಸ್ಥಾ (ಮನೆಗಳಲ್ಲಿ ವಾಸಮಾಡುವವಳು) ೭೫೮ ಭಿಷಗ್ವರಾ (ವೈದ್ಯಶ್ರೇಷ್ಠಳು) ೭೫೯ ಭಾಮಿನೀ ೭೬೦ ಭೋಗಿನೀ ೭೬೧ ಭಾಷಾ ೭೬೨ ಭವಾನೀ ೭೬೩ ಭೂರಿದಕ್ಷಿಣಾ ॥೧೨೦॥

೭೬೪ ಭರ್ಗಾತ್ಮಿಕಾ ೭೬೫ ಭೀಮವತೀ ೭೬೬ ಭವಬಂಧವಿಮೋಚಿನೀ (ಸಂಸಾರಾರ್ಣವದಿಂದ ದಾಟಿಸತಕ್ಕವಳು) ೭೬೭ ಭಜನೀಯಾ (ಭಜಿಸಲು ಯೋಗ್ಯಳು) ೭೬೮ ಭೂತಧಾತ್ರೀರಂಜಿತಾ ೭೬೯ ಭುವನೇಶ್ವರೀ ॥೧೨೧॥

೭೭೦ ಭುಜಂಗವಲಯಾ (ಸರ್ಪವೇ ಬಳೆಯಾಗುಳ್ಳವಳು) ೭೭೧ ಭೀಮಾ ೭೭೨ ಭೇರುಂಡಾ ೭೭೩ ಭಾಗಧೇಯಿನೀ (ಅದೃಷ್ಟದಾತಳು)

"ಮಾತಾ" ಎಂಬ ನಾಮ ಮೊದಲುಗೊಂಡು "ಮಹಿಷಾಸುರಮರ್ದಿನೀ" ಎಂಬ ನಾಮದ ವರೆಗಿನ ಐವತ್ತುನಾಲ್ಕು ನಾಮಗಳು "ಮ" ಕಾರಾದಿಯಾದವುಗಳು.

**ಮಹಾದೇವೀ ಮಹಾಭಾಗಾ ಮಾಲಿನೀ ಮೀನಲೋಚನಾ ।**
**ಮಾಯಾತೀತಾ ಮಧುಮತೀ ಮಧುಮಾಂಸಾ ಮಧುದ್ರವಾ॥೧೨೩॥**

**ಮಾನವೀ ಮಧುಸಂಭೂತಾ ಮಿಥಿಲಾಪುರವಾಸಿನೀ ।**
**ಮಧುಕೈಟಭಸಂಹರ್ತ್ರೀ ಮೇದಿನೀ ಮೇಘಮಾಲಿನೀ ॥೧೨೪॥**

**ಮಂದೋದರೀ ಮಹಾಮಾಯಾ ಮೈಥಿಲೀ ಮಸೃಣಪ್ರಿಯಾ ।**
**ಮಹಾಲಕ್ಷ್ಮೀರ್ಮಹಾಕಾಳೀ ಮಹಾಕನ್ಯಾ ಮಹೇಶ್ವರೀ ॥೧೨೫॥**

**ಮಾಹೇಂದ್ರೀ ಮೇರುತನಯಾ ಮಂದಾರಕುಸುಮಾರ್ಚಿತಾ ।**
**ಮಂಜುಮಂಜೀರಚರಣಾ ಮೋಕ್ಷದಾ ಮಂಜುಭಾಷಿಣೀ ॥೧೨೬॥**

---

೨೭೪ ಮಾತಾ ೨೭೫ ಮಾಯಾ ೨೭೬ ಮಧುಮತೀ ೨೭೭ ಮಧುಜಿಹ್ವಾ (ಜೇನಿನಂತೆ ನಾಲಿಗೆಯುಳ್ಳವಳು) ೨೭೮ ಮಧುಪ್ರಿಯಾ (ಜೇನಿನಲ್ಲಿ ಪ್ರೀತಿಯುಳ್ಳವಳು) ॥೧೨೨॥

೨೭೯ ಮಹಾದೇವೀ ೨೮೦ ಮಹಾಭಾಗಾ ೨೮೧ ಮಾಲಿನೀ ೨೮೨ ಮೀನಲೋಚನಾ ೨೮೩ ಮಾಯಾತೀತಾ (ಮಾಯೆಗೂ ಮೀರಿದವಳು) ೨೮೪ ಮಧುಮತೀ ೨೮೫ ಮಧುಮಾಂಸಾ ೨೮೬ ಮಧುದ್ರವಾ. ॥೧೨೩॥

೨೮೭ ಮಾನವೀ (ಮನುಷ್ಯಸ್ವರೂಪಳು) ೨೮೮ ಮಧುಸಂಭೂತಾ (ಮಧುವಿನಲ್ಲಿ ಜನಿಸಿದವಳು) ೨೮೯ ಮಿಥಿಲಾಪುರವಾಸಿನೀ (ಮಿಥಿಲಾಪಟ್ಟಣದಲ್ಲಿ ವಾಸಿಸುವವಳು) ೨೯೦ ಮಧುಕೈಟಭಸಂಹರ್ತ್ರೀ (ಮಧುಕೈಟಭರನ್ನು ಸಂಹರಿಸಿದವಳು) ೨೯೧ ಮೇದಿನೀ (ಭೂಸ್ವರೂಪಳು) ೨೯೨ ಮೇಘಮಾಲಿನೀ. ॥೧೨೪॥

೨೯೩ ಮಂದೋದರೀ (ಸ್ವರ್ಣಹೊಟ್ಟೆಯುಳ್ಳವಳು) ೨೯೪ ಮಹಾಮಾಯಾ ೨೯೫ ಮೈಥಿಲೀ(ಮಿಥಿಲೆಯ ರಾಜನ ಮಗಳು) ೨೯೬ ಮಸೃಣಪ್ರಿಯಾ ಪೇಶಲಳು. ೨೯೭ ಮಹಾಲಕ್ಷ್ಮೀಃ ೨೯೮ ಮಹಾಕಾಳೀ ೨೯೯ ಮಹಾಕನ್ಯಾ ೩೦೦ ಮಹೇಶ್ವರೀ. ॥೧೨೫॥

೩೦೧ ಮಾಹೇಂದ್ರೀ (ಮಹೇಂದ್ರನಿಗೆ ಸಂಬಂಧಿಸಿದವಳು) ೩೦೨ ಮೇರುತನಯಾ (ಮೇರುಪರ್ವತ ಪುತ್ರಿಯು) ೩೦೩ ಮಂದಾರಕುಸುಮಾರ್ಚಿತಾ (ಮಂದಾರಪುಷ್ಪದಿಂದ ಪೂಜಿಸಲ್ಪಡತಕ್ಕವಳು) ೩೦೪ ಮಂಜುಮಂಜೀರಚರಣಾ (ಮನೋಹರವಾಗಿ ಧ್ವನಿಮಾಡುವ ಪಾದಾಭರಣವುಳ್ಳವಳು) ೩೦೫ ಮೋಕ್ಷದಾ

**ಮಧುರದ್ರಾವಿಣೀ ಮುದ್ರಾ ಮಲಯಾ ಮಲಯಾನ್ವಿತಾ ।**
**ಮೇಘಾ ಮರಕತಶ್ಯಾಮಾ ಮಾಗಧೀ ಮೇನಕಾತ್ಮಜಾ ॥೧೨೭॥**

**ಮಹಾಮಾರೀ ಮಹಾವೀರಾ ಮಹಾಶ್ಯಾಮಾ ಮನುಸ್ತುತಾ ।**
**ಮಾತೃಕಾ ಮಿಹಿರಾಭಾಸಾ ಮುಕುಂದಪದವಿಕ್ರಮಾ ॥೧೨೮॥**

**ಮೂಲಾಧಾರಸ್ಥಿತಾ ಮುಗ್ಧಾ ಮಣಿಪೂರಕವಾಸಿನೀ ।**
**ಮೃಗಾಕ್ಷೀ ಮಹಿಷಾರೂಢಾ ಮಹಿಷಾಸುರಮರ್ದಿನೀ ॥೧೨೯॥**

**ಯೋಗಾಸನಾ ಯೋಗಗಮ್ಯಾ ಯೋಗಾ ಯೌವನಕಾಶ್ರಯಾ ।**
**ಯೌವನೀ ಯುದ್ಧಮಧ್ಯಸ್ಥಾ ಯಮುನಾ ಯುಗಧಾರಿಣೀ ॥೧೩೦॥**

---

(ಮೋಕ್ಷವನ್ನು ಕೊಡುವವಳು) ೮೦೬ ಮಂಜುಭಾಷಿಣೀ (ಮನೋಹರವಾಗಿ ಮಾತನಾಡುವವಳು) ॥೧೨೬॥

೮೦೭ ಮಧುರದ್ರಾವಿಣೀ ೮೦೮ ಮುದ್ರಾ ೮೦೯ ಮಲಯಾ ೮೧೦ ಮಲಯಾನ್ವಿತಾ ೮೧೧ ಮೇಘಾ ೮೧೨ ಮರಕತಶ್ಯಾಮಾ ೮೧೩ ಮಾಗಧೀ ೮೧೪ ಮೇನಕಾತ್ಮಜಾ ॥೧೨೭॥

೮೧೫ ಮಹಾಮಾರೀ ೮೧೬ ಮಹಾವೀರಾ ೮೧೭ ಮಹಾಶ್ಯಾಮಾ (ಬಹಳ ಶಾಮಲವರ್ಣಳು) ೮೧೮ ಮನುಸ್ತುತಾ (ಮನುವಿನಿಂದ ಸ್ತೋತ್ರಮಾಡಲ್ಪಟ್ಟವಳು) ೮೧೯ ಮಾತೃಕಾ ೮೨೦ ಮಿಹಿರಾಭಾಸಾ ೮೨೧ ಮುಕುಂದಪದವಿಕ್ರಮಾ ॥೧೨೮॥

೮೨೨ ಮೂಲಾಧಾರಸ್ಥಿತಾ(ಮೂಲಾಧಾರಚಕ್ರದ ಸ್ಥಾನದಲ್ಲಿರತಕ್ಕವಳು)೮೨೩ ಮುಗ್ಧಾ ೮೨೪ ಮಣಿಪೂರಕವಾಸಿನೀ ೮೨೫ ಮೃಗಾಕ್ಷೀ ೮೨೬ ಮಹಿಷಾರೂಢಾ ೮೨೭ ಮಹಿಷಾಸುರಮರ್ದಿನೀ (ಮಹಿಷಾಸುರನನ್ನು ಸಂಹರಿಸಿದವಳು) ॥೧೨೯॥

"ಯೋಗಾಸನಾ" ಎಂಬ ನಾಮದಿಂದ "ಯಾತುಧಾನಭಯಂಕರೀ" ಎಂಬ ನಾಮದ ವರೆಗಿನ ಇಪ್ಪತ್ತು "ಯ" ಕಾರಾದಿ ನಾಮಗಳು. -

೮೨೮ ಯೋಗಾಸನಾ ೮೨೯ ಯೋಗಗಮ್ಯಾ (ಯೋಗಧ್ಯಾನದಿಂದ ಹೊಂದಲರ್ಹಳು) ೮೩೦ ಯೋಗಾ ೮೩೧ ಯೌವನಕಾಶ್ರಯಾ ೮೩೨ ಯೌವನೀ ೮೩೩ ಯುದ್ಧಮಧ್ಯಸ್ಥಾ (ಯುದ್ಧಕಾಲದಲ್ಲಿ ಮಧ್ಯಸ್ಥಳಾಗಿರುವವಳು) ೮೩೪ ಯಮುನಾ ೮೩೫ ಯುಗಧಾರಿಣೀ (ಯುಗವನ್ನು ಧರಿಸುವವಳು). ॥೧೩೦॥

ಯಕ್ಷಿಣೀ ಯೋಗಯುಕ್ತಾ ಚ ಯಕ್ಷರಾಜಪ್ರಸೂತಿನೀ ।
ಯಾತ್ರಾ ಯಾನವಿಧಾನಜ್ಞಾ ಯದುವಂಶಸಮುದ್ಭವಾ ॥೧೩೧॥

ಯಕಾರಾದಿಹಕಾರಾಂತಾ ಯಾಜುಷೀ ಯಜ್ಞರೂಪಿಣೀ ।
ಯಾಮಿನೀ ಯೋಗನಿರತಾ ಯಾತುಧಾನ ಭಯಂಕರೀ ॥೧೩೨॥

ರುಕ್ಮಿಣೀ ರಮಣೀ ರಾಮಾ ರೇವತೀ ರೇಣುಕಾ ರತಿಃ ।
ರೌದ್ರೀ ರೌದ್ರಪ್ರಿಯಾಕಾರಾ ರಾಮಮಾತಾ ರತಿಪ್ರಿಯಾ ॥೧೩೩॥

ರೋಹಿಣೀ ರಾಜ್ಯದಾ ರೇವಾ ರಮಾ ರಾಜೀವಲೋಚನಾ ।
ರಾಕೇಶೀ ರೂಪಸಂಪನ್ನಾ ರತ್ನಸಿಂಹಾಸನಸ್ಥಿತಾ ॥೧೩೪॥

---

೮೩೬ ಯಕ್ಷಿಣೀ ೮೩೭ ಯೋಗಯುಕ್ತಾ (ಯೋಗಾಭ್ಯಾಸದಿಂದ ಕೂಡಿದವಳು). ೮೩೮ ಯಕ್ಷರಾಜಪ್ರಸೂತಿನೀ (ಕುಬೇರಜನನಿಯು) ೮೩೯ ಯಾತ್ರಾ ಯಾನವಿಧಾನಜ್ಞಾ (ಯಾತ್ರೆ, ಯಾನ ಇವುಗಳ ರೀತಿಯನ್ನು ತಿಳಿದವಳು) ೮೪೦ ಯದುವಂಶಸಮುದ್ಭವಾ (ಯದುವಂಶದಲ್ಲಿ ಹುಟ್ಟಿದವಳು). ॥೧೩೧॥

೮೪೧ ಯಕಾರಾದಿ ಹಕಾರಾಂತಾ (ಯಕಾರಾದಿಯಾದ ಹಕಾರಾಂತವಾದ ವರ್ಣಸ್ವರೂಪಳು) ೮೪೨ ಯಾಜುಷೀ (ಯಜುರ್ವೇದಕ್ಕೆ ಸಂಬಂಧಪಟ್ಟವಳು) ೮೪೩ ಯಜ್ಞರೂಪಿಣೀ (ಯಜ್ಞಸ್ವರೂಪಳು) ೮೪೪ ಯಾಮಿನೀ ೮೪೫ ಯೋಗನಿರತಾ (ಯೋಗಾಭ್ಯಾಸದಲ್ಲಿ ಆಸಕ್ತಳು) ೮೪೬ ಯಾತುಧಾನಭಯಂಕರೀ (ರಾಕ್ಷಸರಿಗೆ ಭಯಂಕರಳು). ॥೧೩೨॥

" ರುಕ್ಮಿಣೀ " ಎಂಬ ನಾಮ ಮೊದಲುಗೊಂಡು " ರುಕ್ಮಭೂಷಣಾ " ಎಂಬ ನಾಮದವರೆಗಿನ ಮೂವತ್ತೇಳು " ರ "ಕಾರಾದಿ ನಾಮಗಳು.

೮೪೭ ರುಕ್ಮಿಣೀ ೮೪೮ ರಮಣೀ ೮೪೯ ರಾಮಾ ೮೫೦ ರೇವತೀ ೮೫೧ ರೇಣುಕಾ ೮೫೨ ರತಿಃ ೮೫೩ ರೌದ್ರೀ (ಭಯಂಕರಸ್ವರೂಪಳು) ೮೫೪ ರೌದ್ರಪ್ರಿಯಾಕಾರಾ ೮೫೫ ರಾಮಮಾತಾ ೮೫೬ ರತಿಪ್ರಿಯಾ. ॥೧೩೩॥

೮೫೭ ರೋಹಿಣೀ ೮೫೮ ರಾಜ್ಯದಾ (ರಾಜ್ಯವನ್ನು ಕೊಡುವವಳು) ೮೫೯ ರೇವಾ ೮೬೦ ರಮಾ ೮೬೧ ರಾಜೀವಲೋಚನಾ (ಕಮಲದಂತೆ ಕಣ್ಣುಳ್ಳವಳು) ೮೬೨ ರಾಕೇಶೀ (ಪೂರ್ಣಚಂದ್ರಯುಕ್ತವಾದ ರಾತ್ರಿಗೆ ಒಡೆಯಳು) ೮೬೩ ರೂಪಸಂಪನ್ನಾ ೮೬೪ ರತ್ನಸಿಂಹಾಸನಸ್ಥಿತಾ. ॥೧೩೪॥

ರಕ್ತಮಾಲ್ಯಾಂಬರಧರಾ ರಕ್ತಗಂಧಾನುಲೇಪನಾ ।
ರಾಜಹಂಸಸಮಾರೂಢಾ ರಂಭಾ ರಕ್ತಬಲಿಪ್ರಿಯಾ ॥೧೩೫॥

ರಮಣೀಯಯುಗಾಧಾರಾ ರಾಜಿತಾಖಿಲಭೂತಲಾ ।
ರುರುಚರ್ಮಪರೀಧಾನಾ ರಥಿನೀ ರತ್ನಮಾಲಿಕಾ ॥೧೩೬॥

ರೋಗೇಶೀ ರೋಗಶಮನೀ ರಾವಿಣೀ ರೋಮಹರ್ಷಿಣೀ ।
ರಾಮಚಂದ್ರಪದಾಕ್ರಾಂತಾ ರಾವಣಚ್ಛೇದಕಾರಿಣೀ ॥೧೩೭॥

ರತ್ನವಸ್ತ್ರಪರಿಚ್ಛನ್ನಾ ರಥಸ್ಥಾ ರುಕ್ಮಭೂಷಣಾ ।
ಲಜ್ಜಾಧಿದೇವತಾ ಲೋಲಾ ಲಲಿತಾ ಲಿಂಗಧಾರಿಣೀ ॥೧೩೮॥

---

೮೬೫ ರಕ್ತಮಾಲ್ಯಾಂಬರಧರಾ (ರಕ್ತವರ್ಣದ ಹೂ, ಬಟ್ಟೆ ಇವುಗಳನ್ನು ಧರಿಸುವವಳು) ೮೬೬ ರಕ್ತಗಂಧಾನುಲೇಪನಾ (ರಕ್ತವರ್ಣದ ಗಂಧವನ್ನು ಲೇಪಿಸಿಕೊಳ್ಳುವವಳು) ೮೬೭ ರಾಜಹಂಸಸಮಾರೂಢಾ (ರಾಜಹಂಸದಮೇಲೆ ಕುಳಿತುಕೊಳ್ಳುವವಳು) ೮೬೮ ರಂಭಾ ೮೬೯ ರಕ್ತಬಲಿಪ್ರಿಯಾ. ॥೧೩೫॥

೮೭೦ ರಮಣೀಯಯುಗಾಧಾರಾ ೮೭೧ ರಾಜಿತಾಖಿಲಭೂತಲಾ (ಭೂಮಂಡಲದಲ್ಲೆಲ್ಲಾ ಪ್ರಕಾಶಮಾನಳಾದವಳು) ೮೭೨ ರುರುಚರ್ಮಪರೀಧಾನಾ (ಕೃಷ್ಣಾಜಿನಧಾರಿಣಿಯು) ೮೭೩ ರಥಿನೀ ೮೭೪ ರತ್ನಮಾಲಿಕಾ (ರತ್ನಮಾಲೆಯನ್ನು ಧರಿಸುವವಳು) ॥೧೩೬॥

೮೭೫ ರೋಗೇಶೀ ೮೭೬ ರೋಗಶಮನೀ (ರೋಗನಾಶಕಳು) ೮೭೭ ರಾವಿಣೀ (ಗರ್ಜಿಸುವವಳು) ೮೭೮ ರೋಮಹರ್ಷಿಣೀ ೮೭೯ ರಾಮಚಂದ್ರಪದಾಕ್ರಾಂತಾ ೮೮೦ ರಾವಣಚ್ಛೇದಕಾರಿಣೀ. ॥೧೩೭॥

೮೮೧ ರತ್ನವಸ್ತ್ರಪರಿಚ್ಛನ್ನಾ (ರತ್ನಮಯವಾದ ವಸ್ತ್ರದಿಂದ ಆಚ್ಛಾದಿಸಲ್ಪಟ್ಟವಳು) ೮೮೨ ರಥಸ್ಥಾ ೮೮೩ ರುಕ್ಮಭೂಷಣಾ (ಸುವರ್ಣಮಯವಾದ ಆಭರಣಗಳುಳ್ಳವಳು).

"ಲಜ್ಜಾ" ಎಂಬ ನಾಮ ಮೊದಲುಗೊಂಡು "ಲೋಕಧಾರಿಣೀ" ಎಂಬ ನಾಮದವರೆಗೆ ಹದಿಮೂರು "ಲ"ಕಾರಾದಿ ನಾಮಗಳು.

೮೮೪ ಲಜ್ಜಾಧಿದೇವತಾ (ಲಜ್ಜೆಗೆ ಅಧಿದೇವತೆಯು) ೮೮೫ ಲೋಲಾ ೮೮೬ ಲಲಿತಾ ೮೮೭ ಲಿಂಗಧಾರಿಣೀ. ॥೧೩೮॥

**ಲಕ್ಷ್ಮೀಃ ಲೋಲಾ ಲುಪ್ತವಿಷಾ ಲೋಕಿನೀ ಲೋಕವಿಶ್ರುತಾ ।**
**ಲಜ್ಜಾ ಲಂಬೋದರೀದೇವೀ ಲಲನಾ ಲೋಕಧಾರಿಣೀ ॥೧೩೯॥**

**ವರದಾ ವಂದಿತಾ ವಿದ್ಯಾ ವೈಷ್ಣವೀ ವಿಮಲಾಕೃತಿಃ ।**
**ವಾರಾಹೀ ವಿರಜಾ ವರ್ಷಾ ವರಲಕ್ಷ್ಮೀರ್ವಿಲಾಸಿನೀ ॥೧೪೦॥**

**ವಿನುತಾ ವ್ಯೋಮ ಮಧ್ಯಸ್ಥಾ ವಾರಿಜಾಸನಸಂಸ್ಥಿತಾ ।**
**ವಾರುಣೀ ವೇಣಿಸಂಭೂತಾ ವೀತಿಹೋತ್ರಾ ವಿರೂಪಿಣೀ ॥೧೪೧॥**

**ವಾಯುಮಂಡಲಮಧ್ಯಸ್ಥಾ ವಿಷ್ಣುರೂಪಾ ವಿಧಿಪ್ರಿಯಾ ।**
**ವಿಷ್ಣುಪತ್ನೀ ವಿಷ್ಣುಮತೀ ವಿಶಾಲಾಕ್ಷೀ ವಸುಂಧರಾ ॥೧೪೨॥**

---

೮೮೮ ಲಕ್ಷ್ಮೀಃ ೮೮೯ ಲೋಲಾ (ಚಂಚಲಳು) ೮೯೦ ಲುಪ್ತವಿಷಾ (ವಿಷವಿಲ್ಲದವಳು) ೮೯೧ ಲೋಕಿನೀ ೮೯೨ ಲೋಕವಿಶ್ರುತಾ ೮೯೩ ಲಜ್ಜಾ ೮೯೪ ಲಂಬೋದರೀದೇವೀ ೮೯೫ ಲಲನಾ ೮೯೬ ಲೋಕಧಾರಿಣೀ. ॥೧೩೯॥

"ವರದಾ" ಎಂಬ ನಾಮ ಮೊದಲುಗೊಂಡು "ವಾಲ್ಮೀಕಿಪರಿಸೇವಿತಾ" ಎಂಬ ನಾಮದವರೆಗಿನ ಮೂವತ್ತೇಳು "ವ"ಕಾರಾದಿ ನಾಮಗಳು.

೮೯೭ ವರದಾ ೮೯೮ ವಂದಿತಾ ೮೯೯ ವಿದ್ಯಾ ೯೦೦ ವೈಷ್ಣವೀ ೯೦೧ ವಿಮಲಾಕೃತಿಃ (ನಿರ್ಮಲವಾದ ಆಕಾರವುಳ್ಳವಳು) ೯೦೨ ವಾರಾಹೀ ೯೦೩ ವಿರಜಾ ೯೦೪ ವರ್ಷಾ ೯೦೫ ವರಲಕ್ಷ್ಮೀಃ ೯೦೬ ವಿಲಾಸಿನೀ. ॥೧೪೦॥

೯೦೭ ವಿನುತಾ ೯೦೮ ವ್ಯೋಮಮಧ್ಯಸ್ಥಾ (ಆಕಾಶದ ಮಧ್ಯದಲ್ಲಿರುವವಳು) ೯೦೯ ವಾರಿಜಾಸನಸಂಸ್ಥಿತಾ ೯೧೦ ವಾರುಣೀ ೯೧೧ ವೇಣುಸಂಭೂತಾ ೯೧೨ ವೀತಿಹೋತ್ರಾ (ಅಗ್ನಿಸ್ವರೂಪಳು) ೯೧೩ ವಿರೂಪಿಣೀ. ॥೧೪೧॥

೯೧೪ ವಾಯುಮಂಡಲಮಧ್ಯಸ್ಥಾ ೯೧೫ ವಿಷ್ಣುರೂಪಾ ೯೧೬ ವಿಧಿಪ್ರಿಯಾ ೯೧೭ ವಿಷ್ಣುಪತ್ನೀ ಸರ್ವವ್ಯಾಪಿಯಾದ ದೇವನ ಸಹಧರ್ಮಚಾರಿಣಿಯು; ೯೧೮ ವಿಷ್ಣುಮತೀ ಎಲ್ಲೆಡೆಗಳಲ್ಲೂ ವ್ಯಾಪನೆಯನ್ನು ಪಡೆದಿರುವವಳು; ೯೧೯ ವಿಶಾಲಾಕ್ಷೀ ೯೨೦ ವಸುಂಧರಾ. ॥೧೪೨॥

ವಾಮದೇವಪ್ರಿಯಾ ವೇಲಾ ವಜ್ರಿಣೀ ವಸುದೋಹಿನೀ ।
ವೇದಾಕ್ಷರಪರೀತಾಂಗೀ ವಾಜಪೇಯಫಲಪ್ರದಾ ॥೧೪೩॥

ವಾಸವೀ ವಾಮಜನನೀ ವೈಕುಂಠನಿಲಯಾ ವರಾ ।
ವ್ಯಾಸಪ್ರಿಯಾ ವರ್ಮಧರಾ ವಾಲ್ಮೀಕಿಪರಿಸೇವಿತಾ ॥೧೪೪॥

ಶಾಕಂಭರೀ ಶಿವಾ ಶಾಂತಾ ಶಾರದಾ ಶರಣಾಗತಿಃ ।
ಶಾತೋದರೀ ಶುಭಾಚಾರಾ ಶುಂಭಾಸುರವಿಮರ್ದಿನೀ ॥೧೪೫॥

ಶೋಭಾವತೀ ಶಿವಾಕಾರಾ ಶಂಕರಾರ್ಧಶರೀರಿಣೀ ।
ಶೋಣಾ ಶುಭಾಶಯಾ ಶುಭ್ರಾ ಶಿರಸ್ಸಂಧಾನಕಾರಿಣೀ ॥೧೪೬॥

---

೯೨೧ ವಾಮದೇವಪ್ರಿಯಾ (ಈಶ್ವರಪ್ರಿಯಳು) ೯೨೨ ವೇಲಾ ಚೈತನ್ಯ ಪ್ರವಾಹಕ್ಕೆ ದಡದಂತಿರುವವಳು; ೯೨೩ ವಜ್ರಿಣೀ ರಕ್ಷಿತಳು ಮತ್ತು ರಕ್ಷಕಳು; ೯೨೪ ವಸುದೋಹಿನೀ (ರತ್ನಗಳನ್ನು ಕರೆಯುವವಳು) ೯೨೫ ವೇದಾಕ್ಷರಪರೀತಾಂಗೀ (ವೇದಾಕ್ಷರಗಳಿಂದ ವ್ಯಾಜನಾವೃತ್ತಿಯಿಂದ ಹೊಗಳಲ್ಪಡತಕ್ಕವಳು) ೯೨೬ ವಾಜಪೇಯ ಫಲಪ್ರದಾ (ವಾಜಪೇಯ ಯಜ್ಞದ ಫಲವನ್ನು ಕೊಡತಕ್ಕವಳು)॥೧೪೩॥

೯೨೭ ವಾಸವೀ ಇಂದ್ರಶಕ್ತಿರೂಪಳು ,೯೨೮ ವಾಮಜನನೀ ,ಹೃದಯಕ್ಕೆ ಆಪ್ಯಾಯಕಳಾದ ತಾಯಿಯು ೯೨೯ ವೈಕುಂಠನಿಲಯಾ ೯೩೦ ವರಾ ೯೩೧ ವ್ಯಾಸಪ್ರಿಯಾ ಜ್ಞಾನಪ್ರಚಾರಕರಲ್ಲಿ ಪ್ರೀತಿಯುಳ್ಳವಳು; ೯೩೨ ವರ್ಮಧರಾ ಸಂರಕ್ಷಣ ಸಾಮಗ್ರಿಯುಳ್ಳವಳು ೯೩೩ ವಾಲ್ಮೀಕಿಪರಿಸೇವಿತಾ (ವಾಲ್ಮೀಕಿಯಿಂದ ಸೇವಿಸಲ್ಪಡತಕ್ಕವಳು). ॥೧೪೪॥

"ಶಾಕಂಭರೀ" ಎಂಬ ನಾಮ ಮೊದಲುಗೊಂಡು "ಶಾರ್ವರೀವಂದ್ಯಾ" ಎಂಬ ನಾಮದವರೆಗಿನ ಇಪ್ಪತ್ತೊಂಬತ್ತು "ಶ" ಕಾರಾದಿ ನಾಮಗಳು.

೯೩೪ ಶಾಕಂಭರೀ ೯೩೫ ಶಿವಾ ೯೩೬ ಶಾಂತಾ ೯೩೭ ಶಾರದಾ ೯೩೮ ಶರಣಾಗತಿಃ ೯೩೯ ಶಾತೋದರೀ ೯೪೦ ಶುಭಾಚಾರಾ ೯೪೧ ಶುಂಭಾಸುರ ವಿಮರ್ದಿನೀ. ॥೧೪೫॥

೯೪೨ ಶೋಭಾವತೀ ೯೪೩ ಶಿವಾಕಾರಾ ೯೪೪ ಶಂಕರಾರ್ಧಶರೀರಿಣೀ ೯೪೫ ಶೋಣಾ ೯೪೬ ಶುಭಾಶಯಾ ೯೪೭ ಶುಭ್ರಾ ೯೪೮ ಶಿರಸ್ಸಂಧಾನಕಾರಿಣೀ (ತಲೆಗಳನ್ನು (ಕಪಾಲಗಳನ್ನು) ಶೇಖರಿಸುವವಳು) ॥೧೪೬॥

ಶರಾವತೀ ಶರಾನಂದಾ ಶರಜ್ಜ್ಯೋತ್ಸ್ನಾ ಶುಭಾನನಾ ।
ಶರಭಾ ಶೂಲಿನೀ ಶುದ್ಧಾ ಶಬರೀ ಶುಕವಾಹನಾ ॥೧೪೭॥

ಶ್ರೀಮತೀ ಶ್ರೀಧರಾನಂದಾ ಶ್ರವಣಾನಂದದಾಯಿನೀ ।
ಶರ್ವಾಣೀ ಶರ್ವರೀವಂದ್ಯಾ ಷಡ್ಭಾಷಾ ಷಡೃತುಪ್ರಿಯಾ ॥೧೪೮॥

ಷಡಾಧಾರಸ್ಥಿತಾದೇವೀ ಷಣ್ಮುಖಪ್ರಿಯಕಾರಿಣೀ ।
ಷಡಂಗರೂಪಸುಮತಿ ಸುರಾಸುರನಮಸ್ಕೃತಾ ॥೧೪೯॥

ಸರಸ್ವತೀ ಸದಾಧಾರಾ ಸರ್ವಮಂಗಳಕಾರಿಣೀ ।
ಸಾಮಗಾನಪ್ರಿಯಾ ಸೂಕ್ಷ್ಮಾ ಸಾವಿತ್ರೀ ಸಾಮಸಂಭವಾ ॥೧೫೦॥

---

೭೪೯ ಶರಾವತೀ ೭೫೦ ಶರಾನಂದಾ ೭೫೧ ಶರಜ್ಜ್ಯೋತ್ಸ್ನಾ ೭೫೨ ಶುಭಾನನಾ ೭೫೩ ಶರಭಾ ೭೫೪ ಶೂಲಿನೀ ೭೫೫ ಶುದ್ಧಾ ೭೫೬ ಶಬರೀ ೭೫೭ ಶುಕವಾಹನಾ. ॥೧೪೭॥

೭೫೮ ಶ್ರೀಮತೀ ೭೫೯ ಶ್ರೀಧರಾನಂದಾ ೭೬೦ ಶ್ರವಣಾನಂದದಾಯಿನೀ ೭೬೧ ಶರ್ವಾಣೀ ೭೬೨ ಶರ್ವರೀವಂದ್ಯಾ.

"ಷಡ್ಭಾಷಾ" ಎಂಬ ನಾಮ ಮೊದಲುಗೊಂಡು "ಷಡಂಗರೂಪಸುಮತಿ ಸುರಾಸುರನಮಸ್ಕೃತಾ" ಎಂಬ ನಾಮದ ವರೆಗೆ ಐದು "ಷ" ಕಾರಾದಿ ನಾಮಗಳು.

೭೬೩ ಷಡ್ಭಾಷಾ (ಆರು ಭಾಷೆಗಳನ್ನು ತಿಳಿದವಳು) ೭೬೪ ಷಡೃತುಪ್ರಿಯಾ (ಆರು ಋತುಗಳಲ್ಲಿಯೂ ಪ್ರೀತಿಯುಳ್ಳವಳು) ೧೪೮॥

೭೬೫ ಷಡಾಧಾರಸ್ಥಿತಾದೇವೀ (ಮೂಲಾಧಾರಾದಿಚಕ್ರಗಳಲ್ಲಿರುವ ದೇವಿಯರಿಗೆಲ್ಲರಿಗೂ ದೇವಿಯು) ೭೬೬ ಷಣ್ಮುಖಪ್ರಿಯಕಾರಿಣೀ (ಕುಮಾರಸ್ವಾಮಿಗೆ ಪ್ರಿಯವನ್ನುಂಟುಮಾಡುವವಳು) ೭೬೭ ಷಡಂಗರೂಪಸುಮತಿಸುರಾಸುರ ನಮಸ್ಕೃತಾ (ಷಡಂಗರೂಪರಾದ ದೇವತೆಗಳೂ, ರಾಕ್ಷಸರೂ ಇವರಿಂದ ನಮಸ್ಕರಿಸಲ್ಪಡತಕ್ಕವಳು) ॥೧೪೯॥

"ಸರಸ್ವತೀ" ಎಂಬ ನಾಮದ ಮೊದಲ್ಗೊಂಡು "ಸೋಮಸಂಹತಿಃ" ಎಂಬ ನಾಮದವರೆಗಿನ ಇಪ್ಪತ್ತೇಳು "ಸ" ಕಾರಾದಿ ನಾಮಗಳು.

೭೬೮ ಸರಸ್ವತೀ ೭೬೯ ಸದಾಧಾರಾ ಸತ್ಪುರುಷರಿಗೆ ಮತ್ತು ಎಲ್ಲರ ಇರುವಿಕೆಗೂ ಆಶ್ರಯಕೊಡುವವಳು ೭೭೦ ಸರ್ವಮಂಗಳಕಾರಿಣೀ ೭೭೧ ಸಾಮಗಾನ

**ಸರ್ವಾವಾಸಾ ಸದಾನಂದಾ ಸುಸ್ತನೀ ಸಾಗರಾಂಬರಾ ।**
**ಸರ್ವೈಶ್ವರ್ಯಪ್ರಿಯಾ ಸಿದ್ಧಿಃ ಸಾಧುಬಂಧುಪರಾಕ್ರಮಾ ॥೧೫೧॥**

**ಸಪ್ತರ್ಷಿಮಂಡಲಗತಾ ಸೋಮಮಂಡಲವಾಸಿನೀ ।**
**ಸರ್ವಜ್ಞಾ ಸಾಂದ್ರಕರುಣಾ ಸಮಾನಾಧಿಕವರ್ಜಿತಾ ॥೧೫೨॥**

**ಸರ್ವೋತ್ತುಂಗಾ ಸಂಗಹೀನಾ ಸದ್ಗುಣಾ ಸಕಲೇಷ್ಟದಾ ।**
**ಸರಘಾ ಸೂರ್ಯತನಯಾ ಸುಕೇಶೀ ಸೋಮಸಂಹತಿಃ ॥೧೫೩॥**

**ಹಿರಣ್ಯವರ್ಣಾ ಹರಿಣೀ ಹ್ರೀಂಕಾರೀ ಹಂಸವಾಹಿನೀ ।**
**ಕ್ಷೌಮವಸ್ತ್ರಪರೀತಾಂಗೀ ಕ್ಷೀರಾಬ್ಧಿತನಯಾ ಕ್ಷಮಾ ॥೧೫೪॥**

---

ಪ್ರಿಯಾ ೯೭೨ ಸೂಕ್ಷ್ಮಾ ೯೭೩ ಸಾವಿತ್ರೀ ೯೭೪ ಸಾಮಸಂಭವಾ (ಸಾಮವೇದದ ತಿಳಿವಳಿಕೆಯುಳ್ಳವರಲ್ಲಿ ಹುಟ್ಟಿದಹಾಗೆ ಆವಿರ್ಭವಿಸಿರುವವಳು. ॥೧೫೦॥

೯೭೫ ಸರ್ವಾವಾಸಾ (ಸಮಸ್ತ ವಸ್ತುಗಳಲ್ಲಿಯೂ ಎಲ್ಲಕ್ಕೂ ಆಧಾರವಾಗಿಯೂ ಇರತಕ್ಕವಳು) ೯೭೬ ಸದಾನಂದಾ ೯೭೭ ಸುಸ್ತನೀ ೯೭೮ ಸಾಗರಾಂಬರಾ (ಸಾಗರವೇ ವಸ್ತ್ರವಾಗುಳ್ಳ ಭೂಮಿಯ ರೂಪದಲ್ಲೂ ಇರುವವಳು) ೯೭೯ ಸರ್ವೈಶ್ವರ್ಯಪ್ರಿಯಾ ೯೮೦ ಸಿದ್ಧಿಃ ೯೮೧ ಸಾಧುಬಂಧುಪರಾಕ್ರಮಾ ಸತ್ಪುರುಷರನ್ನು ರಕ್ಷಿಸುವುದರಲ್ಲಿ ಶಕ್ತಿಯುಳ್ಳವಳು. ॥೧೫೧॥

೯೮೨ ಸಪ್ತರ್ಷಿಮಂಡಲಗತಾ (ಸಪ್ತರ್ಷಿಮಂಡಲದಲ್ಲಿಯೂ ಇರುವವಳು) ೯೮೩ ಸೋಮಮಂಡಲವಾಸಿನೀ (ಚಂದ್ರಮಂಡಲದಲ್ಲಿಯೂ ವಾಸಿಸುವವಳು) ೯೮೪ ಸರ್ವಜ್ಞಾ ೯೮೫ ಸಾಂದ್ರಕರುಣಾ (ಕರುಣಾಪೂರ್ಣಳು) ೯೮೬ ಸಮಾನಾಧಿಕವರ್ಜಿತಾ ತನಗಿಂತ ಹೆಚ್ಚು ಗುಣಗಳುಳ್ಳ ಅಥವಾ ತನಗೆ ಸಮಾನವಾದ ಶಕ್ತಿ ಮುಂತಾದ ಗುಣಗಳುಳ್ಳ ಇತರರು ಯಾರೂ ಇಲ್ಲದವಳು.) ॥೧೫೨॥

೯೮೭ ಸರ್ವೋತ್ತುಂಗಾ (ಎಲ್ಲಕ್ಕಿಂತಲೂ ಮೀರಿ ಮೇಲಾಗಿರುವುದರಿಂದ ಶ್ರೇಷ್ಠಳು) ೯೮೮ ಸಂಗಹೀನಾ ೯೮೯ ಸದ್ಗುಣಾ ೯೯೦ ಸಕಲೇಷ್ಟದಾ ೯೯೧ ಸರಘಾ (ಮಧುಮಕ್ಷಿಕೆಯು-ದುಂಬಿ) ೯೯೨ ಸೂರ್ಯತನಯಾ ೯೯೩ ಸುಕೇಶೀ ೯೯೪ ಸೋಮಸಂಹತಿಃ. ॥೧೫೩॥

" ಹ " ಕಾರಾದಿ ನಾಲ್ಕು ನಾಮಗಳು.

**ಗಾಯತ್ರೀ ಚೈವ ಸಾವಿತ್ರೀ ಪಾರ್ವತೀ ಚ ಸರಸ್ವತೀ ।**
**ವೇದಗರ್ಭಾ ವರಾರೋಹಾ ಶ್ರೀಗಾಯತ್ರೀ ಪರಾಂಬಿಕಾ ॥೧೫೫॥**

**ಇತಿ ಸಾಹಸ್ರಕಂ ನಾಮ್ನಾಂ ಗಾಯತ್ರ್ಯಾಶ್ಚೈವ ನಾರದ ।**
**ಪುಣ್ಯದಂ ಸರ್ವಪಾಪಘ್ನಂ ಮಹಾಸಂಪತ್ತಿದಾಯಕಂ ॥೧೫೬॥**

**ಏವಂ ನಾಮಾನಿ ಗಾಯತ್ರ್ಯಾಸ್ತೋಷೋತ್ಪತ್ತಿಕರಾಣಿ ಹಿ ।**
**ಅಷ್ಟಮ್ಯಾಂ ಚ ವಿಶೇಷೇಣ ಪಠಿತವ್ಯಂ ದ್ವಿಜೈಸ್ಸಹ ॥೧೫೭॥**

---

೯೯೫ ಹಿರಣ್ಯವರ್ಣಾ ೯೯೬ ಹರಿಣೀ ೯೯೭ ಹ್ರಿಂಕಾರೀ ' ಹ್ರೀಂಕಾರ ಉಭಯಾತ್ಮಕಃ ' ಎಂಬಂತೆ ತಿಳಿಯಬರುವವಳು ; ೯೯೮ ಹಂಸವಾಹಿನೀ ಹಂಸ ಮಂತ್ರಜಪದಿಂದ ಹೃದಯದಲ್ಲಿ ಬಂದು ತೋರುವವಳು ; " ಕ್ಷ " ಕಾರಾದಿ ಮೂರು ನಾಮಗಳು.

೯೯೯ ಕ್ಷೌಮವಸ್ತ್ರಪರೀತಾಂಗೀ ರೇಷ್ಮೆಬಟ್ಟೆಯುಳ್ಳವಳು ೧೦೦೦ ಕ್ಷೀರಾಬ್ಧಿ ತನಯಾ ಸಮುದ್ರಪುತ್ರಿಯು ೧೦೦೧ ಕ್ಷಮಾ ಶಾಂತಿಗುಣಸ್ವರೂಪಳು. ॥೧೫೪॥

೧೦೦೨ ಗಾಯತ್ರೀ ನಾಮಜಪಮಾಡುವವರನ್ನು ಕಾಪಾಡುವವಳು ; ೧೦೦೩ ಸಾವಿತ್ರೀ ಎಲ್ಲ ಪ್ರಪಂಚಕ್ಕೂ ಕಾರಣಳು ; ೧೦೦೪ ಪಾರ್ವತೀ ಪರ್ವತ ಪುತ್ರಿಯಾದ ಉಮಾದೇವಿಯು ; ೧೦೦೫ ಸರಸ್ವತೀ ತಿಳಿವಳಿಕೆಗೆ ಸಾಧನವಾದ ವಾಣೀರೂಪಳು; ೧೦೦೬ ವೇದಗರ್ಭಾ ವೇದಗಳ ಆವಿರ್ಭಾವಕ್ಕೆ ಕಾರಣವಾದವಳು ; ೧೦೦೭ ವರಾರೋಹಾ ಶಿವಸುಖಕರಳು. ೧೦೦೮ ಶ್ರೀಗಾಯತ್ರೀಪರಾಂಬಿಕಾ ಎಲ್ಲ ತಾಯಿಯರಿಗಿಂತಲೂ ಶ್ರೇಯಸ್ಕರಳಾದ ತಾಯಿಯಾಗಿರುವವಳು. ॥೧೫೫॥

ಎಲೈ ನಾರದನೇ, ಪುಣ್ಯಕರವೂ, ಸಕಲ ಪಾಪ ಪರಿಹಾರಕವೂ, ಮಹದೈ ಶ್ವರ್ಯಪ್ರದವೂ ಆದ ಗಾಯತ್ರಿಯ ಸಹಸ್ರನಾಮವು, ॥೧೫೬॥

ಸಮಸ್ತರಿಗೂ ಆನಂದವನ್ನುಂಟುಮಾಡತಕ್ಕದ್ದು. ಆದ್ದರಿಂದ ಈ ನಾಮಗಳು (ಎಂಟು ನಾಮಗಳನ್ನು ಜೊತೆಗೆ ಸೇರಿಸಿಕೊಂಡು) ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಂದ ಪಠನಮಾಡಲ್ಪಡಬೇಕು. ॥೧೫೭॥

**ಜಪಂ ಕೃತ್ವಾ ಹೋಮಪೂಜಾಧ್ಯಾನಂ ಕೃತ್ವಾ ವಿಶೇಷತಃ ।**
**ಯಸ್ಮೈಕಸ್ಮೈ ನ ದಾತವ್ಯಂ ಗಾಯತ್ರ್ಯಸ್ತು ವಿಶೇಷತಃ ॥೧೫೮॥**

**ಸುಭಕ್ತಾಯ ಸುಶಿಷ್ಯಾಯ ವಕ್ತವ್ಯಂ ಭೂಸುರಾಯ ವೈ ।**
**ಭ್ರಷ್ಟೇಭ್ಯಸ್ಸಾಧಕೇಭ್ಯಶ್ಚ ಬಾಂಧವೇಭ್ಯೋ ನ ದರ್ಶಯೇತ್ ॥೧೫೯॥**

**ಯದ್ಗೃಹೇ ಲಿಖಿತಂ ಶಾಸ್ತ್ರಂ ಭಯಂ ತಸ್ಯ ನ ಕಸ್ಯಚಿತ್ ।**
**ಚಂಚಲಾಽಪಿ ಸ್ಥಿರಾ ಭೂತ್ವಾ ಕಮಲಾ ತತ್ರ ತಿಷ್ಠತಿ ॥೧೬೦॥**

**ಇದಂ ರಹಸ್ಯಂ ಪರಮಂ ಗುಹ್ಯಾದ್ಗುಹ್ಯತರಂ ಮಹತ್ ।**
**ಪುಣ್ಯಪ್ರದಂ ಮನುಷ್ಯಾಣಾಂ ದರಿದ್ರಾಣಾಂ ನಿಧಿಪ್ರದಂ ॥೧೬೧॥**

**ಮೋಕ್ಷಪ್ರದಂ ಮುಮುಕ್ಷೂಣಾಂ ಕಾಮಿನಾಂ ಸರ್ವಕಾಮದಂ ।**
**ರೋಗಾದ್ವೈ ಮುಚ್ಯತೇ ರೋಗೀ ಬದ್ಧೋ ಮುಚ್ಯೇತ ಬಂಧನಾತ್ ॥೧೬೨॥**

---

ಈ ಗಾಯತ್ರಿಯಮಂತ್ರ ಜಪ, ಹೋಮ, ಪೂಜಾ, ಧ್ಯಾನಾದಿಗಳನ್ನು ಮಾಡಿ ಅದನ್ನು ಯಾವನಿಗಾದರೂ ಅಪ್ರಯೋಜಕನಿಗೆ ದಾನಮಾಡಬಾರದು. ॥೧೫೮॥

ದೃಢವಾದ ಭಕ್ತಿಯುಳ್ಳವನೂ, ಸಚ್ಛಿಷ್ಯನೂ ಆದ ಬ್ರಾಹ್ಮಣನಿಗೆ ಈ ಗಾಯತ್ರಿಯನ್ನು ಉಪದೇಶಮಾಡಬೇಕೇ ವಿನಾ ಭ್ರಷ್ಟನೂ, ನೀಚನೂ ಆಗಿರತಕ್ಕವನಿಗೆ ಎಂದಿಗೂ ಉಪದೇಶಮಾಡಲೇಬಾರದು. ॥೧೫೯॥

ಯಾರ ಮನೆಯಲ್ಲಿ ಶಾಸ್ತ್ರಾದಿಗಳ ಬರವಣಿಗೆಯೊಂದಿಗೆ ಗಾಯತ್ರಿಯ ಪುರಶ್ಚರಣೆಯು ನಡೆಯುತ್ತದೆಯೋ ಅವರ ಮನೆಯಲ್ಲಿ ಚಂಚಲಳಾದಾಗ್ಯೂ ಲಕ್ಷ್ಮಿಯು ಸ್ಥಿರವಾಗಿ ನಿಲ್ಲುವಳು. ॥೧೬೦॥

ಅತ್ಯಂತ ರಹಸ್ಯತಮವಾದ ಈ ಗಾಯತ್ರಿಯ ಜಪದಿಂದ ಮನುಷ್ಯನಿಗೆ ಪುಣ್ಯವೂ ದರಿದ್ರನಿಗೆ ಐಶ್ವರ್ಯವೂ. ॥೧೬೧॥

ಮೋಕ್ಷಾಪೇಕ್ಷಿಗೆ ಮೋಕ್ಷವೂ, ಕಾಮಿಗೆ ಸರ್ವಾರ್ಥಸಿದ್ಧಿಯೂ ಲಭಿಸುತ್ತದೆ. ರೋಗಿಯು ರೋಗದಿಂದಲೂ, ಬಂಧಿತನು ಬಂಧನದಿಂದಲೂ ಬಿಡುಗಡೆ ಹೊಂದುವನು. ॥೧೬೨॥

ಬ್ರಹ್ಮಹತ್ಯಾಸುರಾಪಾನಂ ಸುವರ್ಣಸ್ತೇಯಿನೋನರಾಃ ।
ಗುರುತಲ್ಪಗತೋಽವಾ ಪಿ ಪಾತಕಾನ್ಮುಚ್ಯತೇಽಸಕೃತ್ ॥೧೬೩॥

ಅಸತ್ಪ್ರತಿಗ್ರಹಾಚ್ಚೈವಾಽಭಕ್ಷ್ಯಭಕ್ಷಾದ್ವಿಶೇಷತಃ ।
ಪಾಖಂಡಾನೃತ ಮುಖ್ಯೇಭ್ಯಃ ಪಠನಾದೇವ ಮುಚ್ಯತೇ ॥೧೬೪॥

ಇದಂ ರಹಸ್ಯಮಮಲಂ ಮಯೋಕ್ತಂ ಪದ್ಮಜೋದ್ಭವ ।
ಬ್ರಹ್ಮಸಾಯುಜ್ಯದಂ ನೃಣಾಂ ಸತ್ಯಂ ಸತ್ಯಂ ನ ಸಂಶಯಃ ॥೧೬೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಷಷ್ಠೋಽಧ್ಯಾಯಃ

---

ಮನುಷ್ಯರು ಬ್ರಹ್ಮಹತ್ಯ, ಸುರಾಪಾನ, ಸ್ವರ್ಣಸ್ತೇಯ, ಗುರುಶಯ್ಯಾ ಪ್ರವೇಶ ಮುಂತಾದ ಮಹಾಪಾತಕಗಳನ್ನು ಮಾಡಿದ್ದಾಗ್ಯೂ ಸಹ ಪಶ್ಚಾತ್ತಾಪಪಟ್ಟು ಅತ್ಯಂತ ಭಕ್ತಿಯಿಂದ ಈ ಗಾಯತ್ರಿಯ ಜಪವನ್ನು ಮಾಡಿದರೆ ಆ ಮಹಾಪಾತಕಗಳಿಂದ ಬಿಡುಗಡೆ ಹೊಂದುತ್ತಾರೆ. ||೧೬೩||

ದುರ್ದಾನಗಳನ್ನು ಪಡೆದಿದ್ದಾಗ್ಯೂ, ಅಭಕ್ಷ್ಯವಸ್ತುಗಳನ್ನು ಭಕ್ಷಣಮಾಡಿದ್ದಾಗ್ಯೂ, ಪಾಷಂಡಿಗಳು, ಅನೃತವಾದಿಗಳು ಇವರ ಸಹವಾಸದಿಂದ ದುಷ್ಟನಾಗಿದ್ದಾಗ್ಯೂ, ಒಂದಾವೃತ್ತಿ ಭಕ್ತಿಯಿಂದ ಈ ಗಾಯತ್ರಿಯನ್ನು ಜಪಿಸಿದರೆ ಪಾಪವಿಮುಕ್ತನಾಗುತ್ತಾನೆ. ||೧೬೪||

ಎಲೈ ನಾರದನೇ, ನನ್ನಿಂದ ಹೇಳಲ್ಪಟ್ಟ ಅತ್ಯಂತರಹಸ್ಯವೂ, ನಿರ್ಮಲವೂ, ಪಾಪವಿದೂರವೂ ಆದ ಈ ಗಾಯತ್ರಿಯ ಜಪತಪಾದ್ಯನುಷ್ಠಾನದಿಂದ ಮಾನವನು ಸರ್ವ ಪಾಪಗಳಿಂದ ವಿಮುಕ್ತನಾಗಿ ಅಂತ್ಯದಲ್ಲಿ ಬ್ರಹ್ಮಸಾಯುಜ್ಯವನ್ನು ಪಡೆಯುವುದರಲ್ಲಿ ಯಾವ ವಿಧವಾದ ಸಂದೇಹವೂ ಇಲ್ಲವೆಂಬ ಸಂಗತಿಯನ್ನು ನಿಸ್ಸಂಶಯವಾಗಿ ಹೇಳುತ್ತೇನೆ. ||೧೬೫||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

॥ ಸಪ್ತಮೋಽಧ್ಯಾಯಃ ॥

### ಏಳನೆಯ ಅಧ್ಯಾಯವು

॥ ನಾರದ ಉವಾಚ ॥

**ಶ್ರುತಂ ಸಹಸ್ರನಾಮಾಖ್ಯಂ ಶ್ರೀಗಾಯತ್ರ್ಯಾಃ ಫಲಪ್ರದಂ ।**
**ಸ್ತೋತ್ರಂ ಮಹೋನ್ನತಿಕರಂ ಮಹಾಭಾಗ್ಯಕರಂ ಪರಂ ॥೧॥**

**ಅಧುನಾ ಶ್ರೋತುಮಿಚ್ಛಾಮಿ ದೀಕ್ಷಾಲಕ್ಷಣಮುತ್ತಮಂ ।**
**ವಿನಾ ಯೇನ ನ ಸಿಧ್ಯೇತ ದೇವೀಮಂತ್ರೇಽಧಿಕಾರಿತಾ ॥೨॥**

**ಬ್ರಾಹ್ಮಣಾನಾಂ ಕ್ಷತ್ರಿಯಾಣಾಂ ವಿಶಾಂಸ್ತ್ರೀಣಾಂ ತಥೈವ ಚ ।**
**ಸಾಮಾನ್ಯವಿಧಿನಾ ಸರ್ವಂ ವಿಸ್ತರೇಣ ವದ ಪ್ರಭೋ ॥೩॥**

---

ಈ ಅಧ್ಯಾಯದಲ್ಲಿ ದೀಕ್ಷಾವಿಧಿಯು ಹೇಳಲ್ಪಡುತ್ತದೆ.

ನಾರದರು ಹೇಳಿದರು -- ಓ ಪರಮಾತ್ಮನೇ, ಸಮಸ್ತ ಇಷ್ಟಾರ್ಥಗಳನ್ನು ಕೊಡತಕ್ಕದ್ದೂ, ಮಹತ್ಪದವಿಯನ್ನುಂಟುಮಾಡತಕ್ಕದ್ದೂ, ಮಹದೈಶ್ವರ್ಯಕರವೂ, ಸರ್ವೋತ್ಕೃಷ್ಟವೂ ಆದ ಶ್ರೀಗಾಯತ್ರಿಯ ಸಹಸ್ರನಾಮಸ್ತೋತ್ರಜಪಾದಿಸಮಸ್ತ ವಿಷಯಗಳೂ ಕೇಳಲ್ಪಟ್ಟವು. ॥೧॥

ಯಾವುದನ್ನು ಹೊಂದದಿದ್ದರೆ, ಗಾಯತ್ರೀಮಂತ್ರದ ಜಪಸ್ತೋತ್ರಾದಿಗಳ ಅಧಿಕಾರವು ಬ್ರಾಹ್ಮಣರಿಗೆ ಸಿದ್ಧಿಸುವುದಿಲ್ಲವೋ ಅಂತಹ ಉತ್ತಮೋತ್ತಮವಾದ ದೀಕ್ಷಾಲಕ್ಷಣವನ್ನು ಈಗ ಕೇಳಿ ತಿಳಿಯಲು ಅಪೇಕ್ಷಿಸುತ್ತೇನೆ. ॥೨॥

ಓ ಪರಮಾತ್ಮನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಸ್ತ್ರೀಯರೇ ಮುಂತಾದ ವರಿಗೆ ದೇವೀಮಂತ್ರಜಪಾದಿಗಳ ಅಧಿಕಾರವು ಹೇಗೆ ಉಂಟಾಗುವುದು ? ಎಂಬುದನ್ನು ವಿಸ್ತಾರವಾಗಿ ವಿವರಿಸಬೇಕು. ಎಂದು ಪ್ರಾರ್ಥಿಸಲು, ॥೩॥

|| ಶ್ರೀನಾರಾಯಣ ಉವಾಚ ||

ಶೃಣು ದೀಕ್ಷಾಂ ಪ್ರವಕ್ಷ್ಯಾಮಿ ಶಿಷ್ಯಾಣಾಂ ಭಾವಿತಾತ್ಮನಾಂ ।
ದೇವಾಗ್ನಿಗುರುಪೂಜಾದಾವಧಿಕಾರೋ ಯಯಾ ಭವೇತ್ ||೪||

ದಿವ್ಯಂ ಜ್ಞಾನಂ ಹಿ ಯಾ ದದ್ಯಾತ್ಕುರ್ಯಾತ್ಪಾಪಕ್ಷಯಂ ತು ಯಾ ।
ಸೈವ ದೀಕ್ಷೇತಿ ಸಂಪ್ರೋಕ್ತಾ ವೇದತಂತ್ರವಿಶಾರದೈಃ ||೫||

ಅವಶ್ಯಂ ಸಾ ತು ಕರ್ತವ್ಯಾ ಯತೋ ಬಹುಫಲಾ ಮತಾ ।
ಗುರುಶಿಷ್ಯಾವುಭಾವತ್ರಾಪ್ಯತಿಶುದ್ಧಾವಪೇಕ್ಷಿತೌ ||೬||

ಗುರುಸ್ತು ವಿಧಿವತ್ಪ್ರಾತಃಕೃತ್ಯಂ ಸರ್ವಂ ವಿಧಾಯ ಚ ।
ಸ್ನಾನಸಂಧ್ಯಾದಿಕಂ ಸರ್ವಂ ಯಥಾವಿಧಿ ವಿಧಾಯ ಚ ||೭||

ಕಮಂಡಲುಕರೋ ಮೌನೀ ಗೃಹಂ ಯಾಯಾತ್ಸರಿತ್ತಟಾತ್ ।
ಯಾಗಮಂಡಪಮಾಸಾದ್ಯ ವಿಶೇತ್ತತ್ರಾಸನೇ ವರೇ ||೮||

---

ಪರಮಾತ್ಮನು ಹೇಳಿದನು — ಎಲೈ ನಾರದನೇ, ಭಕ್ತಿಶ್ರದ್ಧಾಸಹಿತರಾದ ಶಿಷ್ಯರಿಗೆ ದೇವಾಗ್ನಿಗುರುಪೂಜಾದಿಗಳ ವಿಷಯದಲ್ಲಿ ಅಧಿಕಾರವು ದೀಕ್ಷೆಯಿಂದ ಹೇಗೆ ಸಿದ್ಧಿಸುವುದು ? ಎಂಬುದನ್ನು ವಿಸ್ತರಿಸುತ್ತೇನೆ. ಕೇಳು. ||೪||

ಪಾಪಕ್ಷಯಪೂರ್ವಕವಾಗಿ ದಿವ್ಯಜ್ಞಾನವು ಯಾವುದರಿಂದ ಉಂಟಾಗುತ್ತದೆ ಎಂದು ವೇದಶಾಸ್ತ್ರಪಾರಂಗತರಿಂದ ಹೇಳಲ್ಪಡುತ್ತದೆಯೋ ಅದೇ " ದೀಕ್ಷಾ " ಎಂಬುದಾಗಿ ಕರೆಯಲ್ಪಡುತ್ತದೆ. ||೫||

ಬಹುಫಲಪ್ರದವಾದ ಆ ದೀಕ್ಷಾಕ್ರಿಯೆಯು ಅವಶ್ಯವಾಗಿಯೂ ಅನುಷ್ಠಿಸಲ್ಪಡತಕ್ಕದ್ದು. ಆ ಅನುಷ್ಠಾನ ಮಾಡಬೇಕಾದರೆ ಮಾತೃ, ಪಿತೃ, ಆಚಾರಾದಿ ವಿಷಯಗಳಲ್ಲಿ ಗುರುಶಿಷ್ಯರಿಬ್ಬರೂ ಅತ್ಯಂತ ಪರಿಶುದ್ಧರಾಗಿರಬೇಕು. ||೬||

ಗುರುವು ಪ್ರತಿದಿವಸವೂ ಸೂರ್ಯೋದಯಕಾಲದಲ್ಲಿ ಸ್ನಾನಸಂಧ್ಯಾದಿಸಮಸ್ತ ಆಹ್ನಿಕಕ್ರಿಯೆಗಳನ್ನೂ ಯಥಾವಿಧಿಯಾಗಿ ಮುಗಿಸಿ, ಜಲಪಾತ್ರ ಹಸ್ತನಾಗಿಯೂ, ಮನಸ್ಸಿನಲ್ಲಿಯೇ ದೇವರ ಧ್ಯಾನಮಾಡುವವನಾಗಿಯೂ, ಯಾರೊಡನೆಯೂ ಮಾತನಾಡದೆಯೂ, ನದಿಯ ತೀರದಿಂದ ಹೊರಟು ಮನೆಗೆ ಬಂದು ಯಾಗಮಂಡಪವನ್ನು ಪ್ರವೇಶಿಸಿ ಅಲ್ಲಿ ಶುದ್ಧವಾದ ಆಸನದಲ್ಲಿ ಕೂಡಬೇಕು. (ಮಂಡಪ ಶಬ್ದದಿಂದ-ಕುಂಡ

**ಆಚಮ್ಯ ಪ್ರಾಣಾನಾಯಮ್ಯ ಗಂಧಪುಷ್ಪವಿಮಿಶ್ರಿತಂ ।**
**ಸಪ್ತವಾರಾಸ್ತ್ರಮಂತ್ರೇಣ ಜಪ್ತಂ ವಾರಿ ಸುಸಾಧಯೇತ್ ॥೯॥**

**ವಾರಿಣಾ ತೇನ ಮತಿಮಾನ್ ಅಸ್ತ್ರ ಮಂತ್ರಂ ಸಮುಚ್ಚರನ್ ।**
**ಪ್ರೋಕ್ಷಯೇದ್ವಾರಮಖಿಲಂ ತತಃ ಪೂಜಾಂ ಸಮಾಚರೇತ್ ॥೧೦॥**

**ಊರ್ಧ್ವೋದುಂಬರಕೇ ದೇವಂ ಗಣನಾಥಂ ತಥಾ ಶ್ರಿಯಂ ।**
**ಸರಸ್ವತೀಂ ನಾಮಮಂತ್ರೈಃ ಪೂಜಯೇದ್ಗಂಧಪುಷ್ಪಕೈಃ ॥೧೧॥**

**ದ್ವಾರದಕ್ಷಿಣಶಾಖಾಯಾಂ ಗಂಗಾಂ ವಿಘ್ನೇಶಮರ್ಚಯೇತ್ ।**
**ದ್ವಾರಸ್ಯ ವಾಮಶಾಖಾಯಾಂ ಕ್ಷೇತ್ರಪಾಲಂ ಚ ಸೂರ್ಯಜಾಂ ॥೧೨॥**

---

ಮಂಡಪೋಕ್ತವಿಧಿಯಿಂದ ಷೋಡಶಹಸ್ತಪರಿಮಿತವಾದ ಕುಂಡಮಂಟಪವು ಮಾಡಲ್ಪಡಬೇಕು ಎಂದು ಸೂಚಿತವಾಗುತ್ತದೆ)

ಪಿಂಗಲಾಮತೇ-(ಕಲಾಕರಪ್ರಮಾಣಸ್ಸ್ಯನ್ಮಂಡಪೋ ಮುಖ್ಯ ಏವ ಚ ।) ಇತಿ. ॥೭-೮॥

ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ, ಅರ್ಘ್ಯಪಾತ್ರೆಗೆ ಜಲವನ್ನು ಹಾಕಿ, ಆ ಜಲವನ್ನು ಗಂಧ ಪುಷ್ಪಾದಿಗಳಿಂದ ಅಲಂಕರಿಸಿ ಏಳುಸಲ "ಫಟ್" ಎಂಬ ಅಸ್ತ್ರಮಂತ್ರದಿಂದ ಅಭಿಮಂತ್ರಿಸಬೇಕು. ॥೯॥

"ಫಟ್" ಎಂಬ ಅಸ್ತ್ರಮಂತ್ರವನ್ನು ಉಚ್ಚರಿಸುತ್ತಾ ಮಂಡಪದ್ವಾರವನ್ನೆಲ್ಲವನ್ನೂ ಆ ಅಭಿಮಂತ್ರಿತ ಜಲದಿಂದ ಪ್ರೋಕ್ಷಿಸಿ ಅನಂತರ ಪೂಜೆಗೆ ಪ್ರಾರಂಭಿಸಬೇಕು. ॥೧೦॥

ದ್ವಾರದ ಊರ್ಧ್ವಫಲಕದ ಪ್ರಥಮಭಾಗದಲ್ಲಿ ಗಣನಾಥನನ್ನೂ, ಮಧ್ಯಭಾಗದಲ್ಲಿ ಲಕ್ಷ್ಮಿಯನ್ನೂ, ದ್ವಿತೀಯಭಾಗದಲ್ಲಿ ಸರಸ್ವತಿಯನ್ನೂ, ಗಣೇಶಾಯ ನಮಃ-ಇತ್ಯಾದಿ ನಾಮ ಮಂತ್ರೋಚ್ಚಾರಣಪೂರ್ವಕವಾಗಿ ಗಂಧ ಪುಷ್ಪಾಕ್ಷತಾದಿಗಳಿಂದ ಪೂಜಿಸಬೇಕು. ॥೧೧॥

ದ್ವಾರದ ದಕ್ಷಿಣಭಾಗದಲ್ಲಿ, ಮೊದಲು ಗಂಗೆಯನ್ನು ಪೂಜಿಸಿ, ಅದರ ವಾಮಭಾಗದಲ್ಲಿ ವಿಘ್ನೇಶನನ್ನು ಪೂಜಿಸಬೇಕು. ದ್ವಾರದ ವಾಮಪಾರ್ಶ್ವದಲ್ಲಿ ಕ್ಷೇತ್ರಪಾಲಕನನ್ನೂ, ತದ್ವಾಮಪಾರ್ಶ್ವದಲ್ಲಿ ಯಮುನೆಯನ್ನೂ ಪೂಜಿಸಬೇಕು. ॥೧೨॥

ದೇಹಲ್ಯಾಂ ಪೂಜಯೇದಸ್ತ್ರದೇವತಾಮಸ್ತ್ರಮಂತ್ರತಃ ।
ಸರ್ವಂ ದೇವೀಮಯಂ ದೃಶ್ಯಮಿತಿ ಸಂಚಿಂತ್ಯ ಸರ್ವತಃ ॥೧೩॥

ದಿವ್ಯಾನುತ್ಸಾರಯೇದ್ವಿಘ್ನಾನಸ್ತ್ರಮಂತ್ರ ಜಪೇನ ತು ।
ಅಂತರಿಕ್ಷಗತಾನ್ ವಿಘ್ನಾನ್ ಪಾದಘಾತೈಸ್ತು ಭೂಮಿಗಾನ್ ॥೧೪॥

ವಾಮಶಾಖಾಂಸ್ಪೃಶನ್ಪಶ್ಚಾತ್ಪ್ರವಿಶೇದ್ದಕ್ಷಿಣಾಂಘ್ರಿಣಾ ।
ಪ್ರವಿಶ್ಯ ಕುಂಭಂ ಸಂಸ್ಥಾಪ್ಯ ಸಾಮಾನ್ಯಾರ್ಘ್ಯಂ ವಿಧಾಯ ಚ ॥೧೫॥

ತೇನ ಚಾರ್ಘ್ಯಜಲೇನಾಪಿ ನೈರ್ಋತ್ಯಾಂ ದಿಶಿ ಪೂಜಯೇತ್ ।
ವಾಸ್ತುನಾಥಂ ಪದ್ಮಯೋನಿಂ ಗಂಧಪುಷ್ಪಾಕ್ಷತಾದಿಭಿಃ ॥೧೬॥

ತತಃ ಕುರ್ಯಾತ್ಪಂಚಗವ್ಯಂ ತೇನಚಾರ್ಘ್ಯೋದಕೇನ ಚ ।
ತೋರಣಸ್ತಂಭಪರ್ಯಂತಂ ಪ್ರೋಕ್ಷಯೇನ್ಮಂಡಪಂ ಗುರುಃ ॥೧೭॥

---

ದ್ವಾರದ ಹೊಸ್ತಿಲಿನಲ್ಲಿ "ಫಟ್" ಎಂಬ ಅಸ್ತ್ರಮಂತ್ರದಿಂದ ಅಸ್ತ್ರದೇವತೆಯನ್ನು ಪೂಜಿಸಿ, ಮಂಡಪಮಧ್ಯದಲ್ಲಿ ಸರ್ವತ್ರ ದೇವೀಮಯವಾಗಿರುವುದೆಂದು ಭಾವಿಸಿ, ಅನಂತರ, ॥೧೩॥

ಆಕಾಶದ ಕಡೆಗೆ ನೋಡುತ್ತಾ, ಅಸ್ತ್ರಮಂತ್ರಜಪದಿಂದ ಸ್ವರ್ಗಸಂಬಂಧವಾದ ವಿಘ್ನಗಳನ್ನೆಲ್ಲವನ್ನೂ ಹಾಗೆಯೇ ಅಂತರಿಕ್ಷಗತಗಳಾದ ವಿಘ್ನಗಳನ್ನೂ, ಹೋಗಲಾಡಿಸಿಕೊಳ್ಳಬೇಕು. ಪಾದಾಘಾತದಿಂದ ಭೂಮಿಸಂಬಂಧವಾದ ವಿಘ್ನಗಳನ್ನೂ ಪರಿಹರಿಸಿಕೊಳ್ಳಬೇಕು. ॥೧೪॥

ಅನಂತರದಲ್ಲಿ ಅಂತಸ್ಥಿತವಿಘ್ನಗಳ ಪರಿಹಾರಕ್ಕೋಸ್ಕರವಾಗಿ ದಾರಿಯನ್ನು ಬಿಟ್ಟು, ದ್ವಾರದ ವಾಮಶಾಖೆಯನ್ನು ಹಿಡಿದುಕೊಂಡು, ಬಲಗಾಲನ್ನು ಮುಂದಿಟ್ಟುಕೊಂಡು ಮಂಡಪವನ್ನು ಪ್ರವೇಶಿಸಿ (ಎಂದರೆ--ಅಂತಸ್ಥಿತ ವಿಘ್ನಗಳೆಲ್ಲವೂ ಹೊರಟು ಹೋಗುತ್ತವೆ. ನಾನು ಒಳಗೆ ಪ್ರವೇಶಿಸುವೆನು. ಎಂದು ಭಾವಿಸಿಕೊಂಡು ಪ್ರವೇಶಿಸಬೇಕು) ಕುಂಭಸ್ಥಾಪನೆಯನ್ನು ಮಾಡಿ ಸಾಮಾನ್ಯಾರ್ಘ್ಯವನ್ನು ಕೊಡಬೇಕು. ॥೧೫॥

ಆ ಅರ್ಘ್ಯಜಲದಿಂದಲೇ, ನೈರುತ್ಯದಿಕ್ಕಿನಲ್ಲಿ ವಾಸ್ತುನಾಥನಾದ ಪದ್ಮಯೋನಿಯನ್ನು ಗಂಧಪುಷ್ಪಾಕ್ಷತಾದಿಗಳಿಂದ ಪೂಜಿಸಬೇಕು. ॥೧೬॥

ಅನಂತರದಲ್ಲಿ ಆ ಅರ್ಘ್ಯೋದಕದಿಂದಲೇ ಪಂಚಗವ್ಯಾದಿಗಳನ್ನು ಮಾಡಿ ತೋರಣಸ್ತಂಭಗಳವರೆಗೂ ಗುರುವು ಪ್ರೋಕ್ಷಣವನ್ನು ಮಾಡಬೇಕು. ॥೧೭॥

**ಸರ್ವಂ ದೇವೀಮಯಂ ಚೇದಂ ಭಾವಯೇನ್ಮನಸಾ ಕಿಲ ।**
**ಮೂಲ ಮಂತ್ರಂ ಜಪನ್ಭಕ್ತ್ಯಾ ಪ್ರೋಕ್ಷಣಂ ಸ್ಯಾಚ್ಛರಾಣುನಾ ॥೧೮॥**

**ಶರಮಂತ್ರಂ ಸಮುಚ್ಚಾರ್ಯ ತಾಡಯೇನ್ಮಂಡಪಕ್ಷಮಾಂ ।**
**ಹುಂ ಮಂತ್ರಂ ತು ಸಮುಚ್ಚಾರ್ಯ ಕುರ್ಯಾದಭ್ಯುಕ್ಷಣಂ ತತಃ ॥೧೯॥**

**ಧೂಪಯೇದಂತರಂ ಧೂಪೈಃ ವಿಕಿರಾನ್ವಿಕಿರೇತ್ತತಃ ।**
**ಮಾರ್ಜಯೇತ್ತಾಂಸ್ತು ಮಾರ್ಜನ್ಯಾ ಕುಶನಿರ್ಮಿತಯಾ ಪುನಃ ॥೨೦॥**

**ಈಶಾನದಿಶಿ ತತ್ಪುಂಜಂ ಕೃತ್ವಾ ಸಂಸ್ಥಾಪಯೇನ್ಮುನೇ ।**
**ಪುಣ್ಯಾಹವಾಚನಂ ಕೃತ್ವಾ ದೀನಾನಾಥಾಂಶ್ಚ ತೋಷಯೇತ್ ॥೨೧॥**

**ವಿಶೇನ್ಮೃದ್ವಾಸನೇ ಪಶ್ಚಾನ್ನಮಸ್ಕೃತ್ಯ ಗುರುಂ ನಿಜಂ ।**
**ಪ್ರಾಙ್ಮುಖೋ ವಿಧಿವದ್ಧ್ಯಾತ್ವಾ ದೇಯಮಂತ್ರಸ್ಯ ದೇವತಾಂ ॥೨೨॥**

---

ಸರ್ವವೂ ದೇವೀಮಯವೆಂದು ಭಾವಿಸಿಕೊಂಡು ಮನಸ್ಸಿನಲ್ಲಿ ಮೂಲ ಮಂತ್ರವನ್ನು ಅತ್ಯಂತ ಭಕ್ತಿಯಿಂದ ಜಪಿಸುತ್ತಾ, ಅಸ್ತ್ರಮಂತ್ರದಿಂದ ಪ್ರೋಕ್ಷಣ ವನ್ನು ಸರ್ವತ್ರಮಾಡಬೇಕು. ॥೧೮॥

ಅಸ್ತ್ರಮಂತ್ರೋಚ್ಚಾರಣ ಮಾಡುತ್ತಾ ಮಂಡಪಭೂಮಿಯನ್ನು ಹೊಡೆಯ ಬೇಕು. "ಹುಂ" ಎಂಬ ಮಂತ್ರವನ್ನು ಉಚ್ಚರಿಸುತ್ತಾ ಶುದ್ಧಿಕಾರ್ಯವನ್ನು ಮಾಡಬೇಕು. ॥೧೯॥

ಅನಂತರ ಧೂಪದೀಪಾದಿಗಳಿಂದ ಅರ್ಚಿಸಿ ಸರ್ವ ವಿಘ್ನನಾಶಕಗಳಾದ (ಜಲ, ಗಂಧ, ಭಸ್ಮ, ದೂರ್ವಾಂಕುರ, ಅಕ್ಷತಾದಿ ಮಿಶ್ರಿತಗಳಾದ) ವಿಕಿರಗಳನ್ನು ಹರಡಿ ಆಮೇಲೆ ಅವುಗಳನ್ನು ಕುಶನಿರ್ಮಿತವಾದ ಮಾರ್ಜನಿಯಿಂದ ಮಾರ್ಜನೆ ಮಾಡಬೇಕು. ॥೨೦॥

ರಾಶಿಮಾಡಿ ಅನಂತರದಲ್ಲಿ ಪುಣ್ಯಾಹಾದಿಗಳನ್ನು ಮಾಡಿ, ದೀನಾನಾಥಾದಿ ಗಳನ್ನು (ಭೋಜನ ಮುಂತಾದುವುಗಳಿಂದ) ಸಂತೋಷಪಡಿಸಬೇಕು. (ಇದು ಗುರು ಗಳು ಆಚರಿಸತಕ್ಕ ನಿಯಮವು. ಶಿಷ್ಯನು ಆಚರಿಸಬೇಕಾದ ನಿಯಮವು ಯಾವು ದೆಂದರೆ,) ॥೨೧॥

ಸ್ನಾನಾಹ್ನಿಕಾದಿ ನಿತ್ಯಕರ್ಮಗಳನ್ನು ಮುಗಿಸಿ ಆಸನಾರೂಢನಾಗಿರುವ ಗುರು ವಿನ ಬಳಿಗೆ ಶಿಷ್ಯನು ಬಂದು ನಮಸ್ಕಾರಮಾಡಿ, ಪ್ರಾಙ್ಮುಖನಾಗಿ ಮೃಣ್ಮಯವಾದ

ಭೂತಶುದ್ಧ್ಯಾದಿಕಂ ಕೃತ್ವಾ ಪೂರ್ವೋಕ್ತೇನೈವ ವರ್ತ್ಮನಾ ।
ಋಷ್ಯಾದಿ ನ್ಯಾಸಕಂ ಕುರ್ಯಾದ್ದೇಯ ಮಂತ್ರಸ್ಯ ವೈ ಮುನೇ ॥೨೩॥

ನ್ಯಸೇನ್ಮುನಿಂ ತು ಶಿರಸಿ ಮುಖೇ ಛಂದಸ್ಸಮೀರಿತಂ ।
ದೇವತಾಂ ಹೃದಯಾಂ ಭೋಜೇ ಗುಹ್ಯೇ ಬೀಜಂ ತು ಪಾದಯೋಃ ॥೨೪॥

ಶಕ್ತಿಂ ವಿನ್ಯಸ್ಯ ಪಶ್ಚಾತ್ತು ತಾಲತ್ರಯರವಾತ್ತತಃ ।
ದಿಗ್ಬಂಧಂ ಕಾರಯೇತ್ಪಶ್ಚಾ ಚ್ಛೋಟಿಕಾಭಿಸ್ತ್ರಿಭಿರ್ನರಃ ॥೨೫॥

ಪ್ರಾಣಾಯಾಮಂ ತತಃ ಕೃತ್ವಾ ಮೂಲಮಂತ್ರಮನುಸ್ಮರ್ರ ।
ಮಾತೃಕಾಂ ವಿನ್ಯಸೇದ್ದೇಹೇ ತತ್ಪ್ರಕಾರಸ್ತಥೋಚ್ಯತೇ ॥೨೬॥

---

(ಮೃದುವಾದ ದರ್ಭಮಯವಾದ) ಆಸನದಲ್ಲಿ ಕುಳಿತು, ಗುರುವಿನಿಂದ ಉಪದೇಶ ಮಾಡಲ್ಪಡತಕ್ಕ ಮಂತ್ರ ದೇವತೆಯನ್ನು ವಿಧಿಪ್ರಕಾರವಾಗಿ ಧ್ಯಾನಮಾಡಿ, ॥೨೨॥

ಹಿಂದೆ ಏಕಾದಶಸ್ಕಂಧದಲ್ಲಿ ಹೇಳಲ್ಪಟ್ಟ ರೀತಿಯಲ್ಲಿ ಭೂತಶುದ್ಧ್ಯಾದಿಗಳನ್ನು ಮಾಡಿ, ಗುರುವಿನಿಂದ ಉಪದೇಶಮಾಡಲ್ಪಡತಕ್ಕ (ದೇಯ) ಮಂತ್ರದ, ಋಷ್ಯಾದಿ ನ್ಯಾಸವನ್ನು ಕ್ರಮವಾಗಿ ಮಾಡಬೇಕು. ॥೨೩॥

ಋಷ್ಯಾದಿ ನ್ಯಾಸಸ್ಥಾನಗಳು ಯಾವುವೆಂದರೆ :—

ಶಿರಸ್ಸಿನಲ್ಲಿ ಋಷಿಯನ್ನೂ, ಮುಖದಲ್ಲಿ ಛಂದಸ್ಸನ್ನೂ, ಹೃದಯಕಮಲದಲ್ಲಿ ದೇವತೆಯನ್ನೂ, ಗುಹ್ಯಪ್ರದೇಶದಲ್ಲಿ ಬೀಜವನ್ನೂ, ॥೨೪॥

ಪಾದಗಳಲ್ಲಿ ಶಕ್ತಿಯನ್ನೂ ವಿನ್ಯಾಸಮಾಡಿ ಅನಂತರ ದಿವ್ಯಂತರೀಕ್ಷ ಭೂಸಂಬಂಧವಾದ ವಿಘ್ನಗಳನ್ನು ಚುಟಿಕೆಯನ್ನು ಹೊಡೆಯುವುದರಿಂದ ಪರಿಹರಿಸಿ ಕೊಂಡು ಅನಂತರ ದಿಗ್ಬಂಧವನ್ನು ಮಾಡಬೇಕು. ॥೨೫॥

ಅನಂತರದಲ್ಲಿ ಪ್ರಾಣಾಯಾಮವನ್ನು ಮಾಡಿ ಮನಸ್ಸಿನಲ್ಲಿ ಮೂಲ ಮಂತ್ರ ವನ್ನು ಜಪಿಸುತ್ತಾ ಮಾತೃಕಾದಿ ದೇವತೆಗಳನ್ನು ದೇಹದಲ್ಲಿ ಆವಾಹನೆಮಾಡಬೇಕು. ಆ ದೇವತಾ ಆವಾಹನಕ್ರಮವು ಈ ರೀತಿ ಹೇಳಲ್ಪಡುತ್ತದೆ. ಏನೆಂದರೆ, ॥೨೬॥

ಓಂ ಅಂನಮ ಇತಿ ಪ್ರೋಚ್ಯ ನ್ಯಸೇಚ್ಛಿರಸಿ ಮಂತ್ರವಿತ್ ।
ಏವಮೇವ ತು ಸರ್ವೇಷು ನ್ಯಸೇತ್ ಸ್ಥಾನೇಷು ವೈ ಮುನೇ ॥೨೭॥

ಮೂಲಮಂತ್ರ ಷಡಂಗಂ ಚ ನ್ಯಸೇದಂಗೇಷು ಸತ್ತಮಃ ।
ಅಂಗುಷ್ಠಾದಿಷ್ವಂಗುಳೀಷು ಹೃದಯಾದಿಷು ಚ ಕ್ರಮಾತ್ ॥೨೮॥

ನಮಃ ಸ್ವಾಹಾ ವಷಡ್ಹುಕ್ತ್ಯೈರ್ಹುಂ ವೌಷಟ್‌ಫಟ್ಪದಾನ್ವಿತೈಃ ।
ಪ್ರಣವಾದಿಯುತೈರ್ಮಂತ್ರೈಃಷ್ಷಡ್ಭಿರೇವಂ ಷಡಂಗಕಂ ॥೨೯॥

ವರ್ಣನ್ಯಾಸಾದಿಕಂ ಪಶ್ಚಾತ್ ಮೂಲಮಂತ್ರಸ್ಯ ಯೋಜಯೇತ್ ।
ಸ್ಥಾನೇಷು ತತ್ತತ್ಕಲ್ಪೋಕ್ತೇಷ್ವಿತಿ ನ್ಯಾಸವಿಧಿಃ ಸ್ಮೃತಃ ॥೩೦॥

---

ಓಂ ಅಂ ನಮಃ, ಓಂ ಆಂ ನಮಃ, ಓಂ ಇಂ ನಮಃ ಇತ್ಯಾದಿ ಪ್ರಕಾರದಿಂದ ಶಿರ ಆದಿ ಸ್ಥಾನಗಳಲ್ಲಿ, ಮಾತೃಕಾಪ್ರಕರಣದಲ್ಲಿ ಪ್ರಸಿದ್ಧವಾದ ರೀತಿಯಿಂದ ದೇವತಾ ಆವಾಹನೆಯನ್ನು ಮಾಡತಕ್ಕದ್ದು. ॥೨೭॥

ತತ್ತತ್ಕಲ್ಪಪ್ರಸಿದ್ಧವಾದ (ದೇಯು) ಮೂಲ ಮಂತ್ರದ ಷಡಂಗನ್ಯಾಸಾದಿಗಳನ್ನು ಆಯಾ ಅಂಗಗಳಲ್ಲಿ ಅಂದರೆ ಅಂಗುಷ್ಠಾದಿ ಅಂಗುಳಿಗಳಲ್ಲಿಯೂ, ಹೃದಯಾದಿ ಸ್ಥಾನಗಳಲ್ಲಿಯೂ, ಕ್ರಮವಾಗಿ ನ್ಯಾಸಮಾಡಬೇಕು. ॥೨೮॥

ಅಂಗುಷ್ಠಾಭ್ಯಾಂ ನಮಃ, ತರ್ಜನೀಭ್ಯಾಂ ನಮಃ, ಮಧ್ಯಮಾಭ್ಯಾಂ ನಮಃ, ಅನಾಮಿಕಾಭ್ಯಾಂ ನಮಃ, ಕನಿಷ್ಠಿಕಾಭ್ಯಾಂ ನಮಃ, ಕರತಲಕರಪೃಷ್ಠಾಭ್ಯಾಂ ನಮಃ ಎಂದು ಅಂಗುಳಿನ್ಯಾಸಗಳನ್ನೂ, (ಓಂ ನಮಃ ಸ್ವಾಹಾ) ಹೃದಯಾಯ ನಮಃ ಓಂ ಶಿರಸೇ ಸ್ವಾಹಾ, ಓಂ ಶಿಖಾಯೈ ವಷಟ್, ಓಂ ಕವಚಾಯಹುಂ, ಓಂ ನೇತ್ರತ್ರಯಾಯವೌಷಟ್, ಓಂ ಅಸ್ತ್ರಾಯ ಫಟ್, ಎಂಬದಾಗಿ ಪ್ರಣವಾದಿ ಮಂತ್ರಗಳಿಂದ ಷಡಂಗನ್ಯಾಸವನ್ನೂ ಮಾಡತಕ್ಕದ್ದು. ॥೨೯॥

ಅನಂತರ ತತ್ತತ್ಕಲ್ಪೋಕ್ತಪ್ರಕಾರದಿಂದ ವರ್ಣನ್ಯಾಸಾದಿಗಳನ್ನು ಮೂಲ ಮಂತ್ರದೊಡನೆ ಯೋಜಿಸಬೇಕು. ಈ ರೀತಿಯಾಗಿ ನ್ಯಾಸವಿಧಿಯು ಹೇಳಲ್ಪಟ್ಟಿತು. (ಅನಂತರ ಮುಂದೆ ಹೇಳಲ್ಪಡುವ ರೀತಿಯಲ್ಲಿ ತನ್ನ ದೇಹದಲ್ಲಿಯೇ ದೇವಿಯ ಆಸನವನ್ನು ಕಲ್ಪಿಸಬೇಕು) ಆಕ್ರಮವು ಹೇಗೆಂದರೆ, ॥೩೦॥

ತತೋ ನಿಜೇ ಶರೀರೇಽಸ್ಮಿಂಶ್ಚಿಂತಯೇದಾಸನಂ ಶುಭಂ ।
ದಕ್ಷಾಂಸೇ ಚ ನ್ಯಸೇದ್ಧರ್ಮಂ ವಾಮಾಂಸೇ ಜ್ಞಾನಮೇವ ಚ ॥೩೧॥

ವಾಮೋರೌ ಚಾಪಿ ವೈರಾಗ್ಯಂ ದಕ್ಷೋರಾವಥ ವಿನ್ಯಸೇತ್ ।
ಐಶ್ವರ್ಯಂ ಮುಖದೇಶೇ ತು ಮುನೇ ಧ್ಯಾಯೇದಧರ್ಮಕಂ ॥೩೨॥

ವಾಮಪಾರ್ಶ್ವೇ ನಾಭಿದೇಶೇ ದಕ್ಷಪಾರ್ಶ್ವೇ ತಥಾ ಪುನಃ ।
ನಞಾದೀಂಶ್ಚಾಪಿ ಜ್ಞಾನಾದೀನ್ ಪೂರ್ವೋಕ್ತಾನೇವ ವಿನ್ಯಸೇತ್॥೩೩॥

ಪಾದಾ ಧರ್ಮಾದಯಃ ಪ್ರೋಕ್ತಾಃ ಪೀಠಸ್ಯ ಮುನಿಸತ್ತಮ ।
ಅಧರ್ಮಾದ್ಯಾಸ್ತು ಗಾತ್ರಾಣಿ ಸ್ಮೃತಾನಿ ಮುನಿಪುಂಗವೈಃ ॥೩೪॥

ಮಧ್ಯೇಽನಂತಂ ಹೃದಿಸ್ಥಾನೇ ನ್ಯಸೇನ್ಮೃದ್ವಾಸನೇ ಸ್ಥಲೇ ।
ಪ್ರಪಂಚಪದ್ಮಂ ವಿಮಲಂ ತಸ್ಮಿನ್ಸೂರ್ಯೇಂದು ಪಾವಕಾನ್ ॥೩೫॥

---

ಅನಂತರದಲ್ಲಿ ಈ ತನ್ನ ಶರೀರದಲ್ಲಿ ಮಂಗಳಕರವಾದ ಆಸನವನ್ನು ಭಾವಿಸಬೇಕು. ದಕ್ಷಿಣಾಂಸದಲ್ಲಿ ಧರ್ಮಾಸನವನ್ನೂ, ವಾಮಾಂಸದಲ್ಲಿ ಜ್ಞಾನಾಸನವನ್ನೂ ನ್ಯಾಸಮಾಡಬೇಕು. ॥೩೧॥

ವಾಮಪಾರ್ಶ್ವದಲ್ಲಿಯೂ, ನಾಭಿದೇಶದಲ್ಲಿಯೂ, ದಕ್ಷಿಣಪಾರ್ಶ್ವದಲ್ಲಿಯೂ, ನಯ್‌ಪೂರ್ವಕವಾದ ಶಬ್ದಗಳು, ಎಂದರೆ, ಅಧರ್ಮಾಯ ನಮಃ, ಅಜ್ಞಾನಾಯ ನಮಃ ಅವೈರಾಗ್ಯಾಯ ನಮಃ, ಅನೈಶ್ವರ್ಯಾಯ ನಮಃ ಇತ್ಯಾದಿಯಾಗಿ ನ್ಯಾಸ ಮಾಡಬೇಕು. ॥೩೩॥

(ಆಸನವು ಕಲ್ಪಿತವಾದ ಅನಂತರ ಪರ್ಯಂಕ ಕಲ್ಪಗಳನ್ನು ವಿವರಿಸುತ್ತಾರೆ.) ಪರ್ಯಂಕಪಾದಗಳು (ಖುರಗಳು), ಧರ್ಮಾದಿಗಳು, ಅಧರ್ಮಾದಿಗಳು ಪರ್ಯಂಕ ಗಾತ್ರಗಳು ಎಂಬುದಾಗಿ ಮುನಿಶ್ರೇಷ್ಠರಿಂದ ಹೇಳಲ್ಪಡುತ್ತವೆ. ॥೩೪॥

ಮಧ್ಯದಲ್ಲಿ, ಹೃದಯಸ್ಥಾನದಲ್ಲಿ ಅನಂತನನ್ನು ಮೃದುತೂಲಿಕಾಸ್ಥಾನದಲ್ಲಿರುವಂತೆಯೂ, ಆ ಅನಂತನಲ್ಲಿ ಪರಿಶುದ್ಧವಾದ ಪ್ರಪಂಚಪದ್ಮವಿರುವಂತೆಯೂ, ಆ ಕಮಲದಲ್ಲಿ ಸೂರ್ಯ, ಚಂದ್ರ, ಅಗ್ನಿಗಳನ್ನು ಮೇಲೆಮೇಲಿನ ಸ್ಥಾನಗಳಲ್ಲಿರುವಂತೆಯೂ, ಭಾವಿಸಬೇಕು. ॥೩೫॥

**ನ್ಯಸೇತ್ಕಲಾಯುತಾನ್ಮಂತ್ರೀ ಸಂಕ್ಷೇಪಾತ್ತಾ ವದಾಮ್ಯಹಂ ।**
**ಸೂರ್ಯಸ್ಯ ದ್ವಾದಶಕಲಾಸ್ತಾ ಇಂದೋಃಷೋಡಶ ಸ್ಮೃತಾಃ ॥೩೬॥**

**ದಶ ವಹ್ನೇಃ ಕಲಾಃ ಪ್ರೋಕ್ತಾಃ ತಾಭಿರ್ಯುಕ್ತಾಂಸ್ತು ತಾರ್ನ್ ಸ್ಮರೇತ್ ।**
**ಸತ್ವಂ ರಜಸ್ತಮಶ್ಚೈವ ನ್ಯಸೇತ್ತೇಷಾಮುಥೋಪರಿ ॥೩೭॥**

**ಆತ್ಮಾನಮಂತರಾತ್ಮಾನಂ ಪರಮಾತ್ಮಾನಮೇವ ಚ ।**
**ಜ್ಞಾನಾತ್ಮಾನಂ ನ್ಯಸೇದ್ವಿದ್ವಾನಿತ್ಥಂ ಪೀಠಸ್ಯ ಕಲ್ಪನಾ ॥೩೮॥**

**ಅಮುಕಾಸನಾಯ ನಮ ಇತಿ ಮಂತ್ರೇಣ ಸಾಧಕಃ ।**
**ಆಸನಂ ಪೂಜಯಿತ್ವಾ ತು ತಸ್ಮಿನ್ ಧ್ಯಾಯೇತ್ಪರಾಂಬಿಕಾಂ ॥೩೯॥**

**ಕಲ್ಪೋಕ್ತವಿಧಿನಾ ಮಂತ್ರೀ ದೇಯಮಂತ್ರಸ್ಯ ದೇವತಾಂ ।**
**ಮಾನಸೈರುಪಚಾರೈಶ್ಚ ಪೂಜಯೇತ್ತಾಂ ಯಥಾವಿಧಿ ॥೪೦॥**

---

ಅವುಗಳನ್ನು ಕಲಾಯುತಗಳನ್ನಾಗಿಯೂ ಭಾವಿಸಬೇಕು. ಆ ಕಲೆಗಳು ಯಾವುವೆಂದರೆ, ಸೂರ್ಯನ ಯಾವ ದ್ವಾದಶಕಲೆಗಳಿವೆಯೋ ಅವೇ ಚಂದ್ರನ ಷೋಡಶಕಲೆಗಳೆಂದೂ ಹೇಳಲ್ಪಟ್ಟಿವೆ. ಅವೇ, ॥೩೬॥

ಅಗ್ನಿಗೆ ದಶಕಲೆಗಳೆಂದೂ ಪರಿಗಣಿಸಲ್ಪಟ್ಟಿವೆ. "ಅಂ ಸೂರ್ಯಮಂಡಲಾಯ ದ್ವಾದಶಕಲಾತ್ಮನೇ ನಮಃ, ಉಂ ಸೋಮಮಂಡಲಾಯ ಷೋಡಶಕಲಾತ್ಮನೇ ನಮಃ ಮಂ ವಹ್ನಿಮಂಡಲಾಯ ದಶಕಲಾತ್ಮನೇ ನಮಃ, ಎಂಬುದಾಗಿ ಪ್ರಯೋಗವಿನ್ಯಾಸ ಮಾಡಬೇಕು." ಅವುಗಳ ಮೇಲೆ "ಸಂ ಸತ್ವಾಯ ನಮಃ, ರಂ ರಜಸೇ ನಮಃ, ತಂ ತಮಸೇ ನಮಃ" ಎಂದು ಪ್ರಯೋಗವಿನ್ಯಾಸಮಾಡಬೇಕು. ॥೩೭॥

ದೇವೀಸ್ಥಾನದಿಂದ ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿ, ಆತ್ಮಾ, ಅಂತರಾತ್ಮಾ, ಪರಮಾತ್ಮಾ, ಜ್ಞಾನಾತ್ಮಾ ಎಂಬುದಾಗಿ ಈ ನಾಲ್ಕನ್ನೂ ತಿಳಿವಳಿಕೆಯುಳ್ಳ (ಜ್ಞಾನಿಯು)ವನು, ವಿನ್ಯಾಸಮಾಡಬೇಕು. ಇದು ಪೀಠಕಲ್ಪನಾಕ್ರಮವು. ॥೩೮॥

ಈ ಆಸನಕ್ಕೆ ಎಂದರೆ ಈ ಆಸನಾಧಿಷ್ಠಿತ ದೇವತೆಗೆ ನಮಸ್ಕಾರವು ಎಂದು ಸಾಧಕನು ಆಸನವನ್ನು ಪೂಜಿಸಿ, ಅನಂತರ ಅದರಲ್ಲಿ ಪರಾಂಬಿಕೆಯನ್ನು (ದುರ್ಗಾಸನಾಯ ನಮಃ, ಗಾಯತ್ರ್ಯಾಸನಾಯ ನಮಃ ಎಂದು ಧ್ಯಾನಮಾಡಬೇಕು. ॥೩೯॥

ಮಂತ್ರವೇತ್ತನು ಉಪದೇಶ (ದೇಯ) ಮಂತ್ರದ ದೇವತೆಯನ್ನು ಕಲ್ಪೋಕ್ತ

ಮುದ್ರಾಃ ಪ್ರದರ್ಶಯೇದ್ವಿದ್ವಾನ್ ಕಲ್ಪೋಕ್ತಾ ಮೋದಕಾರಿತಾಃ ।
ಯಾಭಿರ್ವಿರಚಿತಾಭಿಸ್ತು ಮೋದೋ ದೇವ್ಯಾಸ್ತು ಜಾಯತೇ ॥೪೧॥

॥ ನಾರಾಯಣ ಉವಾಚ ॥

ತತಃ ಸ್ವವಾಮಭಾಗಾಗ್ರೇ ಷಟ್ಕೋಣೋಪರಿವರ್ತುಲಂ ।
ಚತುರಶ್ರಯುತಂ ಸಮ್ಯಙ್ಮಧ್ಯೇ ಮಂಡಲಮಾಲಿಖೇತ್ ॥೪೨॥

ಮಧ್ಯೇತ್ರಿಕೋಣಂ ಸಂಲಿಖ್ಯ ಶಂಖಮುದ್ರಾಂ ಪ್ರದರ್ಶಯೇತ್ ।
ಷಡಂಗಾನಿ ಚ ಷಟ್ಕೋಣೇಷ್ವರ್ಚಯೇತ್ಕುಸುಮಾದಿಭಿಃ ॥೪೩॥

ಅಗ್ನ್ಯಾದಿಷು ತು ಕೋಣೇಷು ಷಡಂಗಾರ್ಚನಮಾಚರೇತ್ ।
ಆಧಾರಪಾತ್ರಮಾದಾಯ ಶಂಖಸ್ಯ ಮುನಿಸತ್ತಮ ॥೪೪॥

---

ವಿಧಿಯಿಂದಲೂ, ಮಾನಸೋಪಚಾರಗಳಿಂದಲೂ ಯಥಾವಿಧಿಯಾದಿ ಪೂಜಿಸಬೇಕು. ॥೪೦॥

ಯಾವವುಗಳನ್ನು ಮಾಡುವುದರಿಂದ ದೇವಿಗೆ ಸಂತೋಷವುಂಟಾಗುತ್ತದೆಯೋ ಅಂತಹ ಕಲ್ಪೋಕ್ತವಾದ ಮುದ್ರೆಗಳನ್ನು ಮಾಡತಕ್ಕದ್ದು. ॥೪೧॥

ಪರಮಾತ್ಮನು ಹೇಳಿದನು.—ತನ್ನ ವಾಮಭಾಗದಲ್ಲಿ, ಮೊದಲು ಷಟ್ಕೋಣವನ್ನು ರಚಿಸಿ, ಅದರ ಮೇಲೆ ವರ್ತುಲಾಕಾರವನ್ನು ರಚಿಸಿ, ಅನಂತರ ಅದರ ಮೇಲೆ ಚತುರಶ್ರಮಂಡಲವನ್ನೂ ಗಂಧದಿಂದ ರಚಿಸಬೇಕು. ॥೪೨॥

ಆ ಷಟ್ಕೋಣದ ಮಧ್ಯದಲ್ಲಿ ತ್ರಿಕೋಣವನ್ನು ಅಧೋಮುಖವಾಗಿ ರಚಿಸಿ, ಶಂಖಮುದ್ರೆಯನ್ನು ಪ್ರದರ್ಶಿಸಿ, ದೇಯಮಂತ್ರದ ಷಡಂಗಗಳನ್ನು ಷಟ್ಕೋಣಗಳಲ್ಲಿ ಗಂಧಪುಷ್ಪಾಕ್ಷತಾದಿಗಳಿಂದ ಅರ್ಚಿಸತಕ್ಕದ್ದು. (ಯಾವ ದಿಕ್ಕಿನಿಂದ ಷಡಂಗಗಳನ್ನು ಪೂಜಿಸಬೇಕೆಂದರೆ) ॥೪೩॥

(ಪೂಜ್ಯಪೂಜಕರ ಮಧ್ಯೆ ಪ್ರಾಚೀದಿಕ್ಕೇಗ್ರಾಹ್ಯವಾಗಿರುವುದರಿಂದ ತದನುಸಾರವಾಗಿ ಅಗ್ನ್ಯಾದಿ ಕಲ್ಪನೆಯನ್ನು ಮಾಡತಕ್ಕದ್ದು.) ಅಗ್ನ್ಯಾದಿ ಕೋಣಗಳಲ್ಲಿ ಷಡಂಗಾರ್ಚನೆಯನ್ನು ಕ್ರಮವಾಗಿ ಮಾಡತಕ್ಕದ್ದು. ಎಲೈ ಋಷಿಶ್ರೇಷ್ಠನೇ, ಶಂಖರೂಪವಾದ ಆಧಾರಪಾತ್ರೆಯನ್ನು ತೆಗೆದುಕೊಂಡು, ॥೪೪॥

ಅಸ್ತ್ರಮಂತ್ರೇಣ ಸಂಪ್ರೋಕ್ಷ್ಯ ಸ್ಥಾಪಯೇತ್ತತ್ರ ಮಂಡಲೇ ।
ಮಂ ವಹ್ನಿ ಮಂಡಲಾಯೋಕ್ತ್ವಾ ತತೋ ದಶಕಲಾತ್ಮನೇ ॥೪೫॥

ಅಮುಕದೇವ್ಯಾ ಅರ್ಘ್ಯಪಾತ್ರಸ್ಥಾನಾಯ ನಮ ಇತ್ಯಪಿ ।
ಮಂತ್ರೋಽಯಮುಕ್ತಃ ಶಂಖಸ್ಯಾಪ್ಯಾಧಾರಸ್ಥಾಪನೇ ಬುಧೈಃ ॥೪೬॥

ಆಧಾರೇ ಪೂರ್ವಮಾರಭ್ಯ ಪ್ರದಕ್ಷಿಣಕ್ರಮೇಣ ತು ।
ದಶವಹ್ನಿಕಲಾಃ ಪೂಜ್ಯಾ ವಹ್ನಿಮಂಡಲಸಂಸ್ಥಿತಾಃ ॥೪೭॥

ತತೋ ವೈ ಮೂಲಮಂತ್ರೇಣ ಪ್ರೋಕ್ಷಿತಂ ಶಂಖಮುತ್ತಮಂ ।
ಸ್ಥಾಪಯೇತ್ತತ್ರ ಚಾಧಾರೇ ಮೂಲಮಂತ್ರಮನುಸ್ಮರನ್ ॥೪೮॥

ಅಂ ಸೂರ್ಯಮಂಡಲಾಯೋಕ್ತ್ವಾ ದ್ವಾದಶಾಂತೇ ಕಲಾತ್ಮನೇ ।
ಅಮುಕದೇವ್ಯರ್ಘ್ಯಪಾತ್ರಾಯ ನಮ ಇತ್ಯುಚ್ಚರೇತ್ತತಃ ॥೪೯॥

---

ಅಸ್ತ್ರಮಂತ್ರದಿಂದ ಪ್ರೋಕ್ಷಣೆಯನ್ನು ಮಾಡಿ, ಅನಂತರ ಅದನ್ನು ಆ ಮಂಡಲದಲ್ಲಿ ಇಡಬೇಕು. " ಮಂ ವಹ್ನಿಮಂಡಲಾಯ ದಶಕಲಾತ್ಮನೇ ದುರ್ಗಾದೇವ್ಯರ್ಘ್ಯಪಾತ್ರಸ್ಥಾನಾಯ ನಮಃ " ಎಂದು ಪೂಜಿಸಬೇಕು. ॥೪೫॥

" ಪೂರ್ವೋಕ್ತದೇವ್ಯಾಃ ಅರ್ಘ್ಯಪಾತ್ರಸ್ಥಾನಾಯ ನಮಃ " ಎಂಬ ಮಂತ್ರವು ಶಂಖಾಧಾರಸ್ಥಾಪನೆಯಲ್ಲಿ ವಿದ್ವಾಂಸರಿಂದ ಹೇಳಲ್ಪಟ್ಟಿದೆ. ॥೪೬॥

ಪೂರ್ವದಿಕ್ಕು ಮೊದಲುಗೊಂಡು ತ್ರಿಪಾದಿಕಾಧಾರದಲ್ಲಿ ಪ್ರದಕ್ಷಿಣಾಕಾರವಾಗಿ ವಹ್ನಿಮಂಡಲಸಂಯುತವಾದ ದಶವಹ್ನಿಕಲೆಗಳು ಪೂಜನೀಯಗಳು. ॥೪೭॥

ದೇಯವಾದ (ಮೂಲ) ಮಂತ್ರದಿಂದ ಪ್ರೋಕ್ಷಿಸಲ್ಪಟ್ಟ ಉತ್ತಮವಾದ ಶಂಖವನ್ನು, ಮೂಲಮಂತ್ರವನ್ನು ಸ್ಮರಣ ಮಾಡುತ್ತಾ ಆ ಆಧಾರದಲ್ಲಿ ಸ್ಥಾಪನೆ ಮಾಡಬೇಕು. ॥೪೮॥

ಅಂ ಸೂರ್ಯಮಂಡಲಾಯ ದ್ವಾದಶಕಲಾತ್ಮನೇ, ದುರ್ಗಾದೇವ್ಯರ್ಘ್ಯಪಾತ್ರಾಯ ನಮಃ ಎಂಬುದಾಗಿ ಮಂತ್ರೋಚ್ಚಾರಣೆಯನ್ನು ಮಾಡಬೇಕು. ॥೪೯॥

**ಶಂ ಶಂಖಾಯ ಪದಂ ಪ್ರೋಚ್ಯ ನಮ ಇತ್ಯೇತದುಚ್ಚರೇತ್ ।**
**ಪ್ರೋಕ್ಷಯೇತ್ತೇನ ತಂ ಶಂಖಂ ತಸ್ಮಿನ್ ದ್ವಾದಶ ಪೂಜಯೇತ್ ॥೫೦॥**

**ಸೂರ್ಯಸ್ಯ ದ್ವಾದಶಕಲಾಸ್ತಪಿನ್ಯಾದ್ಯಾ ಯಥಾಕ್ರಮಂ ।**
**ವಿಲೋಮಮಾತೃಕಾಂ ಪ್ರೋಚ್ಯ ಮೂಲಮಂತ್ರಂ ವಿಲೋಮಕಂ ॥೫೧॥**

**ಜಲೈರಾಪೂರಯೇಚ್ಛಂಖಂ ತತ್ರಚೇಂದೋಃ ಕಲಾಂ ನ್ಯಸೇತ್ ।**
**ಉಂ ಸೋಮಮಂಡಲಾಯೋಕ್ತ್ವಾಂತೇ ಷೋಡಶಕಲಾತ್ಮನೇ ॥೫೨॥**

**ಅಮುಕಾರ್ಘ್ಯಾಮೃತಾಯೇತಿ ಹೃನ್ಮಂತ್ರಾಂತೋ ಮನುಃ ಸ್ಮೃತಃ ।**
**ಪೂಜಯೇನ್ಮನುನಾ ತೇನ ಜಲಂ ತು ಸೃಣಿ ಮುದ್ರಯಾ ॥೫೩॥**

**ತೀರ್ಥಾನ್ಯಾವಾಹ್ಯ ತತ್ರೈವಾಷ್ಟಕೃತ್ವೋ ಜಪೇನ್ಮನುಂ ।**
**ಷಡಂಗಾನಿ ಜಲೇ ನ್ಯಸ್ಯ ಹೃದಾಂಸೇ ಪೂಜಯೇದಪಃ ॥೫೪॥**

---

ಶಂ ಶಂಖಾಯ ಎಂಬ ಪದವನ್ನುಚ್ಚರಿಸಿ, ಅನಂತರ ಶಂಖಾಯ ನಮಃ ಎಂಬುದಾಗಿ ಉಚ್ಚಾರಣೆ ಮಾಡಬೇಕು. ಆಮೇಲೆ ಆ ಜಲದಿಂದ ಶಂಖವನ್ನು ಪ್ರೋಕ್ಷಿಸಿ ಅದರಲ್ಲಿ ದ್ವಾದಶಾತ್ಮನನ್ನು ಪೂಜೆಮಾಡಬೇಕು. ॥೫೦॥

ತಪಿನೀ, ತಾಪಿನೀ, ಧೂಮ್ರಾದಿ ಸೂರ್ಯನ ದ್ವಾದಶಕಲೆಗಳನ್ನು ಯಥಾ ಕ್ರಮವಾಗಿಯೂ, ಮಾತೃಕಾದಿಗಳನ್ನು ವಿಲೋಮಕ್ರಮದಿಂದಲೂ ಹೇಳಿ, ಮೂಲ ಮಂತ್ರವನ್ನು ವಿಲೋಮಕ್ರಮದಿಂದ ಉಚ್ಚಾರ ಮಾಡಿದ ಅನಂತರ, ॥೫೧॥

ಶಂಖವನ್ನು ಜಲದಿಂದ ತುಂಬಿ ಅಲ್ಲಿ ಇಂದು ಕಲೆಗಳನ್ನು ನ್ಯಾಸಮಾಡ ಬೇಕು. "ಉಂ ಸೋಮಮಂಡಲಾಯ ನಮಃ" ಎಂದು ಹೇಳಿ ಕೊನೆಯಲ್ಲಿ ಷೋಡಶಕಲಾತ್ಮನಿಗೆ, ॥೫೨॥

ಹೃನ್ಮಂತ್ರದಿಂದ ಅಮೃತಸ್ವರೂಪನಾದವನಿಗೆ ಅರ್ಘ್ಯವು ಎಂದು ಹೇಳುತ್ತಾ ಜಲವನ್ನು ಅಂಕುಶಮುದ್ರೆಯಿಂದ ಪೂಜಿಸಬೇಕು. ॥೫೩॥

ಅಲ್ಲಿಯೇ ತೀರ್ಥವನ್ನೂ ಆವಾಹನೆಮಾಡಿ, ಮನುವನ್ನು ಎಂಟು ಸಲ ಜಪ ಮಾಡಬೇಕು, ಮತ್ತು ಷಡಂಗಗಳನ್ನು ಜಲದಲ್ಲಿಟ್ಟು ಹೃನ್ಮಂತ್ರದಿಂದ ಜಲವನ್ನು ಪೂಜಿಸಬೇಕು. ॥೫೪॥

ಅಷ್ಟಕೃತ್ವೋ ಜಪೇನ್ಮೂಲಂ ಭಾವಯೇನ್ಮತ್ಸ್ಯಮುದ್ರಯಾ ।
ತತೋ ದಕ್ಷಿಣದಿಗ್ಭಾಗೇ ಶಂಖಸ್ಯ ಪ್ರೋಕ್ಷಣೀಂ ನ್ಯಸೇತ್ ॥೫೫॥

ಶಂಖಾಂಬು ಕಿಂಚಿನ್ನಿಕ್ಷಿಪ್ಯ ಪ್ರೋಕ್ಷಯೇತ್ತೇನ ಸರ್ವತಃ ।
ಪೂಜಾದ್ರವ್ಯಂ ನಿಜಾತ್ಮಾನಂ ವಿಶುದ್ಧಂ ಭಾವಯೇತ್ತತಃ ॥೫೬॥

॥ ನಾರಾಯಣ ಉವಾಚ ॥

ತತಃ ಸ್ವಪುರತೋ ವೇದ್ಯಾಂ ಸರ್ವತೋಭದ್ರಮಂಡಲಂ ।
ಸಂಲಿಖ್ಯ ಕರ್ಣಿಕಾಮಧ್ಯಂ ಪೂರಯೇಚ್ಛಾಲಿ ತಂಡುಲೈಃ ॥೫೭॥

ಆಸ್ತೀರ್ಯದರ್ಭಾಂಸ್ತತ್ರೈವ ನ್ಯಸೇತ್ಕೂರ್ಚಂ ಸಲಕ್ಷಣಂ ।
ಆಧಾರಶಕ್ತಿಮಾರಭ್ಯ ಪೀಠಮನ್ವಂತಮರ್ಚಯೇತ್ ॥೫೮॥

---

ಮೂಲ ಮಂತ್ರವನ್ನು ಎಂಟು ಸಲ ಜಪಿಸಬೇಕು. ಅನಂತರ ಆ ಜಲದ ಮೇಲೆ ಮತ್ಸ್ಯಮುದ್ರೆಯಿಂದ ಮುಚ್ಚಬೇಕು. ಅನಂತರ ದಕ್ಷಿಣದಿಕ್ಕಿನಲ್ಲಿ ಶಂಖದ (ಸಾಮಾನ್ಯಾರ್ಘ್ಯಸ್ಥಾನೀಯವನ್ನು) ಪ್ರೋಕ್ಷಣೆಯನ್ನು ಇಡಬೇಕು. ॥೫೫॥

ಶಂಖೋದಕವನ್ನು ತೆಗೆದುಕೊಂಡು ಅದನ್ನು ಎಲ್ಲಾ ಕಡೆಯೂ ಪ್ರೋಕ್ಷಿಸಬೇಕು. ಅನಂತರ ತನ್ನನ್ನೂ, ಪೂಜಾದ್ರವ್ಯಗಳನ್ನೂ, ಶುದ್ಧವಾದವುಗಳನ್ನಾಗಿ ಭಾವಿಸಬೇಕು. ॥೫೬॥

ಪರಮಾತ್ಮನು ಹೇಳಿದನು.—ಅನಂತರ ತನ್ನ ಎದುರಿಗಿರುವ ವೇದಿಕೆಯಲ್ಲಿ ಸರ್ವತೋಭದ್ರಮಂಡಲವನ್ನು ರಚಿಸಿ ಕರ್ಣಿಕಾಮಧ್ಯವನ್ನು ಮೊದಲು ಭತ್ತದಿಂದಲೂ, ಅನಂತರ ಅಕ್ಕಿಯಿಂದಲೂ ತುಂಬಬೇಕು. ॥೫೭॥

ಅಲ್ಲಿ ದರ್ಭೆಗಳನ್ನು ಹರಡಿ ಇಪ್ಪತ್ತೇಳು ದರ್ಭೆಗಳಿಂದ ಹೆಣೆದಿರುವ ಕೂರ್ಚವನ್ನು ಇಟ್ಟು, ಆಧಾರಶಕ್ತ್ಯೆಯೇ ನಮಃ, ಮೂಲಪ್ರಕೃತ್ಯೈ ನಮಃ, ಶೇಷಾಯ ನಮಃ, ಕ್ಷಮಾಯ್ಯೈ ನಮಃ, ಸುಧಾಸಿಂಧವೇ ನಮಃ, ಇತ್ಯಾದಿ ಪ್ರಕಾರದಿಂದಲೂ, ದುರ್ಗಾದೇವೀಯೋಗಪೀಠಾಯ ನಮಃ ಎಂಬ ಮಂತ್ರದಿಂದಲೂ ಪೂಜಿಸಬೇಕು. ॥೫೮॥

ನಿರ್ವ್ರಣಂ ಕುಂಭಮಾದಾಯಾಪ್ಯಸ್ತ್ರಾದ್ಭಿಃ ಕ್ಷಾಲಿತಾಂತರಂ ।
ತಂತುನಾ ವೇಷ್ಟಯೇತ್ತಂತುತ್ರಿಗುಣೇನಾರುಣೇನ ಚ ॥೫೯॥

ನವರತ್ನೋದರಂ ಕೂರ್ಚಯುತಂ ಗಂಧಾದಿ ಪೂಜಿತಂ ।
ಸ್ಥಾಪಯೇತ್ತತ್ರ ಪೀಠೇ ತು ತಾರಮಂತ್ರೇಣ ದೇಶಿಕಃ॥ ೬೦॥

ಐಕ್ಯಂ ಕುಂಭಸ್ಯ ಪೀಠಸ್ಯ ಭಾವಯೇತ್ಪೂರಯೇತ್ತತಃ ।
ಮಾತೃಕಾಂ ಪ್ರತಿಲೋಮೇನ ಜಪಂಸ್ತೀರ್ಥೋದಕೈರ್ಮುನೇ ॥೬೧॥

ಮೂಲಮಂತ್ರಂ ಚ ಸಂಜಪ್ಯ ಪೂಜಯೇದ್ದೇವತಾ ಧಿಯಾ ।
ಅಶ್ವತ್ಥ ಪನಸಾಮ್ರಾಣಾಂ ಕೋಮಲೈರ್ನವಪಲ್ಲವೈಃ ॥೬೨॥

ಛಾದಯೇತ್ಕುಂಭವದನಂ ಚಷಕಂ ಸಫಲಾಕ್ಷತಂ ।
ಸಂಸ್ಥಾಪಯೇತ ಮತಿಮಾರ್ನ ವಸ್ತ್ರಯುಗ್ಮೇನ ವೇಷ್ಟಯೇತ್ ॥೬೩॥

---

ರಂಧ್ರವಿಲ್ಲದ ಕುಂಭವನ್ನು ಅಸ್ತ್ರಮಂತ್ರದಿಂದ ಒಳಗೆ ಹೊರಗೆ ಎಲ್ಲಾ ಕಡೆಯಲ್ಲಿಯೂ ತೊಳೆದು, ಮೂರು ಎಳೆಗಳಿಂದ ಅಥವಾ ಸತ್ವರಜಸ್ತಮೋಗುಣಗಳಿಂದ ಕೂಡಿದ ಕೆಂಪುಬಣ್ಣದ ದಾರದಿಂದ ಸುತ್ತಬೇಕು. ॥೫೯॥

ನವರತ್ನಗಳಿಂದಲೂ, ಕೂರ್ಚದಿಂದಲೂ, ಕೂಡಿ ಗಂಧಾದಿಗಳಿಂದ ಪೂಜಿಸಲ್ಪಟ್ಟ ಕುಂಭವನ್ನು ಆಚಾರ್ಯನು ಪ್ರಣವೋಚ್ಚಾರಣದಿಂದ ಆ ಪೀಠದಲ್ಲಿ ಸ್ಥಾಪನೆ ಮಾಡಬೇಕು. ॥೬೦॥

ಅಲ್ಲಿ ಪೀಠಕ್ಕೂ, ಕುಂಭಕ್ಕೂ ಐಕ್ಯವನ್ನು ಭಾವಿಸಿ, ಅನಂತರದಲ್ಲಿ "ಕ್ಷಕಾರ" ಮೊದಲುಗೊಂಡು "ಅಕಾರ" ಪರ್ಯಂತವಾಗಿ ಮಾತೃಕಾಮಂತ್ರವನ್ನು ಉಚ್ಚರಿಸುತ್ತಾ ತೀರ್ಥೋದಕದಿಂದ ಕುಂಭವನ್ನು ಪೂರಣಮಾಡ (ತುಂಬ) ಬೇಕು. ॥೬೧॥

ಮೂಲಮಂತ್ರವನ್ನು ಜಪಿಸುತ್ತಾ, ದೇವತಾಬುದ್ಧಿಯಿಂದ ಅಶ್ವತ್ಥ, ಹಲಸು, ಮಾವು ಇವುಗಳ ಹೊಸ ಚಿಗುರುಗಳನ್ನು ಕುಂಭಕ್ಕೆ ಹಾಕಬೇಕು. ॥೬೨॥

ಫಲಾಕ್ಷತಾದಿಗಳಿಂದ ಕುಂಭದ ಬಾಯಿಯನ್ನು ಮುಚ್ಚಿ, ಕೆಂಪುವಸ್ತ್ರಯುಗ್ಮದಿಂದ ಸುತ್ತಿ (ಹೊದಿಸಿ) ಇಡಬೇಕು. ॥೬೩॥

**ಪ್ರಾಣಸ್ಥಾಪನ ಮಂತ್ರೇಣ ಪ್ರಾಣಸ್ಥಾಪನಮಾಚರೇತ್ ।**
**ಆವಾಹನಾದಿಮುದ್ರಾಭಿಃ ಮೋದಯೇದ್ದೇವತಾಂ ಪರಾಂ ॥೬೪॥**

**ಧ್ಯಾಯೇತ್ತಾಂ ಪರಮೇಶಾನೀಂ ಕಲ್ಪೋಕ್ತೇನ ಪ್ರಕಾರತಃ ।**
**ಸ್ವಾಗತಂ ಕುಶಲಪ್ರಶ್ನಂ ದೇವ್ಯಾ ಅಗ್ರೇ ಸಮುಚ್ಚರೇತ್ ॥೬೫॥**

**ಪಾದ್ಯಂ ದದ್ಯಾತ್ತತೋಽಸ್ಯರ್ಘ್ಯಂ ತತಶ್ಚಾಮನೀಯಕಂ ।**
**ಮಧುಪರ್ಕಂ ಚ ಸಾಭ್ಯಂಗಂ ದೇವ್ಯೈಸ್ನಾನಂ ನಿವೇದಯೇತ್ ॥೬೬॥**

**ವಾಸಸೀ ಚ ತತೋ ದದ್ಯಾದ್ರಕ್ತೇ ಕ್ಷೌಮೇ ಸುನಿರ್ಮಲೇ ।**
**ನಾನಾ ಮಣಿಗಣಾಕೀರ್ಣಾನಾಕಲ್ಪಾನ್ಕಲ್ಪಯೇತ್ತತಃ ॥೬೭॥**

**ಮನುನಾ ಪುಟಿತೈರ್ವರ್ಣೈರ್ಮಾತೃಕಾಯಾ ವಿಧಾನತಃ ।**
**ದೇವ್ಯಾ ಅಂಗೇಷು ವಿನ್ಯಸ್ಯ ಚಂದನಾದ್ಯೈಸ್ಸಮರ್ಚಯೇತ್ ॥೬೮॥**

---

ಪ್ರಾಣಪ್ರತಿಷ್ಠಾಪನಾಮಂತ್ರದಿಂದ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿ, ಪರಮೋತ್ಕೃಷ್ಟಳಾದ ದೇವತೆಯನ್ನು ಆವಾಹನಾದಿ ಷೋಡಶೋಪಚಾರಗಳಿಂದ ಪೂಜಿಸಿ ಸಂತೋಷಪಡಿಸಬೇಕು. ||೬೪||

ಕಲ್ಪೋಕ್ತವಿಧಾನದಿಂದ ಪರಮೇಶ್ವರಿಯನ್ನು ಧ್ಯಾನಿಸುತ್ತಾ (ಪೂಜಾದಿಗಳನ್ನು ಮಾಡಿ), ಅನಂತರ ಸ್ವಾಗತ, ಕುಶಲಪ್ರಶ್ನಾದಿಗಳನ್ನು ದೇವಿಯ ಎದುರಿಗೆ ಪಠಿಸಬೇಕು. ||೬೫||

ಪಾದ್ಯ, ಅರ್ಘ್ಯ, ಆಚಮನೀಯಾದಿಗಳನ್ನು ಕೊಟ್ಟ ಅನಂತರ, ಮಧುಪರ್ಕವನ್ನೂ, ಅಭ್ಯಂಗನಸ್ನಾನವನ್ನೂ ಮಾಡಿಸಿದಂತೆ ದೇವಿಗೆ ನಿವೇದಿಸಬೇಕು. ||೬೬||

ರಕ್ತ ಮತ್ತು ಶುಕ್ಲವರ್ಣದ ಎರಡು ವಸ್ತ್ರಗಳನ್ನು ಧಾರಣಮಾಡಿಸಿ, ಅನಂತರ ಕಲ್ಪಾಂತದವರೆಗೂ ನಾಶಹೊಂದದ ನಾನಾ ಒಡವೆಗಳನ್ನೂ ತೊಡಿಸಬೇಕು.||೬೭||

ಹ್ರೀಂ, ಮಂ, ಹ್ರೀಂ, ಮಾಂ ಹ್ರೀಂ, ಇಂ ಇತ್ಯಾದಿ ಪ್ರಕಾರದಿಂದ, ದೇಯ ಮಂತ್ರದಿಂದ ಪುಟಿತಗಳಾದ ಮಾತೃಕಾಕ್ಷರಗಳಿಂದ, ದೇವತೆಯ ಅಂಗಗಳಲ್ಲಿ ಮಾತೃಕಾಕ್ಷರನ್ಯಾಸಸ್ಥಾನಗಳಾದ ಶಿರಃಪ್ರಭೃತಿಗಳಲ್ಲಿ ಗಂಧಪುಷ್ಪಾಕ್ಷತಾದಿಗಳಿಂದ ಪೂಜಿಸಬೇಕು. ||೬೮||

ಗಂಧಃ ಕಾಲಾಗರುಭವಃ ಕರ್ಪೂರೇಣ ಸಮನ್ವಿತಃ ।
ಕಾಶ್ಮೀರಂ ಚಂದನಂ ಚಾಪಿ ಕಸ್ತೂರೀ ಸಹಿತಂ ಮುನೇ ॥೬೯॥

ಕುಂದಪುಷ್ಪಾದಿ ಪುಷ್ಪಾಣಿ ಪರದೇವ್ಯೈ ಸಮರ್ಪಯೇತ್ ।
ಧೂಪೋಽಗರು ಪುರುವ್ರಾತೋಶೀರಚಂದನಶರ್ಕರಾಃ ॥೭೦॥

ಮಧುಮಿಶ್ರಾಃ ಸ್ಮೃತಾ ದೇವ್ಯಾಃ ಪ್ರಿಯಾ ಧೂಪಾತ್ಮನಾ ಸಹ ।
ದೀಪಾನನೇಕಾ ದತ್ವಾಽಥ ನೈವೇದ್ಯಂ ದರ್ಶಯೇತ್ಸುಧೀಃ ॥೭೧॥

ಪ್ರತಿದ್ರವ್ಯಂ ಜಲಂ ದದ್ಯಾತ್ಪ್ರೋಕ್ಷಣೀಸ್ಥಂ ನ ಚಾನ್ಯಥಾ ।
ತತಃ ಕುರ್ಯಾದಂಗ ಪೂಜಾಂ ಕಲೋಕ್ತಾವರಣಾನಿ ಚ ॥೭೨॥

ಸಾಂಗಾಂ ದೇವೀಮುಥಾಭ್ಯರ್ಚ್ಯ ವೈಶ್ವದೇವಂ ತತಶ್ಚರೇತ್ ।
ದಕ್ಷಿಣೇ ಸ್ಥಂಡಿಲಂ ಕೃತ್ವಾ ತತ್ರಾಧಾಯ ಹುತಾಶನಂ ॥೭೩॥

---

ಕಾಲಾಗರುಸಮುದ್ಭೂತವಾದ, ಕರ್ಪೂರದಿಂದ ಮಿಶ್ರಿತವಾದ, ಕಾಶ್ಮೀರದೇಶ ಜಾತವಾದ ಕಸ್ತೂರೀಸಹಿತವಾದ ಗಂಧವನ್ನು ದೇವಿಗೆ ಅರ್ಪಿಸಬೇಕು. ॥೬೯॥

ಕುಂದ (ಮಲ್ಲಿಗೆ) ಪುಷ್ಪವೇ ಮೊದಲಾದ ನಾನಾವಿಧ ಪುಷ್ಪಗಳನ್ನು ದೇವಿಗೆ ಸಮರ್ಪಣೆಮಾಡಬೇಕು. ಅಗರು, ಗುಗ್ಗುಲ, ಉಶೀರ, ಚಂದನಾದಿಗಳನ್ನು ಚೂರ್ಣ ಮಾಡಿ, ಅದನ್ನು ಶರ್ಕರಾ ಮಧುಗಳಿಂದ ಮಿಶ್ರಮಾಡಿ, ಅದನ್ನು ಗುಳಿಗೆಗಳಾಗಿ ಮಾಡಿ, ಅದನ್ನು ದೇವಿಗೆ ಧೂಪವನ್ನಾಗಿ ಉಪಯೋಗಿಸಬೇಕು. (ಇದೇ ದೇವಿಗೆ ಅತ್ಯಂತ ಪ್ರಿಯಕರವಾದ ಧೂಪವು) ಅನಂತರ ಅನೇಕ ವಿಧವಾದ ದೀಪಗಳನ್ನು ಆರತಿ (ಮಾಡಿ) ಎತ್ತಿ, ನೈವೇದ್ಯವನ್ನೂ ಮಾಡಬೇಕು. ॥೭೦-೭೧॥

ಧೂಪದೀಪಾದಿಗಳನ್ನು ಮಾಡುವಾಗ ಪ್ರತಿಯೊಂದಕ್ಕೂ ಬೇರೆ ಬೇರೆ ಅರ್ಘ್ಯ ಜಲವನ್ನು ಸಾಮಾನ್ಯಾರ್ಘ್ಯಪಾತ್ರಸ್ಥ ಜಲದಿಂದ ಕೊಡಬೇಕು. ಅನಂತರದಲ್ಲಿ ದೇವತೆಗೆ ಷಡಂಗಪೂಜೆಯನ್ನೂ, ಕಲ್ಪೋಕ್ತ ಆವರಣಪೂಜಾದಿಗಳನ್ನೂ ಮಾಡ ಬೇಕು. ॥೭೨॥

ಈರೀತಿ ದೇವಿಯನ್ನು ಸಾಂಗವಾಗಿ ಪೂಜಿಸಿ, ಅನಂತರ ವೈಶ್ವದೇವವನ್ನು ಮಾಡಬೇಕು. ದಕ್ಷಿಣದಿಕ್ಕಿನಲ್ಲಿ ಸ್ಥಂಡಿಲವನ್ನು ಮಾಡಿ ಅಲ್ಲಿ ಅಗ್ನಿಪ್ರತಿಷ್ಠಾಪನೆ ಯನ್ನು ಮಾಡಬೇಕು. ॥೭೩॥

ಮೂರ್ತಿಸ್ಥಾಂ ದೇವತಾಂ ತತ್ರಾಽವಾಹ್ಯ ಸಂಪೂಜ್ಯ ಚ ಕ್ರಮಾತ್ ।
ತಾರವ್ಯಾಹೃತಿಭಿರ್ಹುತ್ವಾ ಮೂಲಮಂತ್ರೇಣ ವೈ ತತಃ ॥೭೪॥

ಪಂಚವಿಂಶತಿವಾರಂ ತು ಪಾಯಸೇನ ಸಸರ್ಪಿಷಾ ।
ಹುನೇತ್ಪಶ್ಚಾದ್ವ್ಯಾಹೃತಿಭಿಃ ಪುನಶ್ಚ ಜುಹುಯಾನ್ಮುನೇ ॥೭೫॥

ಗಂಧಾದ್ಯೈರರ್ಚಯಿತ್ವಾ ಚ ದೇವೀಂ ಪೀಠೇ ತು ಯೋಜಯೇತ್ ।
ವಹ್ನಿಂ ವಿಸೃಜ್ಯ ಹವಿಷಾ ಪರಿತೋ ವಿಕಿರೇದ್ಬಲಿಂ ॥೭೬॥

ದೇವತಾಯಾಃ ಪಾರ್ಷದೇಭ್ಯೋ ಗಂಧಪುಷ್ಪಾದಿ ಸಂಯುತಾನ್ ।
ಪಂಚೋಪಚಾರಾನ್ ದತ್ವಾಽಥ ತಾಂಬೂಲಂ ಛತ್ರಚಾಮರೇ ॥೭೭॥

ದದ್ಯಾದ್ದೇವ್ಯೈ ತತೋ ಮಂತ್ರಂ ಸಹಸ್ರಾವೃತ್ತಿತೋ ಜಪೇತ್ ।
ಜಪಂ ಸಮರ್ಪ್ಯ ಚೈಶಾನ್ಯಾಂ ವಿಕಿರೇ ದ್ವಿಶಿ ಸಂಸ್ಥಿತೇ ॥೭೮॥

---

ಕಲಶದಲ್ಲಿ ಆವಾಹಿತವಾದ ದೇವತೆಯನ್ನು ಕ್ರಮವಾಗಿ ಪೂಜಿಸಿ, ಓಂಸ್ವಾಹಾ ಭೂಃಸ್ವಾಹಾ ಎಂಬ ಪ್ರಕಾರದಿಂದ ಮೊದಲು ಹೋಮ ಮಾಡಿ, ಅನಂತರ ಇಪ್ಪತ್ತೈದು ಸಲ ದೇಯ ಮಂತ್ರದಿಂದ ಹೋಮಮಾಡಿ, ಮತ್ತೆ ಮೊದಲಿನಂತೆ ತಾರವ್ಯಾಹೃತಿಗಳಿಂದ (ಓಂಸ್ವಾಹಾ, ಭೂಃಸ್ವಾಹಾ ಎಂಬ ರೀತಿಯಿಂದ) ಹೋಮ ಮಾಡಬೇಕು. ॥೭೪॥

ಕ್ಷೀರಮಿಶ್ರವಾದ ಪಾಯಸದಿಂದ ಇಪ್ಪತ್ತೈದು ಸಲ ಹೋಮಮಾಡಿ ಮತ್ತೆ ವ್ಯಾಹೃತಿಗಳಿಂದ ಹೋಮ ಮಾಡಬೇಕು. ॥೭೫॥

ಗಂಧಾದಿಗಳಿಂದ ದೇವಿಯನ್ನು ಅರ್ಚಿಸಿ, ಅನಂತರ ಪೀಠದಲ್ಲಿ ಇಡಬೇಕು. ಅನಂತರ ವಹ್ನಿಯನ್ನು ವಿಸರ್ಜನೆಮಾಡಿ, ಅವಶಿಷ್ಟಪಾಯಸದಿಂದ ಬಲಿಯನ್ನು ಕೊಡಬೇಕು. ॥೭೬॥

ದೇವಿಯ ಅನುಚರರಾದ ಇತರ ದೇವತೆಗಳನ್ನು ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಾದಿಗಳಿಂದ ತೃಪ್ತಿಪಡಿಸಿ, ಛತ್ರಚಾಮರಾದಿ ಪೂಜೆಗಳನ್ನೂ ಮಾಡಬೇಕು. ॥೭೭॥

ಅನಂತರದಲ್ಲಿ ಮಂತ್ರವನ್ನು ಸಹಸ್ರ ಆವೃತ್ತಿ ಜಪಮಾಡಬೇಕು. ಜಪವನ್ನು ಸಮರ್ಪಿಸಿದ ಅನಂತರ ಮೊದಲು ವಿಕಿರವನ್ನು ಹಾಕಿದ್ದ ಈಶಾನ್ಯದಿಕ್ಕಿನಲ್ಲಿ, ॥೭೮॥

ಕರ್ಕರೀಂ ಸ್ಥಾಪಯೇತ್ತಸ್ಯಾಂ ದುರ್ಗಾಮಾವಾಹ್ಯ ಪೂಜಯೇತ್ ।
ರಕ್ಷರಕ್ಷೇತಿ ಚೋಚ್ಚಾರ್ಯ ನಾಲಮುಕ್ತೇನ ವಾರಿಣಾ ॥೭೯॥

ಅಸ್ತ್ರಮಂತ್ರಂ ಜಪನ್ ದೇಶಂ ಸೇಚಯೇತ್ತು ಪ್ರದಕ್ಷಿಣಂ ।
ಕರ್ಕರೀಂ ಸ್ಥಾಪಯೇತ್ ಸ್ಥಾನೇ ಪೂಜಯೇಚ್ಚಾಸ್ತ್ರದೇವತಾಂ ॥೮೦॥

ಪಶ್ಚಾದ್ಗುರುಸ್ತು ಶಿಷ್ಯೇಣ ಸಹಭುಂಜೀತ ವಾಗ್ಯತಃ ।
ತಸ್ಯಾಂ ರಾತ್ರೌ ತು ತದ್ವೇದ್ಯಾಂ ನಿದ್ರಾಂ ಕುರ್ಯಾತ್ಪ್ರಯತ್ನತಃ ॥೮೧॥

॥ ನಾರಾಯಣ ಉವಾಚ ॥

ತತಃ ಕುಂಡಸ್ಯ ಸಂಸ್ಕಾರಂ ಸ್ಥಂಡಿಲಸ್ಯ ಚ ವಾ ಮುನೇ ।
ಪ್ರವಕ್ಷ್ಯಾಮಿ ಸಮಾಸೇನ ಯಥಾವಿಧಿ ವಿಧಾನತಃ ॥೮೨॥

ಮೂಲಮಂತ್ರಂ ಸಮುಚ್ಚಾರ್ಯ ವೀಕ್ಷಯೇದಸ್ತ್ರಮಂತ್ರತಃ ।
ಪ್ರೋಕ್ಷಯೇತ್ತಾಡನಂ ಕುರ್ಯಾತ್ತೇನೈವ ಕವಚೇನ ತು ॥೮೩॥

---

ಕುಂಭವನ್ನು ಸ್ಥಾಪಿಸಿ, ಅದರಲ್ಲಿ ದುರ್ಗಾದೇವಿಯನ್ನು ಆವಾಹನೆಮಾಡಿ ರಕ್ಷಿಸು, ರಕ್ಷಿಸು, ಎಂಬುದಾಗಿ ಪ್ರಾರ್ಥಿಸಿ, ॥೭೯॥

ಅಸ್ತ್ರಮಂತ್ರವನ್ನು ಜಪಿಸುತ್ತಾ ಜಲಸೇಚನಪೂರ್ವಕವಾಗಿ ಪ್ರದಕ್ಷಿಣೆಯನ್ನು ಮಾಡಿ, ಕಲಶವನ್ನು ಸ್ಥಾಪಿಸಿದ ಸ್ಥಾನದಲ್ಲಿ ಅಸ್ತ್ರದೇವತೆಯನ್ನು ಪೂಜಿಸಬೇಕು. ॥೮೦॥

ಅನಂತರದಲ್ಲಿ ಗುರುವು ಶಿಷ್ಯನೊಡನೆ ಸಂತೋಷದಿಂದ ಭೋಜನಮಾಡ ಬೇಕು, ಮತ್ತು ಆ ಮಂಡಪದಲ್ಲಿಯೇ ನಿದ್ರೆಯನ್ನೂ ಸಹ ಮಾಡಬೇಕು. (ಇದೇ ಅಧಿವಾಸನ ಪ್ರಕಾರವು) ಅಥವಾ ಸದ್ಯೋಧಿವಾಸನವನ್ನಾದರೂ ಮಾಡಬೇಕು.॥೮೧॥

ಪರಮಾತ್ಮನು ಹೇಳಿದನು – (ಅಧಿವಾಸಾನಂತರ ಅಗ್ನಿಮುಖಪ್ರಕಾರವನ್ನು ಹೇಳುತ್ತಾನೆ.) ಅನಂತರ ನವ (ಕುಂಡದ) ಕುಂಭದ ಸಂಸ್ಕಾರವನ್ನು, ಅಥವಾ ಸ್ಥಂಡಿಲ (ಅಗ್ನಿಮುಖ) ಕ್ರಮವನ್ನು ವಿಧಿಪ್ರಕಾರವಾಗಿ ವಿವರಿಸುತ್ತೇನೆ. ॥೮೨॥

ಮೂಲ ಮಂತ್ರವನ್ನು ಉಚ್ಚರಿಸುತ್ತಾ ಕುಂಡವನ್ನು ವೀಕ್ಷಿಸಬೇಕು. ಅದೇ ಪೂರ್ವೋಕ್ತವಾದ ಅಸ್ತ್ರಮಂತ್ರದಿಂದ ಪ್ರೋಕ್ಷಣವನ್ನು ದೃಢೀಕರಿಸುವುದಕ್ಕಾಗಿ

ಅಭ್ಯುಕ್ಷಣಂ ಸಮುದ್ದಿಷ್ಟಂ ತಿಸ್ರಸ್ತಿಸ್ರಸ್ತತಃ ಪರಂ ।
ಪ್ರಾಗಗ್ರಾ ಉದಗಗ್ರಾಶ್ಚ ಲಿಖೇಲ್ಲೇಖಾಸ್ಸಮಂತತಃ ॥೮೪॥

ಪ್ರಣವೇನ ಸಮುಭ್ಯುಕ್ಷ್ಯ ಪೀಠಂ ದೇವ್ಯಾಸ್ಸಮರ್ಚಯೇತ್ ।
ಆಧಾರಶಕ್ತಿಮಾರಭ್ಯ ಪೀಠಮಂತ್ರಾವಸಾನಕಂ ॥೮೫॥

ತಸ್ಮಿನ್ಪೀಠೇ ಸಮಾವಾಹ್ಯ ಶಿವೌ ಪರಮಕಾರಣೌ ।
ಗಂಧಾದ್ಯೈರುಪಚಾರೈಶ್ಚ ಪೂಜಯೇತ್ತೌ ಸಮಾಹಿತಃ ॥೮೬॥

ದೇವೀಂ ಧ್ಯಾಯೇದೃತುಸ್ನಾತಾಂ ಸಂಸಕ್ತಾಂ ಶಂಕರೇಣ ತು ।
ಕಾಮಾತುರಾಂ ತಯೋಃಕ್ರೀಡಾಂ ಕಿಂಚಿತ್ಕಾಲಂ ವಿಭಾವಯೇತ್ ॥೮೭॥

ಅಥ ವಹ್ನಿಂ ಸಮಾದಾಯ ಪಾತ್ರೇಣ ಪುರತೋ ನ್ಯಸೇತ್ ।
ಕ್ರವ್ಯಾದಾಂಶಂ ಪರಿತ್ಯಜ್ಯ ಪೂರ್ವೋಕ್ತೈರ್ವೀಕ್ಷಣಾದಿಭಿಃ ॥೮೮॥

---

"ಹುಂ" ಎಂಬ ಮಂತ್ರದಿಂದ ಸಮಿಧಾದಿಗಳಿಂದ ತಾಡನವನ್ನು ಮಾಡಬೇಕು. ॥೮೩॥

ಅಭ್ಯುಕ್ಷಣವನ್ನು ಮಾಡಬೇಕು. ಅನಂತರ ಪ್ರಾಗಗ್ರಗಳಾದ ಅಥವಾ ಉದಗಗ್ರಗಳಾದ ಮೂರು ರೇಖೆಗಳನ್ನು ಸುತ್ತಲೂ ಸಮಿಧಾದಿಗಳಿಂದ ಎಳೆಯಬೇಕು. ॥೮೪॥

ಆಧಾರಶಕ್ತ್ಯೈ ನಮಃ ಎಂಬುದರ ಮೊದಲುಗೊಂಡು ಈ ದೇವಿಯ ಯೋಗಪೀಠಾಯ ನಮಃ ಎಂಬುದರವರೆಗೆ ಪ್ರಣವಸಹಿತವಾಗಿ ಪೀಠವನ್ನು ಕುಂಡದಲ್ಲಿ ಪೂಜಿಸಬೇಕು. ॥೮೫॥

ಆ ಪೀಠದಲ್ಲಿ ಪರಮಕಾರಣಕರ್ತರಾದ ಪಾರ್ವತೀಪರಮೇಶ್ವರರನ್ನು ಆವಾಹನೆಮಾಡಿ ಸಮಾಹಿತಚಿತ್ತದಿಂದ ಗಂಧಾದಿ ಉಪಚಾರಗಳಿಂದ ಪೂಜಿಸಬೇಕು. ॥೮೬॥

ಋತುಸ್ನಾತಳಾಗಿಯೂ, ಈಶ್ವರನೊಡನೆ ಕೂಡಿದವಳಾಗಿಯೂ, ಕಾಮಾತುರಳಾಗಿಯೂ ಇರುವ ದೇವಿಯನ್ನೂ, ಮತ್ತು ಆ ಪಾರ್ವತೀಪರಮೇಶ್ವರರ ರತಿ (ಕ್ರೀಡೆ) ಯನ್ನೂ ಕೆಲವು ಕಾಲ ಮನಸ್ಸಿನಲ್ಲಿಯೇ ಧ್ಯಾನಮಾಡಬೇಕು. ॥೮೭॥

ಅನಂತರ ಪಾತ್ರೆಯಿಂದ ಅಗ್ನಿಯನ್ನು ತೆಗೆದುಕೊಂಡು ಬಂದು ಎದುರಿಗೆ

ಸಂಸ್ಕೃತ್ಯ ವಹ್ನಿಂ ರಂಬೀಜಮುಚ್ಚಾರ್ಯ ತದನಂತರಂ ।
ಚೈತನ್ಯಂ ಯೋಜಯೇತ್ತಸ್ಮಿನ್ಪ್ರಣವೇನಾಭಿ ಮಂತ್ರಯೇತ್ ॥೮೯॥

ಸಪ್ತವಾರಂ ತತೋ ಧೇನುಮುದ್ರಾಂ ಸಂದರ್ಶಯೇದ್ಗುರುಃ ।
ಶರೇಣ ರಕ್ಷಿತಂ ಕೃತ್ವಾ ತನುತ್ರೇಣಾವಗುಂಠಯೇತ್ ॥೯೦॥

ಅರ್ಚಿತಂ ತ್ರಿಃ ಪರಿಭ್ರಾಮ್ಯ ಪ್ರಾದಕ್ಷಿಣ್ಯೇನ ಸತ್ತಮಃ ।
ಕುಂಡೋಪರಿ ಜಪಂಸ್ತಾರಂ ಜಾನುಸ್ಪೃಷ್ಟ ಮಹೀತಲಃ ॥೯೧॥

ಶಿವಬೀಜಧಿಯಾ ದೇವ್ಯಾ ಯೋನೌ ವಹ್ನಿಂ ವಿನಿಕ್ಷಿಪೇತ್ ।
ಆಚಾಮಯೇತ್ತತೋ ದೇವಂ ದೇವೀಂ ಚ ಜಗದಂಬಿಕಾಂ ॥೯೨॥

ಚಿತ್ಪಿಂಗಲ ಹನದಹಪಚಯುಗ್ಮಂ ತತಃ ಪರಂ ।
ಸರ್ವಜ್ಞಾಜ್ಞಾಪಯ ಸ್ವಾಹಾ ಮಂತ್ರೋಽಯಂ ವಹ್ನಿದೀಪನೇ॥೯೩॥

---

ಇಡಬೇಕು. ರಾಕ್ಷಸ ಭಾಗವನ್ನು ಬಿಟ್ಟು, ಹಿಂದೆಯೇ ಹೇಳಲ್ಪಟ್ಟ ವೀಕ್ಷಣಾದಿಗಳಿಂದ, ||೮೮||

ಅಗ್ನಿಸಂಸ್ಕಾರವನ್ನು ಮಾಡಿ, "ರಂ" ಎಂಬ ಬೀಜಮಂತ್ರವನ್ನುಚ್ಚರಿಸಿ, ಪ್ರಣವದಿಂದ ಅಭಿಮಂತ್ರಿಸಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಬೇಕು. ||೮೯||

ಗುರುವು ಏಳುಸಲ ಪ್ರಣವದಿಂದ ಅಭಿಮಂತ್ರಿಸಿ, ಶರಮಂತ್ರದಿಂದ ರಕ್ಷಣೆಯನ್ನು ಮಾಡಿ "ಹುಂ" ಎಂಬ ಮಂತ್ರದಿಂದ ಅವಗುಂಠನಮಾಡ (ಮುಚ್ಚ) ಬೇಕು. ||೯೦||

ಗಂಧಾದಿಗಳಿಂದ ಪೂಜಿಸಲ್ಪಟ್ಟ ಅಗ್ನಿಯನ್ನು ಕುಂಡದ ಮೇಲೆ ಮೂರು ಸಲ ಪರಿಭ್ರಮಣ (ಪ್ರದಕ್ಷಿಣೆ) ಮಾಡಿಸಿ, ನೆಲದಮೇಲೆ ಮೊಣಕಾಲನ್ನೂರಿ ತಾರ ಮಂತ್ರವನ್ನು ಜಪಿಸುತ್ತಾ, ||೯೧||

ಶಿವನ ವೀರ್ಯವೆಂಬ ಬುದ್ಧಿಯಿಂದ ದೇವಿಯ ಯೋನಿಯಲ್ಲಿ ವಹ್ನಿಯನ್ನು ನಿಕ್ಷೇಪಿಸಬೇಕು. ಅನಂತರವಲ್ಲಿ ದೇವನಿಗೂ, ದೇವಿಗೂ ಆಚಮನವನ್ನು ಮಾಡಿಸಬೇಕು. ||೯೨||

ಹನಹನ, ದಹದಹ, ಪಚಪಚ, ಎಂಬುದಾಗಿ ಉಚ್ಚರಿಸುತ್ತಾ, ಸರ್ವಜ್ಞ ಆಜ್ಞಾಪಯ ಸ್ವಾಹಾ ಎಂದು ಹೇಳುತ್ತಾ ಅಗ್ನಿಯನ್ನು ಉದ್ದೀಪನಮಾಡ (ಉರಿಸ) ಬೇಕು. ||೯೩||

ಅಗ್ನಿಂ ಪ್ರಜ್ವಲಿತಂ ವಂದೇ ಜಾತವೇದಂ ಹುತಾಶನಂ ।
ಸುವರ್ಣವರ್ಣಮಮಲಂ ಸಮಿದ್ಧಂ ವಿಶ್ವತೋಮುಖಂ ॥೯೪॥

ಮಂತ್ರೇಣಾನೇನ ತಂ ವಹ್ನಿಂ ಸ್ತುವೀತ ಪರಮಾದರಾತ್ ।
ತತೋ ನ್ಯಸೇದ್ವಹ್ನಿಮಂತ್ರಂ ಷಡಂಗಂ ದೇಶಿಕೋತ್ತಮಃ ॥೯೫॥

ಸಹಸ್ರಾರ್ಚಿಃ ಸ್ವಸ್ತಿಪೂರ್ಣ ಉತ್ತಿಷ್ಠಪುರುಷಸ್ಸ್ಮೃತಃ ।
ಧೂಮವ್ಯಾಪೀ ಸಪ್ತಜಿಹ್ವೋ ಧನುರ್ಧರ ಇತಿ ಕ್ರಮಾತ್ ॥೯೬॥

ಜಾತಿಯುಕ್ತಾಃ ಷಡಂಗಾಃ ಸ್ಯುಃ ಪೂರ್ವಸ್ಥಾನೇಷು ವಿನ್ಯಸೇತ್ ।
ಧ್ಯಾಯೇದ್ವಹ್ನಿಂ ಹೇಮವರ್ಣಂ ತ್ರಿನೇತ್ರಂ ಪದ್ಮಸಂಸ್ಥಿತಂ ॥೯೭॥

ಇಷ್ಟಶಕ್ತಿಸ್ವಸ್ತಿಕಾಭೀ ಧಾರಕಂ ಮಂಗಲಂ ಪರಂ ।
ಪರಿಷಿಂಚೇತ್ತತಃ ಕುಂಡಂ ಮೇಖಲೋಪರಿ ಮಂತ್ರವಿತ್ ॥೯೮॥

---

ಜಾತವೇದ, ಹುತಾಶನ, ಸುವರ್ಣವರ್ಣ, ಅಮಲ, ಸಮಿದ್ಧ, ವಿಶ್ವತೋಮುಖ ಎಂಬ ನಾಮಗಳಿಂದ ಪ್ರಜ್ವಲಿತವಾದ ಅಗ್ನಿಯನ್ನು ನಮಸ್ಕರಿಸಬೇಕು. ॥೯೪॥

ಮೇಲೆಹೇಳಿದಂತೆ ಬಹಳ ಭಕ್ತಿಯಿಂದ ಕೂಡಿ ವಹ್ನಿಯನ್ನು ಸ್ತೋತ್ರಮಾಡಿ ನಮಸ್ಕರಿಸಬೇಕು. ಅನಂತರದಲ್ಲಿ ಆಚಾರ್ಯನು ಷಡಂಗಯುಕ್ತವಾದ ವಹ್ನಿಮಂತ್ರವನ್ನು ಉಚ್ಚರಿಸಿ ಉಪಸ್ಥಾನ ಮಾಡಬೇಕು. ॥೯೫॥

ಸಹಸ್ರಾರ್ಚಿಃ, ಸ್ವಸ್ತಿಪೂರ್ಣಃ, ಉತ್ತಿಷ್ಠಪುರುಷಃ, ಧೂಮವ್ಯಾಪೀ, ಸಪ್ತಜಿಹ್ವಃ, ಧನುರ್ಧರಃ ಎಂಬುದಾಗಿ ಕ್ರಮವಾಗಿ ಸ್ತೋತ್ರಮಾಡಬೇಕು. ॥೯೬॥

ನಮಃ, ಸ್ವಾಹಾ, ವಷಟ್, ಹುಂ, ವೌಷಟ್, ಫಟ್ ಎಂಬ ಪದಗಳಿಂದ ಕೂಡಿದ ಷಡಂಗನ್ಯಾಸಗಳನ್ನು (ಓಂ ಸಹಸ್ರಾರ್ಚಿಷೇಹೃದಯಾಯ ನಮಃ ಓಂ ಸ್ವಸ್ತಿಪೂರ್ಣಾಯ ಶಿರಸೇ ಸ್ವಾಹಾ ಇತ್ಯಾದಿ ಷಡಂಗ ಮಂತ್ರಗಳು ಊಹಿಸಲ್ಪಡತಕ್ಕವುಗಳು) ಹೃದಯಾದಿ ಸ್ಥಾನಗಳಲ್ಲಿ ಭಾವನೆ ಮಾಡಬೇಕು. ಸುವರ್ಣ ವರ್ಣವೂ, ತ್ರಿನೇತ್ರವೂ, ಪದ್ಮಸಂಸ್ಥಿತವೂ ಆದ ಅಗ್ನಿಯನ್ನು ಧ್ಯಾನಮಾಡಬೇಕು. ॥೯೭॥

ವರಮುದ್ರಾ, ಶಕ್ತಿ, ಸ್ವಸ್ತಿಕಾ, ಅಭಯಾದಿ ಮುದ್ರಾಧಾರಕನೂ, ಮಂಗಳಕರನೂ, ಉತ್ಕೃಷ್ಟನೂ, ಆದ ಅಗ್ನಿಯನ್ನು ಮೇಖಲೆಯ ಮೇಲೆ (ಮಧ್ಯಭಾಗದ ಮೇಲೆ) (ಕುಂಡದಲ್ಲಿಟ್ಟು) ಪರಿಷೇಚನೆ ಮಾಡಬೇಕು. ॥೯೮॥

**ದರ್ಭೈಃ ಪರಿಸ್ತರೇತ್ಪಶ್ಚಾತ್ ಪರಿಧೀನ್ವಿನ್ಯಸೇದಥ ।**
**ತ್ರಿಕೋಣವೃತ್ತಷಟ್ಕೋಣಂ ಸಾಷ್ಟಪತ್ರಂ ಸಭೂಪುರಂ ॥೯೯॥**

**ಯಂತ್ರಂ ವಿಭಾವಯೇದ್ವಹ್ನೇಃ ಪೂರ್ವ(ಂ) ವಾ(ರ)ಂ-ಲಿಖೇದಥ ।**
**ತನ್ಮಧ್ಯೇ ಪೂಜಯೇದ್ವಹ್ನಿಂ ಮಂತ್ರೇಣಾನೇನ ವೈ ಮುನೇ ॥೧೦೦॥**

**ವೈಶ್ವಾನರ ತತೋ ಜಾತವೇದಃ ಪಶ್ಚಾದಿಹಾವಹ ।**
**ಲೋಹಿತಾಕ್ಷ ಪದಂ ಪ್ರೋಕ್ತ್ವಾ ಸರ್ವಕರ್ಮಾಣಿ ಸಾಧಯ ॥೧೦೧॥**

**ವಹ್ನಿಜಾಯಾಂ ತತೋ ಮಂತ್ರಸ್ತೇನ ವಹ್ನಿಂ ತು ಪೂಜಯೇತ್ ।**
**ಮಧ್ಯೇ ಷಟ್ಸ್ವಪಿ ಕೋಣೇಷು ಹಿರಣ್ಯಾ ಗಗನಾ ತಥಾ ॥೧೦೨॥**

**ರಕ್ತಾ ಕೃಷ್ಣಾ ಸುಪ್ರಭಾ ಚ ಬಹುರೂಪಾತಿರಕ್ತಿಕಾ ।**
**ಪೂಜಯೇತ್ಸಪ್ತಜಿಹ್ವಾಸ್ತಾಃ ಕೇಸರೇಷ್ವಂಗಪೂಜನಂ ॥೧೦೩॥**

---

ಅನಂತರದಲ್ಲಿ ದರ್ಭೆಗಳನ್ನು ಸುತ್ತಲೂ ಹರಡಿ, ಪರಿಸ್ತರಣಗಳನ್ನು ಸುತ್ತಲೂ ಇಡಬೇಕು. ಆ ಮೇಲೆ ತ್ರಿಕೋಣದ ಮೇಲೆ ಷಟ್ಕೋಣ, ಅದರ ಮೇಲೆ ವೃತ್ತ, ಅದರ ಮೇಲೆ ಅಷ್ಟಪತ್ರ, ಆಮೇಲೆ ಭೂ ಪುರ ಈ ರೀತಿಯಾಗಿ ಅಗ್ನಿ ಸ್ಥಾಪನೆಗೆ ಪೂರ್ವದಲ್ಲಿಯೇ, ॥೯೯॥

ಅಗ್ನಿಯ ಯಂತ್ರವನ್ನು ಬರೆಯಬೇಕು. ಅಥವಾ ಮೊದಲೇ ಯಂತ್ರವನ್ನು ಬರೆದಿದ್ದರೂ ಸರಿಯೆ. ಆ ಯಂತ್ರಮಧ್ಯದಲ್ಲಿ ಅಗ್ನಿಸಂಬಂಧವಾದ ಮಂತ್ರದಿಂದಲೇ ಅಗ್ನಿಯನ್ನು ಪೂಜಿಸಬೇಕು. ॥೧೦೦॥

ವೈಶ್ವಾನರ, ಜಾತವೇದ, ಆವಹ, ಲೋಹಿತಾಕ್ಷ ಇತ್ಯಾದಿ ನಾಮಗಳನ್ನು ಉಚ್ಚರಿಸುತ್ತಾ ಎಲ್ಲಾ ಕೆಲಸಗಳನ್ನೂ ಸಾಧಿಸಬೇಕು. ॥೧೦೧॥

ವಹ್ನಿಜಾಯಾಂತವಾದ ಮಂತ್ರದಿಂದ ಅಗ್ನಿಯನ್ನು ಪೂಜಿಸಬೇಕು. ಮಧ್ಯದಲ್ಲಿರುವ ಆರು ಕೋಣಗಳಲ್ಲಿಯೂ ಹಿರಣ್ಯಾ, ಗಗನಾ, (ಆಕಾಶವರ್ಣ-ನೀಲ) ॥೧೦೨॥

ರಕ್ತಾ (ಕೆಂಪು), ಕೃಷ್ಣಾ (ಕಪ್ಪು), ಸುಪ್ರಭಾ, ಬಹುರೂಪಾ, ಅತಿರಿಕ್ತಾ ಈ ರೀತಿಯಾದ ವರ್ಣಗಳಿಂದ ಕೂಡಿದ ಸಪ್ತಜಿಹ್ವೆಗಳನ್ನು ಕೇಸರಗಳಲ್ಲಿ ಆವಾಹಿಸಿ ಅಂಗಪೂಜೆಯನ್ನು ಮಾಡಬೇಕು. ॥೧೦೩॥

ದಲೇಷು ಪೂಜಯೇನ್ಮೂರ್ತೀಃ ಶಕ್ತಿಸ್ವಸ್ತಿಕಧಾರಿಣೀಃ ।
ಜಾತವೇದಾಸ್ಸಪ್ತಜಿಹ್ವೋ ಹವ್ಯವಾಹನ ಏವ ಚ ॥೧೦೪॥

ಅಶ್ವೋದರಜಸಂಜ್ಞೋಽನ್ಯಃ ಪುನರ್ವೈಶ್ವಾನರಾಹ್ವಯಃ ।
ಕೌಮಾರ ತೇಜಾಃ ಸ್ಯಾದ್ವಿಶ್ವಮುಖೋ ದೇವಮುಖಃ ಸ್ಮೃತಃ ॥೧೦೫॥

ತಾರಾಗ್ನಯೇ ಪದಾದ್ಯಾಃ ಸ್ಯುಃ ನತ್ಯಂತಾವಹ್ನಿಮೂರ್ತಯಃ ।
ಲೋಕಪಾಲಾಂಶ್ಚತುರ್ದಿಕ್ಷು ವಜ್ರಾದ್ಯಾಯುಧ ಸಂಯುತಾನ್ ॥೧೦೬॥

॥ ನಾರಾಯಣ ಉವಾಚ ॥

ತತಃ ಸ್ರುಕ್ಸ್ರುವ ಸಂಸ್ಕಾರಾವಾಜ್ಯಸಂಸ್ಕಾರ ಏವ ಚ ।
ಕೃತ್ವಾ ಹೋಮಂ ತತಃ ಕುರ್ಯಾತ್ಸ್ರುವೇಣಾದಾಯ ವೈ ಘೃತಂ ॥೧೦೭॥

ದಕ್ಷಿಣಾದ್ಘೃತಭಾಗಾತ್ತು ವಹ್ನೇರ್ದಕ್ಷಿಣ ಲೋಚನೇ ।
ಜುಹುಯಾದಗ್ನಯೇ ಸ್ವಾಹೇತ್ಯೇವಂ ವೈ ವಾಮತೋಽನ್ಯತಃ ॥೧೦೮॥

---

ಶಕ್ತಿ ಮತ್ತು ಸ್ವಸ್ತಿಕ (ಆಯುಧ)ಗಳನ್ನು ಧರಿಸಿರುವ ಮೂರ್ತಿಗಳನ್ನು ದಳಗಳಲ್ಲಿ ಪೂಜಿಸಬೇಕು. ಜಾತವೇದಾಃ, ಸಪ್ತಜಿಹ್ವಃ, ಹವ್ಯವಾಹನಃ. ॥೧೦೪॥

ಅಶ್ವೋದರಜ, ವೈಶ್ವಾನರ, ಕೌಮಾರತೇಜಾಃ, ವಿಶ್ವಮುಖಃ, ದೇವಮುಖಃ ಈ ನಾಮಗಳನ್ನು ಉಚ್ಚರಿಸುತ್ತಾ, ॥೧೦೫॥

" ಓಂ ಅಗ್ನಯೇ ಜಾತವೇದಸೇ ನಮಃ " ಎಂಬುದಾಗಿ ಮೂರ್ತಿಧ್ಯಾನಾದಿಗಳನ್ನು ಮಾಡಿ, ವಜ್ರಾದ್ಯಾಯುಧಸಂಪನ್ನರಾದ ಚತುರ್ದಿಕ್ಪಾಲಕರನ್ನೂ ಸಹ ಪೂಜಿಸಬೇಕು. ॥೧೦೬॥

ಪರಮಾತ್ಮನು ಹೇಳಿದನು—ಅನಂತರ ಸ್ರುಕ್ಸ್ರುವಗಳ ಸಂಸ್ಕಾರಗಳನ್ನೂ, ಆಜ್ಯಸಂಸ್ಕಾರವನ್ನೂ ಮಾಡಿ, ಸ್ರುವದಿಂದ ತುಪ್ಪವನ್ನು ತೆಗೆದುಕೊಂಡು ಹೋಮವನ್ನು ಮಾಡಬೇಕು. ॥೧೦೭॥

ಆಜ್ಯಸ್ಥಾಲಿಯಲ್ಲಿ ದಕ್ಷಿಣವಾಮಭಾಗ ಕಲ್ಪನೆಯನ್ನು ಮಾಡಿ ದಕ್ಷಿಣಭಾಗದಿಂದ ಸ್ರುವದಿಂದ ಆಜ್ಯವನ್ನು ತೆಗೆದುಕೊಂಡು "ಅಗ್ನಯೇಸ್ವಾಹಾ" ಎಂಬ ಮಂತ್ರದಿಂದ ಅಗ್ನಿಯ ದಕ್ಷಿಣಲೋಚನದಲ್ಲಿ ಹೋಮ ಮಾಡಬೇಕು. ಹಾಗೆಯೇ

**ಸೋಮಾಯ ಸ್ವಾಹೇತಿ ಮಧ್ಯಾತ್ತು ಘೃತಮಾದಾಯ ಸತ್ತಮ ।**
**ಅಗ್ನಿಷೋಮಾಭ್ಯಾಂ ಸ್ವಾಹೇತಿ ಮಧ್ಯನೇತ್ರೇ ಹುನೇತ್ತತಃ ॥೧೦೯॥**

**ಪುನರ್ದಕ್ಷಿಣಭಾಗಾತ್ತು ಘೃತಮಾದಾಯ ವೈ ಮುಖೇ ।**
**ಅಗ್ನಯೇ ಸ್ವಿಷ್ಟಕೃತೇ ಸ್ವಾಹೇತ್ಯನೇನೈವ ಹುನೇತ್ತತಃ ॥೧೧೦॥**

**ಸತಾರಾಭಿಃ ವ್ಯಾಹೃತಿಭಿಃ ಜುಹುಯಾದಥ ಸಾಧಕಃ ।**
**ಜುಹುಯಾದಗ್ನಿ ಮಂತ್ರೇಣ ತ್ರಿವಾರಂ ತು ತತಃ ಪರಂ ॥೧೧೧॥**

**ತತಸ್ತು ಪ್ರಣವೇನೈವಾಽಪ್ಯಷ್ಟಾವಷ್ಟೌ ಘೃತಾಹುತೀಃ ।**
**ಗರ್ಭಾಧಾನಾದಿ ಸಂಸ್ಕಾರ ಕೃತೇ ತು ಜುಹುಯಾನ್ಮನೇ ॥೧೧೨॥**

**ಗರ್ಭಾಧಾನಂ ಪುಂಸವನಂ ಸೀಮಂತೋನ್ನಯನಂ ತತಃ ।**
**ಜಾತಕರ್ಮ ನಾಮಕರ್ಮಾಪ್ಯುಪನಿಷ್ಕ್ರಮಣಂ ತಥಾ ॥೧೧೩॥**

---

ವಾಮಭಾಗದಿಂದ ಆಜ್ಯವನ್ನು ತೆಗೆದುಕೊಂಡು "ಸೋಮಾಯಸ್ವಾಹಾ" ಎಂಬುದಾಗಿ ಅಗ್ನಿಯ ವಾಮನೇತ್ರದಲ್ಲಿ ಹೋಮ ಮಾಡಬೇಕು. ಮಧ್ಯಭಾಗದಿಂದ ಆಜ್ಯವನ್ನು ತೆಗೆದುಕೊಂಡು "ಅಗ್ನಿಷೋಮಾಭ್ಯಾಂಸ್ವಾಹಾ" ಎಂದು ಮೂರನೆಯ ಕಣ್ಣಿನಲ್ಲಿ ಹೋಮ ಮಾಡಬೇಕು. ॥೧೦೮-೧೦೯॥

ಮತ್ತೆ ದಕ್ಷಿಣಭಾಗದಿಂದ ತುಪ್ಪವನ್ನು ತೆಗೆದುಕೊಂಡು ಮುಖಭಾಗದಲ್ಲಿ "ಅಗ್ನಯೇಸ್ವಿಷ್ಟಕೃತೇಸ್ವಾಹಾ" ಎಂಬುದಾಗಿ ಹೇಳಿ ಹೋಮ ಮಾಡಬೇಕು. ॥೧೧೦॥

ಸಾಧಕನು "ಓಂ ಭೂಃ ಸ್ವಾಹಾ, ಓಂ ಭುವಃ ಸ್ವಾಹಾ" ಎಂಬ ಮಂತ್ರೋಚ್ಚಾರಣಪೂರ್ವಕವಾಗಿ ಪೂರ್ವೋಕ್ತವಾದ ಅಗ್ನಿಮಂತ್ರದಿಂದ ಮೂರಾವೃತ್ತಿ ಅಗ್ನಿಯಲ್ಲಿ ಹೋಮ ಮಾಡಬೇಕು. ॥೧೧೧॥

ಅನಂತರದಲ್ಲಿ ಪ್ರಣವೋಚ್ಚಾರಣ ಮಾಡುತ್ತಾ, ಗರ್ಭಾಧಾನಾದಿ ಸಂಸ್ಕಾರಾರ್ಥವಾಗಿ ಅಷ್ಟ, ಅಷ್ಟ (ಎಂಟೆಂಟು) ಆಹುತಿಗಳನ್ನು ಹೋಮ ಮಾಡಬೇಕು. ॥೧೧೨॥

ಗರ್ಭಾಧಾನಾದಿ ಸಂಸ್ಕಾರಗಳು ಯಾವುವೆಂದರೆ --

ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ, ಮಹಾನಾಮ್ನೀವ್ರತ, ಔಪನಿಷದವ್ರತ,

ಅನ್ನಾಶನಂ ತಥಾ ಚೂಡಾವ್ರತಬಂಧಸ್ತಥೈವ ಚ ।
ಮಹಾನಾಮ್ನ್ಯಂ ವ್ರತಂ ಪಶ್ಚಾತ್ತಥೌಪನಿಷದಂ ವ್ರತಂ ॥೧೧೪॥

ಗೋದಾನೋದ್ವಾಹ ಕೌ ಪ್ರೋಕ್ತಾಃ ಸಂಸ್ಕಾರಾಃ ಶ್ರುತಿಚೋದಿತಾಃ ।
ತತಃ ಶಿವಂ ಪಾರ್ವತೀಂ ಚ ಪೂಜಯಿತ್ವಾ ವಿಸರ್ಜಯೇತ್ ॥೧೧೫॥

ಜುಹುಯಾತ್ಪಂಚ ಸಮಿಧೋ ವಹ್ನಿಮುದ್ದಿಶ್ಯ ಸಾಧಕಃ ।
ಪಶ್ಚಾದಾವರಣಾನಾಂ ಚಾಪ್ಯೇಕೈಕಾಮಾಹುತಿಂ ಹುನೇತ್ ॥೧೧೬॥

ಘೃತಂ ಸ್ರುಚಿ ಸಮಾದಾಯ ಚತುರ್ವಾರಂ ಸ್ರುವೇಣ ಚ ।
ಪಿಧಾಯ ತಾಂ ತು ತೇನೈವ ಮುನೇ ತಿಷ್ಠನ್ನಿಜಾಸನೇ ॥೧೧೭॥

ವೌಷಡಂತೇನ ಮನುನಾ ವಹ್ನೇಸ್ತು ಜುಹುಯಾತ್ತತಃ ।
ಮಹಾಗಣೇಶಮಂತ್ರೇಣ ಜುಹುಯಾದಾಹುತೀರ್ದಶ ॥೧೧೮॥

---

ಗೋದಾನಿಕವ್ರತ, ವಿವಾಹಕರ್ಮ ಇವು ಶ್ರುತಿಪ್ರಸಿದ್ಧವಾದ ಸಂಸ್ಕಾರಗಳು. ಇವುಗಳನ್ನು ಮುಗಿಸಿದ ಅನಂತರ ವಹ್ನಿಗೆ ಪಿತೃಭೂತರಾದ (ತಂದೆತಾಯಿಗಳಾದ) ಈಶ್ವರಪಾರ್ವತಿಯರನ್ನು ಪೂಜಿಸಿ ವಿಸರ್ಜನೆಮಾಡಬೇಕು. ॥೧೧೩-೧೧೪-೧೧೫॥

ವಹ್ನಿಯನ್ನುದ್ದೇಶಿಸಿ, ಐದು ಸಮಿತ್ತುಗಳನ್ನು ಹೋಮಮಾಡಿ ಅನಂತರ ಆವರಣ ದೇವತೆಗಳಿಗೂ ಒಂದೊಂದು ಸಮಿತ್ತನ್ನು ಆಹುತಿ (ಹೋಮ) ಮಾಡಬೇಕು. ॥೧೧೬॥

ಸ್ರುಕ್ಕಿನಲ್ಲಿ ತುಪ್ಪವನ್ನು ತೆಗೆದುಕೊಂಡು, ಸ್ರುವದಿಂದ ನಾಲ್ಕು ಸಲ ಹಾಕಿಕೊಂಡು, ಸ್ರುಕ್ಕನ್ನು ಸ್ರುವದಿಂದಲೇ ಮುಚ್ಚಿ, ತನ್ನ ಆಸನದಲ್ಲಿ ನಿಂತುಕೊಂಡು, ॥೧೧೭॥

"ವೌಷಟ್" ಎಂಬುದೇ ಕೊನೆಯಲ್ಲುಳ್ಳ, ಪೂರ್ವೋಕ್ತವಾದ ಮನುವಿನಿಂದಲೂ (ಜ್ಞಾನದಿಂದ) ಮಹಾಗಣೇಶಮಂತ್ರದಿಂದಲೂ, ಓಂ ಓಂ ಸ್ವಾಹಾ, ಓಂ ಶ್ರೀಂ ಸ್ವಾಹಾ, ಓಂ ಶ್ರೀಂ ಹ್ರೀಂ ಸ್ವಾಹಾ, ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಸ್ವಾಹಾ, ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಸ್ವಾಹಾ, ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ಸ್ವಾಹಾ, ವರವರದಸ್ವಾಹಾ, ಸರ್ವಜನಂ ಮೇ ವಶಂ (ಕುರು) ಸ್ವಾಹಾ, ಆನಯ ಸ್ವಾಹಾ, ಎಂಬುದಾಗಿ ದಶಾಹುತಿಗಳನ್ನು ಕೊಡಬೇಕು. ॥೧೧೮॥

ವಹ್ನೌ ಪೀಠಂ ಸಮಭ್ಯರ್ಚ್ಯ ದೇಯಮಂತ್ರಸ್ಯ ದೇವತಾಂ ।
ವಹ್ನೌ ಧ್ಯಾತ್ವಾ ತು ತದ್ವಕ್ತ್ರೇ ಪಂಚವಿಂಶತಿ ಸಂಖ್ಯಯಾ ॥೧೧೯॥

ಮೂಲಮಂತ್ರೇಣ ಜುಹುಯಾದ್ವಕ್ತ್ರೈಕೀಕರಣಾಯ ಚ ।
ವಹ್ನಿದೇವತಯೋರೈಕ್ಯಂ ಭಾವಯನ್ನಾತ್ಮನಾ ಸಹ ॥೧೨೦॥

ಏಕೀಭೂತಂ ಭಾವಯೇತ್ತು ತತಸ್ತು ಸಾಧಕೋತ್ತಮಃ ।
ಷಡಂಗದೇವತಾನಾಂ ಚ ಜುಹುಯಾದಾಹುತೀಃ ಪೃಥಕ್ ॥೧೨೧॥

ಏಕಾದಶೈವ ಜುಹುಯಾದಾಹುತೀರ್ಮುನಿಸತ್ತಮ ।
ಏತೇನ ನಾಡೀಸಂಧಾನಂ ವಹ್ನಿದೇವತಯೋರ್ಮುನೇ ॥೧೨೨॥

ಏಕೈಕಕ್ರಮಯೋಗೇನಾಪ್ಯಾವೃತ್ತೀನಾಂ ತಥೈವ ಚ ।
ಏಕೈಕಕ್ರಮಯೋಗೇನ ಘೃತೇನ ಜುಹುಯಾನ್ಮುನೇ ॥೧೨೩॥

ತತಃ ಕಲ್ಪೋಕ್ತದ್ರವ್ಯೈಸ್ತು ಜುಹುಯಾದಥವಾ ತಿಲೈಃ ।
ದೇವತಾಮೂಲಮಂತ್ರೇಣ ಗಜಾಂತಕಸಹಸ್ರಕಂ ॥೧೨೪॥

---

ಅಗ್ನಿಯಲ್ಲಿ ಪೀಠವನ್ನು ಪೂಜಿಸಿ, ಹಾಗೆಯೇ ದೇಯ ಮಂತ್ರದೇವತೆಯನ್ನು ವಕ್ತ್ರದಲ್ಲಿ ಇಪ್ಪತ್ತೈದುಸಲ ವಹ್ನಿಯಲ್ಲಿ ಧ್ಯಾನಿಸಿ, ದೇವತಾವಕ್ತ್ರದಲ್ಲಿ ॥೧೧೯॥

ವಹ್ನಿ, ದೇವತೆಗಳ ಏಕವಕ್ತ್ರತಾ ಸಂಪಾದನೆಗೋಸ್ಕರ ತನಗೂ, ವಹ್ನಿದೇವತೆಗೂ ಐಕ್ಯವನ್ನು ಭಾವಿಸುತ್ತಾ ಮೂಲ ಮಂತ್ರದಿಂದ ಹೋಮ ಮಾಡಬೇಕು. ॥೧೨೦॥

ಸಾಧಕಶ್ರೇಷ್ಠನು ಏಕೀಭೂತವಾಗಿದ್ದ ವಹ್ನಿದೇವತೆಗಳಿಗೂ ತನಗೂ, ಐಕ್ಯತೆಯನ್ನು ಭಾವಿಸುತ್ತಾ ಷಡಂಗದೇವತೆಗಳಿಗೂ ಕ್ರಮವಾಗಿ ಬೇರೆ ಬೇರೆ ಹೋಮವನ್ನು ಮಾಡಬೇಕು. ॥೧೨೧॥

ಮುನಿಶ್ರೇಷ್ಠನೇ, ಹೀಗೆಯೇ ಏಕಾದಶ ಆಹುತಿಗಳನ್ನೂ ಹೋಮ ಮಾಡಬೇಕು. ಇದರಿಂದ ವಹ್ನಿದೇವತೆಗಳಿಗೆ ನಾಡೀಸಂಧಾನವು (ಐಕ್ಯತೆಯು) ಉಂಟಾಗುತ್ತದೆ. ॥೧೨೨॥

ಅನಂತರ ಕಲ್ಪೋಕ್ತದ್ರವ್ಯಗಳಿಂದಾಗಲಿ ಅಥವಾ ತಿಲದ್ರವ್ಯಗಳಿಂದಲಾಗಲಿ

ಏವಂ ಹುತ್ವಾ ತತೋ ದೇವೀಂ ಸಂತುಷ್ಟಾಂ ಭಾವಯೇನ್ಮನೇ ।
ತಥೈವಾವೃತಿದೇವೀಶ್ಚ ವಹ್ನ್ಯಾದ್ಯಾ ದೇವತಾ ಅಪಿ ॥೧೨೫॥

ತತಃ ಶಿಷ್ಯಂಚ ಸುಸ್ನಾತಂ ಕೃತ ಸಂಧ್ಯಾದಿಕಕ್ರಿಯಂ ।
ವಸ್ತ್ರದ್ವಯಯುತಂ ಸ್ವರ್ಣಾಭರಣೇನ ಸಮನ್ವಿತಂ ॥೧೨೬॥

ಕಮಂಡಲುಕರಂ ಶುದ್ಧಂ ಕುಂಡಸ್ಯಾಂತಿಕಮಾನಯೇತ್ ।
ನಮಸ್ಕೃತ್ಯ ತತಶ್ಶಿಷ್ಯೋ ಗುರೂನಥಸಭಾಸದಃ ॥೧೨೭॥

ಕುಲದೇವಂ ನಮಸ್ಕೃತ್ಯ ವಿಶೇತ್ತತ್ರಾಥ ವಿಷ್ಟರೇ ।
ಗುರುಸ್ತತಸ್ತು ತಂ ಶಿಷ್ಯಂ ಕೃಪಾದೃಷ್ಟ್ಯಾ ವಿಲೋಕಯೇತ್ ॥೧೨೮॥

ತಚ್ಚೈತನ್ಯಂ ನಿಜೇ ದೇಹೇ ಭಾವಯೇತ್ಸಂಗತಂ ತ್ವತಿ ।
ತತಶ್ಶಿಷ್ಯ ತನುಸ್ಥಾನಾ ಮಧ್ವನಾಂ ಪರಿಶೋಧನಂ ॥೧೨೯॥

---

ದೇವತಾಮೂಲಮಂತ್ರದಿಂದ ಅಷ್ಟೋತ್ತರ ಸಹಸ್ರ ಆಹುತಿಗಳನ್ನು ಹೋಮ ಮಾಡ ಬೇಕು. ॥೧೨೩-೧೨೪॥

ಈ ರೀತಿ ಹೋಮಮಾಡಿದ ಅನಂತರ ದೇವಿಯನ್ನು ಸಂತುಷ್ಟಳಾದಂತೆ ಭಾವಿಸಿ, ಹಾಗೆಯೇ ಆವರಣ ದೇವತೆಗಳನ್ನೂ, ವಹ್ನ್ಯಾದಿದೇವತೆಗಳನ್ನೂ ಸಹ ಸಂತುಷ್ಟರಾದಂತೆ ಮನಸ್ಸಿನಲ್ಲಿ ಭಾವಿಸಬೇಕು. ॥೧೨೫॥

ಅನಂತರ ಸ್ನಾನಾದಿಗಳಿಂದ ಪರಿಶುದ್ಧನಾಗಿ, ಸಂಧ್ಯಾದಿಕ್ರಿಯೆಗಳನ್ನು ಮುಗಿಸಿ, ವಸ್ತ್ರದ್ವಯಸಹಿತನಾದ ಸ್ವರ್ಣಾಭರಣಗಳನ್ನು ಧರಿಸಿದ, ಕೈಯ್ಯಲ್ಲಿ ಕಮಂಡಲುವನ್ನು (ಜಲಸಹಿತವಾದ ಪಂಚಪಾತ್ರೆಯನ್ನು)ಹಿಡಿದುಕೊಂಡಿರುವ ಶಿಷ್ಯನನ್ನು ಪೀಠಸಹಿತ ವಾಗಿ ಕುಂಡದ ಸಮೀಪಕ್ಕೆ ಕರೆತರಬೇಕು. ಆ ಶಿಷ್ಯನು ಗುರುಗಳಿಗೂ ಸಭಾ ಸದರಿಗೂ ನಮಸ್ಕಾರಮಾಡದಮೇಲೆ, ॥೧೨೬-೧೨೭॥

ಕುಲದೇವತೆಗೂ ನಮಸ್ಕಾರಮಾಡಿ, ಆಸನದಲ್ಲಿ ಕುಳಿತುಕೊಳ್ಳಬೇಕು. ಅನಂತರ ಗುರುವು ಶಿಷ್ಯನನ್ನು ದಯಾಪೂರ್ಣವಾದ ದೃಷ್ಟಿಯಿಂದ ಅವಲೋಕಿಸ ಬೇಕು. ॥೧೨೮॥

ಶಿಷ್ಯನ ಚೈತನ್ಯವನ್ನು ತನ್ನ ಆತ್ಮನಲ್ಲಿ ಪ್ರವೇಶಿಸಿದಂತೆ ಭಾವಿಸಬೇಕು. ಆಮೇಲೆ ಶಿಷ್ಯನ ಶರೀರದಲ್ಲಿರುವ ಮುಂದೆ ಹೇಳಲ್ಪಡುವ ಮಾರ್ಗಗಳನ್ನು ಹೋಮ ಕ್ರಮದಿಂದ ಪರಿಶೋಧಿಸಬೇಕು. ॥೧೨೯॥

ಕುರ್ಯಾತ್ತು ಹೋಮತೋ ವಿದ್ವಾನ್ದಿವ್ಯದೃಷ್ಟ್ಯವಲೋಕನಾತ್ ।
ಯೇನ ಜಾಯೇತ ಶುದ್ಧಾತ್ಮಾ ಯೋಗ್ಯದೇವಾದ್ಯನುಗ್ರಹೇ ॥೧೩೦॥

॥ ನಾರಾಯಣ ಉವಾಚ ॥

ತನೌ ಧ್ಯಾಯೇತ್ತು ಶಿಷ್ಯಸ್ಯ ಷಡಧ್ವನಃ ಕ್ರಮೇಣ ತು ।
ಪಾದಯೋಸ್ತು ಕಲಾಧ್ವಾನ ಮಂಧೌ ತತ್ವಾಧ್ವಕಂ ಪುನಃ ॥೧೩೧॥

ನಾಭೌ ತು ಭುವನಾಧ್ವಾನಂ ವರ್ಣಾಧ್ವಾನಂ ತಥಾ ಹೃದಿ ।
ಪದಾಧ್ವಾನಂ ತಥಾ ಭಾಲೇ ಮಂತ್ರಾಧ್ವಾನಂ ತು ಮೂರ್ಧನಿ ॥೧೩೨॥

ಶಿಷ್ಯಂ ಸ್ಪೃಶಂಸ್ತು ಕೂರ್ಚೇನ ತಿಲೈರಾಜ್ಯಪರಿಪ್ಲುತೈಃ ।
ಶೋಧಯಾಮ್ಯಮುಮಧ್ವಾನಂ ಸ್ವಾಹೇತಿ ಮನುಮುಚ್ಚರನ್ ॥೧೩೩॥

ತಾರಾಧ್ಯಂ ಜುಹುಯಾದಷ್ಟವಾರಂಪ್ರತ್ಯಧ್ವಮೇವ ಹಿ ।
ಷಡಧ್ವನ ತತಸ್ತಾಂಸ್ತು ಲೀನಾನ್ಬ್ರಹ್ಮಣಿ ಭಾವಯೇತ್ ॥೧೩೪॥

---

ಹೋಮಾದಿಗಳಿಂದಲೂ, ದಿವ್ಯದೃಷ್ಟಿಯಿಂದ ನೋಡುವಿಕೆಯಿಂದಲೂ, ಯೋಗ್ಯದೇವತೆಗಳೇ ಮೊದಲಾದವರ ಅನುಗ್ರಹದಿಂದಲೂ ಶುದ್ಧಾತ್ಮನಾಗುತ್ತಾನೆ. ॥೧೩೦॥

ಪರಮಾತ್ಮನು ಹೇಳಿದನು—ಶಿಷ್ಯನ ಶರೀರದಲ್ಲಿ ಕ್ರಮವಾಗಿ ಅಧ್ವಗಳನ್ನು ಧ್ಯಾನಿಸಬೇಕು. ಕಾಲುಗಳಲ್ಲಿ ಕಲಾಧ್ವವನ್ನೂ, ಲಿಂಗದಲ್ಲಿ ತತ್ವಾಧ್ವವನ್ನೂ, ॥೧೩೧॥

ನಾಭಿಯಲ್ಲಿ ಭುವನಾಧ್ವವನ್ನೂ, ಹೃದಯದಲ್ಲಿ ವರ್ಣಾಧ್ವವನ್ನೂ, ಫಾಲದಲ್ಲಿ ಪದಾಧ್ವವನ್ನೂ, ತಲೆಯಲ್ಲಿ ಮಂತ್ರಾಧ್ವವನ್ನೂ ಭಾವಿಸಬೇಕು. ॥೧೩೨॥

ತಿಲಾಜ್ಯಪರಿಪ್ಲುತವಾದ (ಮಿಶ್ರಿತವಾದ) ಕೂರ್ಚದಿಂದ ಶಿಷ್ಯನನ್ನು ಮುಟ್ಟಿಕೊಂಡು "ಅಸ್ಯಶಿಷ್ಯಸ್ಯಕಲಾಧ್ವಾನಂ ಶೋಧಯಾಮಿ ಸ್ವಾಹಾ" ಎಂಬ ಮಂತ್ರವನ್ನುಚ್ಚರಿಸುತ್ತಾ, ॥೧೩೩॥

ಎಂಟುಸಲ ಪಾದದಲ್ಲಿರುವ ಕಲಾಧ್ವವನ್ನು ಕೂರ್ಚಸಹಿತವಾದ ವಾಮಹಸ್ತದಿಂದ ಮುಟ್ಟುತ್ತಾ, ಹೋಮ ಮಾಡಬೇಕು. ಹಾಗೆಯೇ ಪ್ರತ್ಯಧ್ವದಲ್ಲಿಯೂ ಹೋಮ ಮಾಡಿ ಬ್ರಹ್ಮನಲ್ಲಿ ಐಕ್ಯವಾದಂತೆ ಭಾವಿಸಬೇಕು. ॥೧೩೪॥

ಪುನರುತ್ಪಾದಯೇತ್ತಸ್ಮಾತ್ ಸೃಷ್ಟಿಮಾರ್ಗೇಣ ವೈ ಗುರುಃ ।
ಆತ್ಮಸ್ಥಿತಂ ತ ಚ್ಚೈತನ್ಯಂ ಪುನಃ ಶಿಷ್ಯೇ ತು ಯೋಜಯೇತ್ ॥೧೩೫॥

ಪೂರ್ಣಾಹುತಿಂ ತತೋ ಹುತ್ವಾ ದೇವತಾಂ ಕಲಶೇ ನಯೇತ್ ।
ಪುನರ್ವ್ಯಾಹೃತಿಭಿರ್ಹುತ್ವಾ ವಹ್ನೇರಂಗಾಹುತೀಸ್ತಥಾ ॥೧೩೬॥

ಏಕೈಕಶೋ ಗುರುರ್ದತ್ವಾ ವಿಸೃಜೇದ್ವಹ್ನಿಮಾತ್ಮನೇ ।
ತತಶ್ಶಿಷ್ಯಸ್ಯ ನೇತ್ರೇ ತು ಬಧ್ನೀಯಾದ್ವಾಸಸಾ ಗುರುಃ ॥೧೩೭॥

ನೇತ್ರಮಂತ್ರೇಣ ತಂ ಶಿಷ್ಯಂ ಕುಂಡತೋ ಮಂಡಲಂ ನಯೇತ್ ।
ಪುಷ್ಪಾಂಜಲಿಂ ಮುಖ್ಯದೇವ್ಯಾಂ ಕಾರಯೇಚ್ಛಿಷ್ಯಹಸ್ತತಃ ॥೧೩೮॥

ನೇತ್ರಬಂಧಂ ನಿರಾಕೃತ್ಯ ವೇಶಯೇತ್ಕುಶವಿಷ್ಟರೇ ।
ಭೂತಶುದ್ಧಿಂ ಶಿಷ್ಯದೇಹೇ ಕುರ್ಯಾತ್ಪ್ರೋಕ್ತೇನ ವರ್ತ್ಮನಾ ॥೧೩೯॥

---

ಆದ್ದರಿಂದ ಗುರುವು ಮೊದಲು ತನ್ನಲ್ಲಿ ಯೋಜನೆಮಾಡಿಕೊಂಡಿದ್ದ ಶಿಷ್ಯನ ಚೈತನ್ಯವನ್ನು ಮತ್ತೆ ಶಿಷ್ಯನಲ್ಲಿ ಯೋಜಿಸಬೇಕು. ॥೧೩೫॥

ಪೂರ್ಣಾಹುತಿಯ ಹೋಮವನ್ನು ಮಾಡಿದ ಮೇಲೆ, ಆವಾಹಿತದೇವತೆಯನ್ನು ಕಲಶದಲ್ಲಿ ಇರುವವಳನ್ನಾಗಿ ಭಾವಿಸಬೇಕು, ಮತ್ತೆ ವ್ಯಾಹೃತಿಗಳಿಂದ ವಹ್ನಿಯ ಅಂಗದೇವತೆಗಳಿಗೂ ಹೋಮಮಾಡಿ, ॥೧೩೬॥

ಕಲಶದಲ್ಲಿ ಆವಾಹಿತದೇವತೆಗಳನ್ನು ಒಂದೊಂದನ್ನಾಗಿ ವಿಸರ್ಜನೆಮಾಡಬೇಕು. ಅನಂತರ ಶಿಷ್ಯನ ಕಣ್ಣುಗಳನ್ನು ಗುರುವು ಬಟ್ಟೆಯಿಂದ ಕಟ್ಟಬೇಕು.॥೧೩೭॥

" ವೌಷಟ್ " ಎಂಬ ಮಂತ್ರದಿಂದ ಕಣ್ಣುಗಳನ್ನು ಕಟ್ಟಿ, ಆ ಶಿಷ್ಯನನ್ನು ಕುಂಡಸ್ಥಳದ ಬಳಿಯಿಂದ ಕಲಶಸ್ಥಾಪನೆ ಮಾಡಿರುವ ಸ್ಥಳಕ್ಕೆ ಕರೆತರಬೇಕು. ಅನಂತರ ಮುಖ್ಯವಾದ ದೇವಿಗೆ ಶಿಷ್ಯನ ಹಸ್ತದಿಂದ ಪುಷ್ಪಾಂಜಲಿಯನ್ನು ಕೊಡಿಸಬೇಕು. ॥೧೩೮॥

ಕಣ್ಣಿಗೆ ಕಟ್ಟಿರುವ ಬಟ್ಟೆಯನ್ನು ಬಿಚ್ಚಿ ದರ್ಭಾಸನದಲ್ಲಿ ಕೂಡಿಸಿ ವಿಧಿಪ್ರಕಾರದಿಂದ ಶಿಷ್ಯನ ದೇಹದಲ್ಲಿ ಭೂತಶುದ್ಧಿಯನ್ನು ಮಾಡಬೇಕು. ॥೧೩೯॥

ಮಂತ್ರೋದಿತಾಂಸ್ತಥಾನ್ಯಾಸಾನ್ಕೃತ್ವಾ ಶಿಷ್ಯತನೌ ತತಃ ।
ಮಂಡಲೇ ವೇಶಯೇಚ್ಛಿಷ್ಯ ಮನ್ಯಸ್ಮಿನ್ಕುಂಭಸಂಸ್ಥಿತಾನ್ ॥೧೪೦॥

ಪಲ್ಲವಾನ್ ಶಿಷ್ಯಶಿರಸಿ ವಿನ್ಯಸೇನ್ಮಾತೃಕಾಂ ಜಪೇತ್ ।
ಕಲಶಸ್ಥ ಜಲೈಶ್ಶಿಷ್ಯಂ ಸ್ನಾಪಯೇದ್ದೇವತಾತ್ಮಕೈಃ ॥೧೪೧॥

ವರ್ಧನೀ ಜಲಸೇಕಂ ಚ ಕುರ್ಯಾದ್ರಕ್ಷಾರ್ಥಮಂಜಸಾ ।
ತತಶ್ಶಿಷ್ಯಸ್ಸಮುತ್ಥಾಯ ವಾಸಸೀ ಪರಿಧಾಯ ಚ ॥೧೪೨॥

ಕೃತ ಭಸ್ಮಾವಲೇಪಶ್ಚ ಸಂವಿಶೇದ್ಗುರು ಸನ್ನಿಧೌ ।
ತತೋ ಗುರುಃ ಸ್ವಕೀಯಾತ್ತು ಹೃದಯಾನ್ನಿರ್ಗತಾಂ ಶಿವಾಂ ॥೧೪೩॥

ಪ್ರವಿಷ್ಟಾಂ ಶಿಷ್ಯ ಹೃದಯೇ ಭಾವಯೇತ್ಕರುಣಾನಿಧಿಃ ।
ಪೂಜಯೇದ್ಗಂಧಪುಷ್ಪಾದ್ಯೈಃ ಐಕ್ಯಂ ವೈ ಭಾವಯಂಸ್ತಯೋಃ ॥೧೪೪॥

---

ಶಿಷ್ಯನ ಶರೀರದಲ್ಲಿ ದೇಯ ಮಂತ್ರೋಕ್ತವಾದ ನ್ಯಾಸಗಳನ್ನು ಮಾಡಿ, ಅನಂತರ ಅವನನ್ನು ಬೇರೆ ಕುಂಭವನ್ನು ಸ್ಥಾಪಿಸಿದ ಮಂಡಲದಲ್ಲಿ ಕೂಡಿಸಬೇಕು. ॥೧೪೦॥

ಅವನ ತಲೆಯ ಮೇಲೆ ಹೊಸ ಚಿಗುರೆಲೆಗಳನ್ನು ಇಟ್ಟು, ಮಾತೃಕಾ ಮಂತ್ರ ವನ್ನು ಜಪಿಸಿ ಕಲಶಸ್ಥ ಜಲದಿಂದ ಶಿಷ್ಯನನ್ನು ಸ್ನಾನ ಮಾಡಿಸಬೇಕು. ॥೧೪೧॥

ಈಶಾನ್ಯದಿಕ್ಕಿನಲ್ಲಿಟ್ಟಿರತಕ್ಕ ಕುಂಭದಲ್ಲಿನ ಜಲದಿಂದ ರಕ್ಷಾರ್ಥವಾಗಿ ಸ್ನಾನ ಮಾಡಿಸಿದ ಅನಂತರ ಶಿಷ್ಯನು ಮೇಲಕ್ಕೆ ಎದ್ದು ಬೇರೆ ವಸ್ತ್ರಗಳನ್ನು ಧಾರಣೆಮಾಡ ಬೇಕು. ॥೧೪೨॥

ಅನಂತರ ಭಸ್ಮಧಾರಣವನ್ನು ಮಾಡಿ, ಗುರುವಿನ ಸಮೀಪದಲ್ಲಿ ಕುಳಿತುಕೊಳ್ಳ ಬೇಕು. ಆಮೇಲೆ ಗುರುವು ತನ್ನ ಹೃದಯದಿಂದ ಮಂಗಳಕರಳಾದ ದೇವಿಯು ಹೊರಹೊರಟಂತೆಯೂ ಶಿಷ್ಯನ ಹೃದಯವನ್ನು ಪ್ರವೇಶಿಸಿದಂತೆಯೂ ಭಾವಿಸ ಬೇಕು. ॥೧೪೩॥

ಶಿಷ್ಯದೇವತೆಗಳಿಬ್ಬರಿಗೂ ಐಕ್ಯವನ್ನು ಭಾವಿಸುತ್ತಾ ದೇವತಾಬುದ್ಧಿಯಿಂದ ಗಂಧಪುಷ್ಪಾದಿಗಳಿಂದ ಶಿಷ್ಯನನ್ನು ಗುರುವು ಪೂಜಿಸಬೇಕು. ॥೧೪೪॥

ತತಸ್ತ್ರಿ(ಂ)ಶೋ ದಕ್ಷಕರ್ಣೇ ಶಿಷ್ಯಸ್ಯೋಪದಿಶೇದ್ಗುರುಃ ।
ಮಹಾಮಂತ್ರಂ ಮಹಾದೇವ್ಯಾಃ ಸ್ವಹಸ್ತಂ ಶಿರಸಿ ನ್ಯಸನ್ ॥೧೪೫॥

ಅಷ್ಟೋತ್ತರ ಶತಂ ಮಂತ್ರಂ ಶಿಷ್ಯೋಽಪಿ ಪ್ರಜಪೇನ್ಮನೇ ।
ದಂಡವತ್ಪ್ರಣಮೇದ್ಭೂಮೌ ತಂ ಗುರುಂ ದೇವತಾತ್ಮಕಂ ॥೧೪೬॥

ಸರ್ವಸ್ವಮರ್ಪಯೇತ್ತಸ್ಮೈ ಯಾವಜ್ಜೀವಮನನ್ಯಧೀಃ ।
ಋತ್ವಿಗ್ಭ್ಯೋ ದಕ್ಷಿಣಾಂ ದತ್ವಾ ಬ್ರಾಹ್ಮಣಾಂಶ್ಚಾಪಿ ಭೋಜಯೇತ್॥೧೪೭॥

ಸುವಾಸಿನೀಃ ಕುಮಾರೀಶ್ಚ ಬಟುಕಾಂಶ್ಚೈವ ಸರ್ವಶಃ ।
ದೀನಾನಾಥಾನ್ ದರಿದ್ರಾಂಶ್ಚ ವಿತ್ತಶಾಠ್ಯವಿವರ್ಜಿತಃ ॥೧೪೮॥

ಕೃತಾರ್ಥತಾಂ ಸ್ವಸ್ಯ ಬುದ್ಧ್ವಾ ನಿತ್ಯಮಾರಾಧಯೇನ್ಮನುಂ ।
ಇತಿ ತೇ ಕಥಿತಃ ಸಮ್ಯಕ್ ದೀಕ್ಷಾವಿಧಿರನುತ್ತಮಃ ॥೧೪೯॥

---

ಅನಂತರ ಗುರುವು ಶಿಷ್ಯನ ತಲೆಯ ಮೇಲೆ ತನ್ನ ಬಲಕೈಯನ್ನು ಇಟ್ಟು, ಮಹಾದೇವಿಯ ಮಹಾಮಂತ್ರವನ್ನು ಅವನ ಬಲಗಿವಿಯಲ್ಲಿ ಮೂರಾವೃತ್ತಿ ಉಪದೇಶಮಾಡಬೇಕು. ||೧೪೫||

ಶಿಷ್ಯನೂ ಸಹ ಆ ಮಂತ್ರವನ್ನು ನೂರೆಂಟುಸಲ ಜಪಮಾಡಿ ದೇವತಾತ್ಮಕನಾದ ಗುರುವನ್ನು ಸಾಷ್ಟಾಂಗ ನಮಸ್ಕಾರಮಾಡಬೇಕು. ||೧೪೬||

ತನ್ನ ಸರ್ವಸ್ವವನ್ನೂ ಗುರುವಿಗೆ ಅರ್ಪಣೆಮಾಡಿ, ಅನನ್ಯಮನಸ್ಕನಾಗಿ ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಟ್ಟು, ಅವರನ್ನೂ ಬ್ರಾಹ್ಮಣರನ್ನೂ ಭೋಜನದಿಂದ ತೃಪ್ತಿಪಡಿಸಬೇಕು. ಹಾಗೆಯೇ, ||೧೪೭||

ಸುವಾಸಿನಿಯರು, ಬಾಲಿಕೆಯರು, ಬ್ರಹ್ಮಚಾರಿಗಳು, ದೀನರು, ಅನಾಥರು, ದರಿದ್ರರು, ಇವರುಗಳನ್ನೂ ಸಹ ಭೋಜನ ದಕ್ಷಿಣಾದಿಗಳಿಂದ ತೃಪ್ತಿಪಡಿಸಬೇಕು. ಜಿಪುಣತನವನ್ನು ಮಾತ್ರ ಖಂಡಿತ ಮಾಡಬಾರದು. ||೧೪೮||

ಈ ರೀತಿಮಾಡಿ ತನ್ನನ್ನು ಕೃತಾರ್ಥನನ್ನಾಗಿ ಭಾವಿಸಿ, ಸ್ಥಿರಚಿತ್ತದಿಂದ ಪ್ರತಿದಿವಸವೂ ಮಂತ್ರವನ್ನು ಆರಾಧಿಸಬೇಕು. ಎಲೈ ನಾರದನೇ, ನಿನಗೆ ಈ ರೀತಿಯಾಗಿ ದೀಕ್ಷಾವಿಧಿಯು ವಿಶದವಾಗಿ ಹೇಳಲ್ಪಟ್ಟಿತು. ||೧೪೯||

ವಿಮೃಶ್ಯೈತದಶೇಷೇಣ ಭಜ ದೇವೀಪದಾಂಬುಜಂ ।
ನಾನ್ಯಸ್ತು ಪರಮೋ ಧರ್ಮೋ ಬ್ರಾಹ್ಮಣಸ್ಯಾತ್ರ ವಿದ್ಯತೇ   ॥೧೫೦॥

ವೈದಿಕಃ ಸ್ವಸ್ಯ ಗೃಹ್ಯೋಕ್ತಕ್ರಮೇಣೋಪದಿಶೇನ್ಮನುಂ ।
ತಾಂತ್ರಿಕಸ್ತಂತ್ರರೀತ್ಯಾತು ಸ್ಥಿತಿರೇಷಾ ಸನಾತನೀ   ॥೧೫೧॥

ತತ್ತದುಕ್ತಪ್ರಯೋಗಾಂಸ್ತೇ ತೇ ತೇ ಕುರ್ಯುರ್ನಚಾನ್ಯಥಾ ।

॥ ನಾರಾಯಣ ಉವಾಚ ॥

ಇತಿ ಸರ್ವಂ ಮಯಾಽಽಖ್ಯಾತಂ ಯತ್ಪೃಷ್ಟಂ ನಾರದ ತ್ವಯಾ॥೧೫೨॥

ಅತಃಪರಂ ಪರಾಂಬಾಯಾ ಭಜ ನಿತ್ಯಂ ಪದಾಂಬುಜಂ ।
ನಿತ್ಯಮಾರಾಧ್ಯ ತಚ್ಚಾಹಂ ನಿರ್ವೃತಿಂ ಪರಮಾಂ ಗತಃ   ॥೧೫೩॥

---

ಮೇಲೆ ಹೇಳಿದ ಸಂಗತಿಯನ್ನೆಲ್ಲವನ್ನೂ ಚನ್ನಾಗಿ ವಿಮರ್ಶಿಸಿ ಪ್ರತಿದಿವಸವೂ ದೇವಿಯನ್ನು ಭಜಿಸುವವನಾಗು. ಇದನ್ನು ಬಿಟ್ಟರೆ ಬ್ರಾಹ್ಮಣನಿಗೆ ಬೇರೆ ಉತ್ತಮವಾದ ಧರ್ಮವು ಯಾವುದೂ ಇರುವುದಿಲ್ಲ. ॥೧೫೦॥

ವೈದಿಕರೀತ್ಯಾ ಸ್ವಸ್ವಗೃಹ್ಯೋಕ್ತ ವಿಧಾನದಿಂದ ಗುರುವು ವೈದಿಕ ಪ್ರಯೋಗಗಳನ್ನು ಮಾಡಬೇಕು. ಕುಂಡಮಂಡಪಾದಿ ಪುರಸ್ಸರವಾಗಿ ತಂತ್ರೋಕ್ತಪ್ರಕಾರದಿಂದ ದೀಕ್ಷೆವಹಿಸಿರತಕ್ಕವನು ತಾಂತ್ರಿಕಪ್ರಯೋಗಗಳನ್ನು ಮಾಡಬೇಕು. ಇದೇ ಸನಾತನವಾದ ಧರ್ಮವು. ॥೧೫೧॥

ಆಯಾ ಗೃಹ್ಯೋಕ್ತ ಪ್ರಕಾರಗಳಿಂದ ಅವರವರು ಆ ಪ್ರಯೋಗಗಳ ಆಚರಣೆಯನ್ನು ನಡೆಸಬೇಕು.

ಪರಮಾತ್ಮನು ಹೇಳಿದನು---ಎಲೈ ನಾರದನೇ, ನಿನ್ನಿಂದ ಕೇಳಲ್ಪಟ್ಟ ವಿಷಯಗಳೆಲ್ಲವೂ ನನ್ನಿಂದ ಹೇಳಲ್ಪಟ್ಟಿತು. ॥೧೫೨॥

ಎಲೈ ನಾರದನೇ, ನೀನೂ ಪ್ರತಿನಿತ್ಯವೂ ಆ ಪರಾಂಬಿಕೆಯ ಪಾದಪದ್ಮಗಳನ್ನು ಭಕ್ತಿಯಿಂದ ಭಜಿಸು. ನಾನೂ ಪ್ರತಿನಿತ್ಯವೂ ಆ ದೇವಿಯ ಪಾದಪದ್ಮಗಳನ್ನೂ ಭಜಿಸುತ್ತಾ ಅದರಿಂದ ಅತ್ಯಂತ ಸೌಖ್ಯವನ್ನು ಹೊಂದಿದ್ದೇನೆ. ॥೧೫೩॥

|| ವ್ಯಾಸ ಉವಾಚ ||

ಇತಿ ರಾಜನ್ನಾರದಾಯ ಪ್ರೋಕ್ತ್ವಾ ಸರ್ವಮನುತ್ತಮಂ ।
ಸಮಾಧಿಮೀಲಿತಾಕ್ಷಸ್ತು ದಧ್ಯೌ ದೇವೀಪದಾಂಬುಜಂ ॥೧೫೪॥

ನಾರಾಯಣಸ್ತು ಭಗವಾನ್ ಮುನಿವರ್ಯ ಶಿಖಾಮಣಿಃ ।
ನಾರದೋಽಪಿ ತತೋ ನತ್ವಾ ಗುರುಂ ನಾರಾಯಣಂ ಪರಂ ।
ಜಗಾಮ ಸದ್ಯಸ್ತಪಸೇ ದೇವೀದರ್ಶನಲಾಲಸಃ ॥೧೫೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಸಪ್ತಮೋಽಧ್ಯಾಯಃ

---

ವ್ಯಾಸರು ಹೇಳಿದರು—ಎಲೈ ಜನಮೇಜಯನೇ, ಶ್ರೀಮನ್ನಾರಾಯಣನು ನಾರದನಿಗೆ ಸರ್ವೋತ್ತಮವಾದ ದೀಕ್ಷಾವಿಧಿಯನ್ನು ಉಪದೇಶಿಸಿ ಕಣ್ಣುಗಳನ್ನು ಮುಚ್ಚಿಕೊಂಡು, ದೇವಿಯ ಪದಕಮಲಗಳನ್ನು ಧ್ಯಾನಮಾಡುತ್ತಾ ಭಾವಸಮಾಧಿಯಲ್ಲಿ ಕುಳಿತನು. ||೧೫೪||

ಮುನಿಶ್ರೇಷ್ಠನಾದ ನಾರಾಯಣನು ದೇವೀಧ್ಯಾನತತ್ಪರನಾದ ಮೇಲೆ ಆ ಪರಮ ಗುರುವಾದ ನಾರಾಯಣನನ್ನು ಭಕ್ತಿಯಿಂದ ನಮಸ್ಕರಿಸಿ, ಪರಮ ಪೂಜ್ಯನಾದ ನಾರದನೂ ಸಹ ದೇವಿಯ ಚರಣಾರವಿಂದಗಳ ದರ್ಶನದಲ್ಲಿ ಉತ್ಸುಕನಾಗಿ ತಪಸ್ಸಿಗೆ ಹೊರಟು ಹೋದನು. ||೧೫೫||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

### || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರವತಾಂ (ವಿದಾಂ) ವರ ।**
**ದ್ವಿಜಾತೀನಾಂ ತು ಸರ್ವೇಷಾಂ ಶಕ್ತ್ಯುಪಾಸ್ತಿಃ ಶ್ರುತೀರಿತಾ ॥೧॥**

---

ಈ ಅಧ್ಯಾಯದಲ್ಲಿ ತೊಂಬತ್ತೊಂದೂವರೆ ಶ್ಲೋಕಗಳಿಂದ ಕೇನೋಪನಿಷತ್ತಿನ ಕಥೆಯ ವಿವರಣೆಯನ್ನು ಮಾಡಲಾಗುತ್ತದೆ. ಈ ಮಹಾಪುರಾಣದಲ್ಲಿ ಇಲ್ಲಿಯ ಪರಿಯಂತವಾಗಿ ಸಮಸ್ತ ದೇವತೆಗಳೂ, ಋಷಿಗಳೂ, ಮನುಜರೂ ಶ್ರೀ ದೇವಿಯನ್ನೇ ಪೂಜಿಸಬೇಕೆಂದು ಹೇಳಿದುದನ್ನು ಕೇಳಿ ಪ್ರಪಂಚದಲ್ಲಿ ಜನರು ನಿತ್ಯವಾದ ಶ್ರೀ ದೇವಿಯ ಉಪಾಸನೆಯನ್ನು ಬಿಟ್ಟು, ವಿಷ್ಣು, ಶಿವ, ಗಣೇಶ ಮೊದಲಾದ ದೇವತೋಪಾಸನೆಯನ್ನು ಮಾಡುತ್ತಿರುವುದನ್ನು ನೋಡಿ ಆಶ್ಚರ್ಯವನ್ನು ಹೊಂದಿದ ಜನಮೇಜಯರಾಜನು ಪ್ರಶ್ನೆ ಮಾಡುವನು. ಓ ಸಮಸ್ತ ಧರ್ಮಗಳನ್ನೂ ತಿಳಿದಿರುವ ಶಾಸ್ತ್ರಜ್ಞರಲ್ಲಿ ಶ್ರೇಷ್ಠನಾದ ಮಹಾ ಜ್ಞಾನಿಯಾದ ವ್ಯಾಸಮಹಾಮುನಿಯೇ, ದ್ವಿಜರಾದ ಬ್ರಹ್ಮ ಕ್ಷತ್ರಿಯ ವೈಶ್ಯವರ್ಣದವರು “ ಅಹರಹಃ ಸಂಧ್ಯಾಮುಪಾಸೀತ ” ಎಂಬ ವೇದ ನಿಯಮದಿಂದ ಶಕ್ತಿದೇವಿಯಾದ ಗಾಯತ್ರಿಯ ಉಪಾಸನೆಯನ್ನು ಮಾಡಬೇಕು. ಹಾಗೆ ಸಂಧ್ಯೋಪಾಸನೆಯನ್ನು ಮಾಡದೆ ಹೋದರೆ ಪ್ರತ್ಯವಾಯವೂ, ಆ ಪಾಪಪರಿಹಾರಕ್ಕಾಗಿ ಪ್ರಾಯಶ್ಚಿತ್ತವೂ ಉಂಟಾಗುವುದು. ಎಂದು ವೇದದಲ್ಲಿ ಹೇಳಿರುವುದು. ಶಿವ ವಿಷ್ಣೂಪಾಸನೆಗಳಿಗೆ ನಿತ್ಯತ್ವವನ್ನು ಹೇಳುವ ಶ್ರುತಿಯು ಇರುವುದಿಲ್ಲ. ಆದುದರಿಂದ ಗಾಯತ್ರಿಯ ಉಪಾಸನೆಯೇ ನಿತ್ಯವಾದುದೆಂದು ಹೇಳಿದಂತಾಯಿತು. ||೧||

ಸಂಧ್ಯಾಕಾಲತ್ರಯೇಽನ್ಯಸ್ಮಿನ್ಕಾಲೇ ನಿತ್ಯತಯಾ ವಿಭೋ ।
ತಾಂ ವಿಹಾಯ ದ್ವಿಜಾಃ ಕಸ್ಮಾದ್ಗೃಹ್ಣೀಯುಶ್ಚಾನ್ಯದೇವತಾಃ ॥೨॥

ದೃಶ್ಯಂತೇ ವೈಷ್ಣವಾಃ ಕೇಚಿತ್ ಗಾಣಪತ್ಯಾಸ್ತಥಾಪರೇ ।
ಕಾಪಾಲಿಕಾಶ್ಚೀನಮಾರ್ಗರತಾ ವಲ್ಕಲಧಾರಿಣಃ ॥೩॥

ದಿಗಂಬರಾಸ್ತಥಾ ಬೌದ್ಧಾಶ್ಚಾರ್ವಾಕಾ ಏವಮಾದಯಃ ।
ದೃಶ್ಯಂತೇ ಬಹವೋ ಲೋಕೇ ವೇದಶ್ರದ್ಧಾವಿವರ್ಜಿತಾಃ ॥೪॥

ಕಿಮತ್ರ ಕಾರಣಂ ಬ್ರಹ್ಮಂಸ್ತದ್ಭವಾನ್ವಕ್ತುಮರ್ಹತಿ ।
ಬುದ್ಧಿಮಂತಃ ಪಂಡಿತಾಶ್ಚ ನಾನಾತರ್ಕವಿಚಕ್ಷಣಾಃ ॥೫॥

ಅಪಿ ಸಂತ್ಯೇವ ವೇದೇಷು ಶ್ರದ್ಧಯಾ ತು ವಿವರ್ಜಿತಾಃ ।
ನ ಹಿ ಕಶ್ಚಿತ್ಸ್ವಕಲ್ಯಾಣಂ ಬುದ್ಧ್ಯಾ ಹಾತುಮಿಹೇಚ್ಛತಿ ॥೬॥

---

ಓ ಗುರುವಾದ ವ್ಯಾಸಮುನಿಯೇ, ಗಾಯತ್ರಿಯು ನಿತ್ಯವಾದ ಇಷ್ಟದೇವತೆಯಾದುದರಿಂದ ಮೂರು ಸಂಧ್ಯಾಕಾಲಗಳಲ್ಲಿಯೂ, ಇತರ ಕಾಲಗಳಲ್ಲಿಯೂ ಸಹ ಆ ದೇವಿಯನ್ನೇ ಉಪಾಸನೆಮಾಡಬೇಕೆಂದು ನಾಲ್ಕು ವೇದಗಳೂ ಹೇಳುವುವು. ಇತರ ದೇವತೆಗಳು ಗಾಯತ್ರೀದೇವತೆಯ ಅಂಗಭೂತರಾದವರು ಎಂದು "ಬ್ರಹ್ಮಾ ಶಿರೋ ವಿಷ್ಣುರ್ಹೃದಯಂ ರುದ್ರಃ ಶಿಖಾ" ಇತ್ಯಾದಿ ಸಂಧ್ಯಾಮಂತ್ರಗಳಿಂದ ವ್ಯಕ್ತವಾಗುತ್ತಿರುವುದು. ಸ್ತ್ರೀತ್ವವಿಶಿಷ್ಟವಾದ ಪರಾಶಕ್ತಿಯೇ ಗಾಯತ್ರೀ ದೇವತೆಯು. ಗಾಯತ್ರೀಮಂತ್ರದಿಂದ ಸಕಲ ದ್ವಿಜರೂ ತಮ್ಮ ಇಷ್ಟದೇವತೆಯಾದ ಗಾಯತ್ರೀ ದೇವಿಯನ್ನೇ ಉಪಾಸನೆಮಾಡಬೇಕೆಂದಿರುವಲ್ಲಿ, ಯಾವ ಕಾರಣದಿಂದ ಆ ದೇವಿಯನ್ನು ಬಿಟ್ಟು ಇತರ ದೇವತೆಗಳನ್ನು ಉಪಾಸನೆ ಮಾಡುವರು? ॥೨॥

ನಾವು ವೈಷ್ಣವರು, ನಾವು ಗಣಪತ್ಯುಪಾಸಕರು, ನಾವು ಕಾಪಾಲಿಕರು, ನಾವು ಚೀನದೇಶದವರ ಮಾರ್ಗವನ್ನನುಸರಿಸುವವರು, ಎಂದು ಹೇಳುವ ಅನೇಕ ಜನರು ಕಾಣುತ್ತಿರುವರು. ॥೩॥

ಜೈನರು, ಬೌದ್ಧರು, ಚಾರ್ವಾಕರೇ ಮೊದಲಾದವರು ವೇದದಲ್ಲಿ ನಂಬಿಕೆಯಿಲ್ಲದವರಾದ ಅನೇಕರು ಲೋಕದಲ್ಲಿ ಕಾಣುತ್ತಿರುವರು. ॥೪॥

ಓ ಬ್ರಹ್ಮಜ್ಞಾನಿಯಾದ ವ್ಯಾಸಮುನಿಯೇ, ಬುದ್ಧಿವಂತರೂ, ಜ್ಞಾನಿಗಳೂ, ಬಗೆಬಗೆಯ ಶಾಸ್ತ್ರಯುಕ್ತಿಗಳಿಂದ ವಾದಮಾಡುವ ತಿಳಿವಳಿಕೆಯುಳ್ಳವರೂ ಆಗಿ

ಕಿಮತ್ರಕಾರಣಂ ತಸ್ಮಾದ್ವದ ವೇದವಿದಾಂ ವರ ।
ಮಣಿದ್ವೀಪಸ್ಯ ಮಹಿಮಾ ವರ್ಣಿತೋ ಭವತಾ ಪುರಾ ॥೭॥

ಕೀದೃಕ್ತದಸ್ತಿಯದ್ದೇವ್ಯಾಃ ಪರಂ ಸ್ಥಾನಂ ಮಹತ್ತರಂ ।
ತಚ್ಚಾಪಿ ವದ ಭಕ್ತಾಯ ಶ್ರದ್ದಧಾನಾಯ ಮೇಽನಘ ॥೮॥

ಪ್ರಸನ್ನಾಸ್ತು ವದಂತ್ಯೇವ ಗುರವೋ ಗುಹ್ಯಮಪ್ಯುತ ।

॥ ಸೂತ ಉವಾಚ ॥

ಇತಿರಾಜ್ಞೋ ವಚಃಶ್ರುತ್ವಾ ಭಗವಾನ್ ಬಾದರಾಯಣಃ ॥೯॥

ನಿಜಗಾದ ತತಃ ಸರ್ವಂ ಕ್ರಮೇಣೈವ ಮುನೀಶ್ವರಾಃ ।
ಯಚ್ಛ್ರುತ್ವಾ ತು ದ್ವಿಜಾತೀನಾಂ ವೇದಶ್ರದ್ಧಾ ವಿವರ್ಧತೇ ॥೧೦॥

---

ದ್ವರೂ ಕೂಡ ವೇದದಲ್ಲಿ ನಂಬಿಕೆಯಿಲ್ಲದಿರಲು ಕಾರಣವೇನೆಂಬುದನ್ನು ನನಗೆ ಹೇಳಬೇಕು. ತನಗೆ ಒಳ್ಳೆಯದನ್ನುಂಟುಮಾಡುವ ಮಾರ್ಗವನ್ನು ತಿಳಿದ ಯಾವನು ತಾನೇ ಮನಃಪೂರ್ವಕವಾಗಿ ಅದನ್ನು ಬಿಡಲು ಅಪೇಕ್ಷಿಸುವನು ? ಮಂಗಳಕರವಾದ ವೇದಮಾರ್ಗವನ್ನು ಬಿಟ್ಟು, ಅನ್ಯಮಾರ್ಗವನ್ನವಲಂಬಿಸುವುದಕ್ಕೆ ಪ್ರಬಲವಾದ ಕಾರಣವೇನೆಂಬುದನ್ನು ನನಗೆ ಹೇಳು. ॥೫-೬॥

ಇದೂ ಅಲ್ಲದೆ ಮೂರನೆಯ ಸ್ಕಂಧದಲ್ಲಿ ಹೆಚ್ಚಾಗಿಯೂ, ಅದು ಮೊದಲುಗೊಂಡು ಹನ್ನೆರಡನೆಯ ಸ್ಕಂಧದವರೆಗೂ ಅಲ್ಲಲ್ಲಿ ಮಣಿದ್ವೀಪದ ಮಹಿಮೆಯನ್ನು ನೀನು ವರ್ಣನೆಮಾಡಿ ಹೇಳಿರುವೆ. ಆ ದೇವಿಯ ಉತ್ತಮವಾದ ಮಣಿದ್ವೀಪವು ಹೇಗಿರುವುದು ? ಅದನ್ನೂ ಕೂಡ ಭಕ್ತಿಯೂ, ವೇದಮಾರ್ಗದಲ್ಲಿ ನಂಬಿಕೆಯೂ, ಉಳ್ಳ ನನಗೆ ಹೆಚ್ಚಿನ ವಿವರಗಳೊಡನೆ ಹೇಳಬೇಕು. ಗುರುಗಳು ಶಿಷ್ಯನಿಗೆ ಅನುಗ್ರಹಿಸಬೇಕೆಂಬ ಸಂತೋಷದಿಂದ ಕೂಡಿದ್ದರೆ ಅತ್ಯಂತ ಗುಟ್ಟಾದ ವಿಷಯವನ್ನೂ ಕೂಡ ಹೇಳಿಯೇ ಬಿಡುವರು. ॥೭-೮॥

ಸೂತನು ಹೇಳಿದನು—ಎಲೈ ಮುನಿಗಳೇ, ಕೇಳಿರಿ. ಹೀಗೆಂದು ಹೇಳಿದ ಜನಮೇಜಯರಾಜನ ಮಾತನ್ನು ಕೇಳಿ ಮಹಾಮಹಿಮರಾದ ವ್ಯಾಸರು ಕ್ರಮವಾಗಿ ರಾಜನು ಕೇಳಿದ ಪ್ರಶ್ನೆಗಳಿಗೆಲ್ಲಕ್ಕೂ ಉತ್ತರಗಳನ್ನು ಹೇಳಿದರು. ಅವರು ಹೇಳಿದ ಉತ್ತರಗಳನ್ನು ಕೇಳಿದರೆ ದ್ವಿಜರಿಗೆ ವೇದದಲ್ಲಿ ನಂಬಿಕೆಯು ಅಭಿವೃದ್ಧಿಯಾಗುವುದು. ॥೯-೧೦॥

|| ವ್ಯಾಸ ಉವಾಚ ||

ಸಮ್ಯಕ್ಪೃಷ್ಟಂ ತ್ವಯಾ ರಾಜನ್ಸಮಯೇ ಸಮಯೋಚಿತಂ ।
ಬುದ್ಧಿಮಾನಸಿ ವೇದೇಷು ಶ್ರದ್ಧಾವಾಂಶ್ಚೈವ ಲಕ್ಷ್ಯಸೇ ||೧೧||

ಪೂರ್ವಂ ಮದೋದ್ಧತಾ ದೈತ್ಯಾದೇವೈರ್ಯುದ್ಧಂ ತು ಚಕ್ರಿರೇ ।
ಶತವರ್ಷಂ ಮಹಾರಾಜ ಮಹಾ ವಿಸ್ಮಯಕಾರಕಂ ||೧೨||

ನಾನಾ ಶಸ್ತ್ರಪ್ರಹರಣಂ ನಾನಾ ಮಾಯಾ ವಿಚಿತ್ರಿತಂ ।
ಜಗತ್ಕ್ಷಯಕರಂ ನೂನಂ ತೇಷಾಂ ಯುದ್ಧಮಭೂನ್ನೃಪ ||೧೩||

ಪರಾಶಕ್ತಿಕೃಪಾವೇಶಾದ್ದೇವೈರ್ದೈತ್ಯಾ ಜಿತಾ ಯುಧಿ ।
ಭುವಂ ಸ್ವರ್ಗಂ ಪರಿತ್ಯಜ್ಯ ಗತಾಃ ಪಾತಾಲ ವೇಶ್ಮನಿ ||೧೪||

ತತಃ ಪ್ರಹರ್ಷಿತಾಃ ದೇವಾಃ ಸ್ವಪರಾಕ್ರಮ ವರ್ಣನಂ ।
ಚಕ್ರುಃ ಪರಸ್ಪರಂ ಮೋಹಾತ್ಸಾಭಿಮಾನಾಃ ಸಮಂತತಃ ||೧೫||

---

ವ್ಯಾಸರು ಹೇಳಿದರು—ಎಲೈ ರಾಜನೇ, ನೀನು ಒಳ್ಳೆಯ ಸಮಯದಲ್ಲಿ ಕಾಲಕ್ಕೆ ತಕ್ಕ ಉತ್ತಮವಾದ ಪ್ರಶ್ನೆಯನ್ನು ಕೇಳಿರುವೆ. ಇದರಿಂದ ನೀನು ಬುದ್ಧಿವಂತನೆಂದೂ, ವೇದಮಾರ್ಗದಲ್ಲಿ ನಂಬಿಕೆಯುಳ್ಳವನೆಂದೂ ನನಗೆ ಕಾಣಿಸುತ್ತಿರುವೆ. ||೧೧||

ಈ ಕಥೆಯನ್ನು ಕೇನೋಪನಿಷತ್ತಿನಲ್ಲಿ ಹೇಳಿರುತ್ತದೆ. ಹಿಂದೆ ಒಂದಾನೊಂದು ಕಾಲದಲ್ಲಿ ದೈತ್ಯರು ಮದಿಸಿದವರಾಗಿ ದೇವತೆಗಳೊಡನೆ ಒಂದುನೂರು ವರ್ಷಗಳವರೆಗೆ ಆಶ್ಚರ್ಯಕರವಾದ ಯುದ್ಧವನ್ನು ಮಾಡಿದರು. ||೧೨||

ಓ ರಾಜನೇ, ಆ ದೇವದಾನವರ ಯುದ್ಧವು ಬಗೆಬಗೆಯ ಆಯುಧಗಳ ಏಟಿನಿಂದಲೂ, ಮಾಯಾ ಕಾರ್ಯಗಳಿಂದ ವಿಚಿತ್ರವಾದುದಾಗಿಯೂ, ಲೋಕಕ್ಕೆ ನಾಶವನ್ನುಂಟುಮಾಡತಕ್ಕದ್ದಾಗಿಯೂ ನಡೆಯಿತು. ||೧೩||

ಮಹಾ ಮಹಿಮಳಾದ ಭುವನೇಶ್ವರೀ ದೇವಿಯ ಅನುಗ್ರಹದಿಂದ ದೇವತೆಗಳು ದೈತ್ಯರನ್ನು ಜಯಿಸಿದರು. ಆಮೇಲೆ ದೈತ್ಯರು ಭೂಮಿಯನ್ನೂ, ಸ್ವರ್ಗಲೋಕವನ್ನೂ ಬಿಟ್ಟು ಪಾತಾಳಲೋಕಕ್ಕೆ ಹೊರಟು ಹೋದರು. ||೧೪||

ದೇವಿಯ ಅನುಗ್ರಹದಿಂದ ಜಯವನ್ನು ಪಡೆದು ಸಂತೋಷಪಡುತ್ತಿರುವ

ಜಯೋಽಸ್ಮಾಕಂ ಕುತೋ ನ ಸ್ಯಾದಸ್ಮಾಕಂ ಮಹಿಮಾ ಯತಃ ।
ಸರ್ವೋತ್ತರಃ ಕುತೋ(ತ್ರ)ದೈತ್ಯಾಃ ಪಾಮರಾ ನಿಷ್ಪರಾಕ್ರಮಾಃ॥೧೬॥

ಸೃಷ್ಟಿಸ್ಥಿತಿಕ್ಷಯಕರಾ ವಯಂ ಸರ್ವೇ ಯಶಸ್ವಿನಃ ।
ಅಸ್ಮದಗ್ರೇ ಪಾಮರಾಣಾಂ ದೈತ್ಯಾನಾಂ ಚೈವ ಕಾ ಕಥಾ ॥೧೭॥

ಪರಾಶಕ್ತಿಪ್ರಭಾವಂ ತೇ ನ ಜ್ಞಾತ್ವಾ ಮೋಹಮಾಗತಾಃ ।
ತೇಷಾಮನುಗ್ರಹಂ ಕರ್ತುಂ ತದೈವ ಜಗದಂಬಿಕಾ ॥೧೮॥

ಪ್ರಾದುರಾಸೀತ್ಕೃಪಾಪೂರ್ಣಾ ಯಕ್ಷರೂಪೇಣ ಭೂಮಿಪ ।
ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸುಶೀತಲಂ ॥೧೯॥

ವಿದ್ಯುತ್ಕೋಟಿಸಮಾನಾಭಂ ಹಸ್ತಪಾದಾದಿ ವರ್ಜಿತಂ ।
ಅದೃಷ್ಟಪೂರ್ವಂ ತದ್ದೃಷ್ಟ್ವಾ ತೇಜಃ ಪರಮಸುಂದರಂ ॥೨೦॥
ಸವಿಸ್ಮಯಾಸ್ತದಾ ಪ್ರೋಚುಃ ಕಿಮಿದಂ ಕಿಮಿದಂ ತ್ವಿತಿ ।

---

ದೇವತೆಗಳು ಅಜ್ಞಾನದಿಂದ ದೇವಿಯ ಅನುಗ್ರಹವನ್ನು ಮರೆತು ಸ್ವಾಭಿಮಾನದಿಂದ ತಮ್ಮ ಪರಾಕ್ರಮವನ್ನೇ ವಿಶೇಷವಾಗಿ ವರ್ಣನೆಮಾಡಿಕೊಂಡರು. ॥೧೫॥

ಅತ್ಯುತ್ತಮವಾದ ನಮ್ಮ ಮಹಿಮೆಯಿಂದಲೇ ನಮಗೆ ಜಯವಾಯಿತು. ಅಜ್ಞಾನಿಗಳೂ, ಪರಾಕ್ರಮವಿಹೀನರೂ, ಆದ ದೈತ್ಯರು ನಮ್ಮೆದುರಿಗೆ ಎಲ್ಲಿ ನಿಂತಾರು ? ನಾವು ಪ್ರಪಂಚವನ್ನು ಸೃಷ್ಟಿಮಾಡಿ, ಕಾಪಾಡಿ, ನಾಶವನ್ನೂ ಮಾಡಬಲ್ಲ ಕೀರ್ತಿಯುಳ್ಳವರು. ಹೀಗೆಂದು ಹೇಳುತ್ತ, ॥೧೬-೧೭॥

ಅತ್ಯುತ್ತಮಶಕ್ತಿಸಂಪನ್ನಳಾದ ಆ ಭುವನೇಶ್ವರೀದೇವಿಯ ಮಹಿಮೆಯನ್ನು ತಿಳಿಯದೆ ಅಜ್ಞಾನವನ್ನು ಹೊಂದಿದರು.

ರಾಜನೇ ಕೇಳು, ಇಂತಹ ಅಜ್ಞಾನಿಗಳಾದ ದೇವತೆಗಳಿಗೆ ಅನುಗ್ರಹಮಾಡಬೇಕೆಂದು ಜಗದಂಬೆಯು ಅವರ ಮೇಲೆ ಅತ್ಯಂತ ದಯೆಯಿಂದ ಕೂಡಿ, ಯಕ್ಷರೂಪದಿಂದ ಪ್ರತ್ಯಕ್ಷಳಾದಳು. ಯಕ್ಷನೆಂದರೆ ಪೂಜ್ಯವಾದ ತೇಜಸ್ಸು. ॥೧೮॥

ಭಕ್ತರಲ್ಲಿ ಪ್ರೀತಿಯುಳ್ಳ ಆ ದೇವಿಯು ಕೋಟಿಸೂರ್ಯರ ಸಮಾನವಾದ ತೇಜಸ್ಸಿನಿಂದ ಕೂಡಿ, ಕೋಟಿಚಂದ್ರರಷ್ಟು ತಂಪಾದ ಕಿರಣದಿಂದ ಕೂಡಿ, ಕೋಟಿ ಮಿಂಚುಗಳಂತೆ ಹೊಳೆಯುತ್ತ ಕೈಕಾಲು ಮುಂತಾದ ಅವಯವಗಳೊಂದೂ ಇಲ್ಲದೆ

ದೈತ್ಯಾನಾಂ ಚೇಷ್ಟಿತಂ ಕಿಂ ವಾ ಮಾಯಾ ಕಾಽಪಿ ಮಹೀಯಸೀ ॥೨೦॥

ಕೇನಚಿನ್ನಿರ್ಮಿತಾ ವಾಽಥ ದೇವಾನಾಂ ಸ್ಮಯಕಾರಿಣೀ ।
ಸಂಭೂಯ ತೇ ತದಾ ಸರ್ವೇ ವಿಚಾರಂ ಚಕ್ರುರುತ್ತಮಂ ॥೨೨॥

ಯಕ್ಷಸ್ಯ ನಿಕಟೇ ಗತ್ವಾ ಪ್ರಷ್ಟವ್ಯಂ ಕಸ್ತ್ವಮಿತ್ಯಪಿ ।
ಬಲಾಬಲಂ ತತೋ ಜ್ಞಾತ್ವಾ ಕರ್ತವ್ಯಾ ತು ಪ್ರತಿಕ್ರಿಯಾ ॥೨೩॥

ತತೋ ವಹ್ನಿಂ ಸಮಾಹೂಯ ಪ್ರೋವಾಚೇಂದ್ರಃ ಸುರಾಧಿಪಃ ।
ಗಚ್ಛ ವಹ್ನೇ ತ್ವಮಸ್ಮಾಕಂ ಯತೋಽಸಿ ಮುಖಮುತ್ತಮಂ ॥೨೪॥

ತತೋ ಗತ್ವಾ ತು ಜಾನೀಹಿ ಕಿಮಿದಂ ಯಕ್ಷಮಿತ್ಯಪಿ ।
ಸಹಸ್ರಾಕ್ಷವಚಃ ಶ್ರುತ್ವಾ ಸ್ವಪರಾಕ್ರಮಗರ್ಭಿತಂ ॥೨೫॥
ವೇಗಾತ್ಸನಿರ್ಗತೋ ವಹ್ನಿರ್ಯಯೌ ಯಕ್ಷಸ್ಯ ಸನ್ನಿಧೌ ।

---

ಕೇವಲ ತೇಜೋರಾಶಿ ರೂಪವಾಗಿ ಪ್ರಕಾಶಿಸುತ್ತಿದ್ದಳು. ದೇವತೆಗಳು ಹಿಂದೆ ಎಂದೂ ಕಾಣದ ಅತ್ಯಂತ ಸುಂದರವಾದ ಆ ತೇಜಸ್ಸನ್ನು ನೋಡಿ ಅತ್ಯಂತ ಆಶ್ಚರ್ಯದಿಂದ ಇದೇನು? ಇದೇನು? ಎಂದು ತಮ್ಮತಮ್ಮಲ್ಲಿ ಮಾತನಾಡಿಕೊಂಡರು. ॥೧೯-೨೦॥

ಆಗ ದೇವತೆಗಳೆಲ್ಲರೂ ಸೇರಿ ಈ ತೇಜೋರೂಪವು ರಾಕ್ಷಸರ ಚೇಷ್ಟೆಯಿಂದ ಕಲ್ಪಿತವಾಯಿತೋ? ಮತ್ತೆ ಯಾರಾದರೂ ಮಾಯಾ ವಿದ್ಯೆಯಿಂದ ಇದನ್ನು ನಿರ್ಮಿಸಿರುವರೋ? ನಮಗೆ ಆಶ್ಚರ್ಯಕರವಾಗಿರುವುದು! ಎಂದು ತಿಳಿದು ಇನ್ನೂ ಚನ್ನಾಗಿ ವಿಚಾರ ಮಾಡಲು ಬಯಸಿದರು. ಅದೆಂತೆಂದರೆ, ॥೨೧-೨೨॥

ಆ ಯಕ್ಷನ ಸಮೀಪಕ್ಕೆ ಹೋಗಿ ನೀನು ಯಾರೆಂದು ಕೇಳಬೇಕು. ಆಮೇಲೆ ಬಲಾಬಲಗಳನ್ನು ತಿಳಿದು ತಕ್ಕ ಪ್ರತೀಕಾರವನ್ನು ಮಾಡಬೇಕು, ಎಂದು ನಿಶ್ಚಯಿಸಿದರು. ॥೨೩॥

ಆ ಬಳಿಕ, ದೇವರಾಜನಾದ ದೇವೇಂದ್ರನು ಅಗ್ನಿಯನ್ನು ಕರೆದು, ಎಲೈ ಅಗ್ನಿಯೇ, ನೀನು ದೇವತೆಗಳಾದ ನಮಗೆಲ್ಲರಿಗೂ ಮುಖಸ್ವರೂಪನು; ಆದುದರಿಂದ ನೀನು ಹೋಗಿ ಈ ಯಕ್ಷನು ಯಾರೆಂಬುದನ್ನು ತಿಳಿ. ಎಂದು ಹೇಳಿದನು. ॥೨೪॥

ತನ್ನ ಪರಾಕ್ರಮವನ್ನೊಳಗೊಂಡ ದೇವೇಂದ್ರನ ಮಾತನ್ನು ಕೇಳಿ, ಅಗ್ನಿಯು

ತದಾ ಪ್ರೋವಾಚ ಯಕ್ಷ ಸ್ತಂ ತ್ವಂ ಕೋಽಸೀತಿ ಹುತಾಶನಂ ॥೨೬॥

ವೀರ್ಯಂ ಚ ತ್ವಯಿ ಕಿಂ ಯತ್ತದ್ವದ ಸರ್ವಂ ಮಮಾಗ್ರತಃ ।
ಅಗ್ನಿರಸ್ಮಿ ತಥಾ ಜಾತವೇದಾ ಅಸ್ಮೀತಿ ಸೋಽಬ್ರವೀತ್ ॥೨೭॥

ಸರ್ವಸ್ಯ ದಹನೇ ಶಕ್ತಿರ್ಮಯಿ ವಿಶ್ವಸ್ಯ ತಿಷ್ಠತಿ ।
ತದಾ ಯಕ್ಷಂ ಪರಂ ತೇಜಸ್ತದಗ್ರೇ ನಿದಧೌ ತೃಣಂ ॥೨೮॥

ದಹೈನಂ ಯದಿ ತೇ ಶಕ್ತಿರ್ವಿಶ್ವಸ್ಯ ದಹನೇಽಸ್ತಿ ಹಿ ।
ತದಾ ಸರ್ವಬಲೇನೈವಾಽಕರೋದ್ಯತ್ನಂ ಹುತಾಶನಃ ॥೨೯॥

ನ ಶಶಾಕ ತೃಣಂ ದಗ್ಧುಂ ಲಜ್ಜಿತೋಽಗಾತ್ಸುರಾನ್ಪ್ರತಿ ।
ಪೃಷ್ಟೇ ದೇವೈಸ್ತು ವೃತ್ತಾಂತೇ ಸರ್ವಂ ಪ್ರೋವಾಚ ಹವ್ಯಭುಕ್॥೩೦॥

ವೃಥಾಭಿಮಾನೋಹ್ಯಸ್ಮಾಕಂ ಸರ್ವೇಶತ್ವಾದಿಕೇ ಸುರಾಃ ।
ತತಸ್ತು ವೃತ್ರಹಾ ವಾಯುಂ ಸಮಾಹೂಯೇದಮಬ್ರವೀತ್ ॥೩೧॥

---

ವೇಗವಾಗಿ ಆ ಯಕ್ಷನ ಸಮೀಪಕ್ಕೆ ಹೋದನು. ಆಗ ನೀನು ಯಾರೆಂದು ಆ ಯಕ್ಷನು ಅಗ್ನಿಯನ್ನು ಕೇಳಿದನು. ॥೨೫-೨೬॥

ಮತ್ತು ನಿನ್ನಲ್ಲಿರುವ ಶಕ್ತಿಯೇನು? ಅದನ್ನು ನನ್ನೆದುರಿಗೆ ಹೇಳು. ಎನ್ನುತ್ತಲು, ನಾನು ಅಗ್ನಿಯು, ಜಾತವೇದನೆಂದೂ ನನಗೆ ಹೆಸರಿರುವುದು. ಈ ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳನ್ನೂ ಸುಟ್ಟುಬಿಡುವ ಶಕ್ತಿಯು ನನ್ನಲ್ಲಿರುವುದು, ಎಂದು ಅಗ್ನಿಯು ಹೇಳಿದನು. ॥೨೭॥

ಆಗ ಶ್ರೇಷ್ಠವಾದ ತೇಜೋರೂಪವಾದ ಯಕ್ಷನು ಅಗ್ನಿಯ ಇದುರಿಗೆ ಒಂದು ಹುಲ್ಲುಕಡ್ಡಿಯನ್ನು ಹಾಕಿ, ಪ್ರಪಂಚವನ್ನೇ ಸುಡುವ ಶಕ್ತಿಯು ನಿನ್ನಲ್ಲಿದ್ದರೆ ಈ ಕಡ್ಡಿಯನ್ನು ಸುಡು, ಎಂದನು. ಆಗ ಅಗ್ನಿಯು ತನ್ನ ಸಮಸ್ತ ಶಕ್ತಿಯನ್ನೂ ಉಪಯೋಗಿಸಿ ಆ ಕಡ್ಡಿಯನ್ನು ಸುಡಲು ಪ್ರಯತ್ನಮಾಡಿ ಸಾಧ್ಯವಾಗದೆ ನಾಚಿಕೆಯಿಂದ ದೇವತೆಗಳ ಸಮೀಪಕ್ಕೆ ಹೋಗಿ, ಎಲೈ ದೇವತೆಗಳೇ, ನಮಗೆ ಸರ್ವೇಶತ್ವಾದಿಗಳ ವಿಷಯದಲ್ಲಿ ವ್ಯರ್ಥವಾದ ಅಭಿಮಾನವಿರುವುದು! ಎಂದು ಹೇಳಿದನು.॥೨೮-೨೯-೩೦॥

ಅನೇಲೆ ವೃತ್ರಾಸುರನನ್ನು ಕೊಂದ ದೇವೇಂದ್ರನು ವಾಯುವನ್ನು ಕರೆದು ಹೇಳಿದನು. ಎಲೈ ವಾಯುದೇವನೇ, ನಿನ್ನಲ್ಲಿಯೇ ಈ ಸಮಸ್ತ ಪ್ರಪಂಚವೂ

ತ್ವಯಿ ಪ್ರೋತಂ ಜಗತ್ಸರ್ವಂ ತ್ವಚ್ಚೇಷ್ಟಾಭಿಸ್ತು ಚೇಷ್ಟಿತಂ ।
ತ್ವಂ ಪ್ರಾಣರೂಪಃ ಸರ್ವೇಷಾಂ ಸರ್ವಶಕ್ತಿ ವಿಧಾರಕಃ ॥೩೨॥

ತ್ವಮೇವ ಗತ್ವಾ ಜಾನೀಹಿ ಕಿಮಿದಂ ಯಕ್ಷಮಿತ್ಯಪಿ ।
ನಾಽನ್ಯಃ ಕೋಽಪಿ ಸಮರ್ಥೋಽಸ್ತಿ ಜ್ಞಾತುಂ ಯಕ್ಷಂ ಪರಂ ಮಹಃ ॥೩೩॥

ಸಹಸ್ರಾಕ್ಷವಚಃ ಶ್ರುತ್ವಾ ಗುಣಗೌರವಗುಂಫಿತಂ ।
ಸಾಭಿಮಾನೋ ಜಗಾಮಾಶು ಯತ್ರ ಯಕ್ಷಂ ವಿರಾಜತೇ ॥೩೪॥

ಯಕ್ಷಂ ದೃಷ್ಟ್ವಾ ತತೋ ವಾಯುಂ ಪ್ರೋವಾಚ ಮೃದುಭಾಷಯಾ ।
ಕೋಽಸಿ ತ್ವಂ ತ್ವಯಿ ಕಾ ಶಕ್ತಿರ್ವದ ಸರ್ವಂ ಮಮಾಗ್ರತಃ ॥೩೫॥

ತತೋ ಯಕ್ಷವಚಃ ಶ್ರುತ್ವಾ ಗರ್ವೇಣ ಮರುದಬ್ರವೀತ್ ।
ಮಾತರಿಶ್ವಾಽಹಮಸ್ಮೀತಿ ವಾಯುರಸ್ಮೀತಿಚಾಬ್ರವೀತ್ ॥೩೬॥

---

ಸಂಬಂಧಿಸಿಕೊಂಡಿರುವುದು. ನಿನ್ನ ಚಲನೆಯಿಂದ ಜಗತ್ತು ಚಲಿಸುವುದು. ನೀನು ಸಮಸ್ತರಿಗೂ ಪ್ರಾಣಸ್ವರೂಪನಾಗಿ ಸಮಸ್ತ ಶಕ್ತಿಯನ್ನೂ ಹೊಂದಿರುವೆ. ನೀನೇ ಹೋಗಿ ಈ ಯಕ್ಷನು ಯಾರೆಂಬುದನ್ನು ತಿಳಿ. ಆ ಶ್ರೇಷ್ಠವಾದ ಪ್ರಕಾಶ ಸ್ವರೂಪವಾದ ಯಕ್ಷನನ್ನು ತಿಳಿಯಲು ಇನ್ನಾರೂ ಶಕ್ತರಲ್ಲ. ಎಂದು ಹೇಳಿದನು. ॥೩೧-೩೨-೩೩॥

ಗುಣಗೌರವಗಳಿಂದ ಕೂಡಿದ ದೇವೇಂದ್ರನ ಮಾತನ್ನು ಕೇಳಿ, ವಾಯುವು ಸ್ವಾಭಿಮಾನದಿಂದ ಕೂಡಿದವನಾಗಿ ಪ್ರಕಾಶಿಸುತ್ತಿದ್ದ ಯಕ್ಷನೆಡೆಗೆ ಬೇಗನೆ ಹೋದನು. ॥೩೪॥

ಬಳಿಕ ಯಕ್ಷನು ವಾಯುವನ್ನು ನೋಡಿ ಮೃದುವಾದ ಮಾತಿನಿಂದ ನೀನು ಯಾರು ? ನಿನ್ನಲ್ಲಿರುವ ಶಕ್ತಿಯೇನು ? ಎಲ್ಲವನ್ನೂ ನನ್ನೆದುರಿಗೆ ಹೇಳು. ಎಂದನು. ॥೩೫॥

ಆಮೇಲೆ ಆ ಯಕ್ಷನ ಎಂದರೆ ಪೂಜ್ಯನಾದ ಪರಬ್ರಹ್ಮನ ಮಾತನ್ನು ಕೇಳಿ ವಾಯುವು ಗರ್ವದಿಂದ ಅಂತರಿಕ್ಷದಲ್ಲಿ ಸಂಚರಿಸುವ ನಾನು ವಾಯುವೇನಾಗಿ ದ್ದೇನೆ! ಎಂದು ಹೇಳಿದನು. ಮತ್ತು, ॥೩೬॥

ವೀರ್ಯಂ ತು ಮಯಿ ಸರ್ವಸ್ಯ ಚಾಲನೇ ಗ್ರಹಣೇಽಸ್ತಿ ಹಿ ।
ಮಚ್ಚೇಷ್ಟಯಾ ಜಗತ್ಸರ್ವಂ ಸರ್ವವ್ಯಾಪಾರವದ್ಭವೇತ್ ॥೩೭॥

ಇತಿ ಶ್ರುತ್ವಾ ವಾಯುವಾಣೀಂ ನಿಜಗಾದ ಪರಂ ಮಹಃ ।
ತೃಣಮೇತತ್ತ್ವಾಗ್ರೇ ಯತ್ತ್ರಚ್ಚಾಲಯ ಯಥೇಪ್ಸಿತಂ ॥೩೮॥

ನೋಚೇದ್ಗರ್ವಂ ವಿಹಾಯ್ಯೈನಂ ಲಜ್ಜಿತೋ ಗಚ್ಛ ವಾಸವಂ ।
ಶ್ರುತ್ವಾ ಯಕ್ಷವಚೋ ವಾಯುಃ ಸರ್ವಶಕ್ತಿಸಮನ್ವಿತಃ ॥೩೯॥

ಉದ್ಯೋಗ ಮಕರೋತ್ತೃಚ್ಚ ಸ್ವಸ್ಥಾನಾನ್ನಚಚಾಲ ಹ ।
ಲಜ್ಜಿತೋಽಗಾದ್ದೇವ ಪಾರ್ಶ್ವೇ ಹಿತ್ವಾ ಗರ್ವಂ ಸ ಚಾನಿಲಃ ॥೪೦॥

ವೃತ್ತಾಂತಮುವದತ್ಸರ್ವಂ ಗರ್ವನಿರ್ವಾಪಕಾರಣಂ ।
ನೈತಜ್ಜ್ಞಾತುಂ ಸಮರ್ಥಾಃಸ್ಮ ಮಿಥ್ಯಾಗರ್ವಾಭಿಮಾನಿನಃ ॥೪೧॥
ಅಲೌಕಿಕಂ ಭಾತಿ ಯಕ್ಷಂ ತೇಜಃ ಪರಮದಾರುಣಂ ।

---

ನನ್ನಲ್ಲಿ ಎಲ್ಲವನ್ನೂ ಅಲ್ಲಾಡಿಸುವ ಮತ್ತು ಎಲ್ಲವನ್ನೂ ತೆಗೆದುಕೊಂಡು ಹೋಗುವ ಶಕ್ತಿಯು ಇರುವುದು. ನನ್ನ ಚಲನೆಯಿಂದಲೇ ಪ್ರಪಂಚದಲ್ಲಿ ಎಲ್ಲ ಕಾರ್ಯಗಳೂ ನಡೆಯುತ್ತಿರುವುವು, ಎಂದನು. ॥೩೭॥

ವಾಯುವು ಹೇಳಿದ ಮಾತನ್ನು ಕೇಳಿ ತೇಜೋರೂಪವಾದ ಆ ಪರಬ್ರಹ್ಮನು, " ಹಾಗಿದ್ದರೆ ನಿನ್ನೆದುರಿಗೆ ಇರುವ ಈ ಹುಲ್ಲುಕಡ್ಡಿಯನ್ನು ಅಲ್ಲಾಡಿಸು, ಅದು ನಿನ್ನ ಕೈಯಿಂದಾಗದೆ ಹೋದರೆ ಅಹಂಕಾರವನ್ನು ಬಿಟ್ಟು ನಾಚಿಕೆಯಿಂದ ದೇವೇಂದ್ರನ ಸಮೀಪಕ್ಕೆ ಹೋಗು." ಎಂದನು. ॥೩೮॥

ಆ ಯಕ್ಷನ ಮಾತನ್ನು ಕೇಳಿ ವಾಯುವು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಆ ಹುಲ್ಲುಕಡ್ಡಿಯನ್ನು ಅಲ್ಲಾಡಿಸಲು ಪ್ರಯತ್ನ ಮಾಡಿದನು. ಅದು ಆ ಸ್ಥಳವನ್ನು ಬಿಟ್ಟು ಅಲುಗಲಿಲ್ಲ. ಆಗ ವಾಯುವು ನಾಚಿಕೆಯಿಂದ ಅಹಂಕಾರವನ್ನು ಬಿಟ್ಟು ದೇವತೆಗಳ ಸಮೀಪಕ್ಕೆ ಹೊರಟು ಹೋದನು. ॥೩೯-೪೦॥

ತನ್ನ ಅಹಂಕಾರನಾಶಕ್ಕೆ ಕಾರಣವಾದ ಸಮಸ್ತ ವೃತ್ತಾಂತವನ್ನೂ ವಾಯುವು ದೇವತೆಗಳಿಗೆ ಹೇಳಿ, ಈ ಪೂಜ್ಯವಾದ ತೇಜಸ್ಸು ಲೋಕಸಂಬಂಧವಾದುದಲ್ಲ. ಇದನ್ನು ತಿಳಿಯಲು ನಾವು ಶಕ್ತರಲ್ಲ. ವ್ಯರ್ಥವಾಗಿ ನಾವು ಅಹಂಕಾರಪಡುತ್ತಿರುವೆವು! ಎಂದನು. ॥೪೧॥

ತತಃ ಸರ್ವೇ ಸುರಗಣಾಃ ಸಹಸ್ರಾಕ್ಷಂ ಸಮೂಚಿರೇ ॥೪೨॥

ದೇವರಾಡಸಿ ಯಸ್ಮಾತ್ತ್ವಂ ಯಕ್ಷಂ ಜಾನೀಹಿ ತತ್ತ್ವತಃ ।
ತತ ಇಂದ್ರೋ ಮಹಾ ಗರ್ವಾತ್ತದ್ಯಕ್ಷಂ ಸಮುಪಾದ್ರವತ್ ॥೪೩॥

ಪ್ರಾದ್ರವಚ್ಚ ಪರಂ ತೇಜೋ ಯಕ್ಷರೂಪಂ ಪರಾತ್ಪರಂ ।
ಅಂತರ್ಧಾನಂ ತತಃ ಪ್ರಾಪ ತದ್ಯಕ್ಷಂ ವಾಸವಾಗ್ರತಃ ॥೪೪॥

ಅತೀವ ಲಜ್ಜಿತೋ ಜಾತೋ ವಾಸವೋ ದೇವರಾಡಪಿ ।
ಯಕ್ಷಸಂಭಾಷಣಾಭಾವಾಲ್ಲಘುತ್ವಂ ಪ್ರಾಪ ಚೇತಸಿ ॥೪೫॥

ಅಂತಃಪರಂ ನ ಗಂತವ್ಯಂ ಮಯಾ ತು ಸುರಸಂಸದಿ ।
ಕಿಂ ಮಯಾ ತತ್ರ ವಕ್ತವ್ಯಂ ಸ್ವಲಘುತ್ವಂ ಸುರಾನ್ಪ್ರತಿ ॥೪೬॥

ದೇಹತ್ಯಾಗೋ ವರಸ್ತಸ್ಮಾನ್ಮಾನೋ ಹಿ ಮಹತಾಂ ಧನಂ ।
ಮಾನೇ ನಷ್ಟೇ ಜೀವಿತಂ ತು ಮೃತಿತುಲ್ಯಂ ನ ಸಂಶಯಃ ॥೪೭॥

---

ಆಮೇಲೆ ಸಮಸ್ತ ದೇವತೆಗಳೂ ದೇವೇಂದ್ರನನ್ನು ಕುರಿತು ನೀನು ದೇವತೆಗಳಿಗೆಲ್ಲರಿಗೂ ರಾಜನಾಗಿರುವುದರಿಂದ ನೀನೇ ಆ ಯಕ್ಷನ ಸ್ವರೂಪವನ್ನು ತಿಳಿಯಬೇಕು. ಎಂದರು. ॥೪೨॥

ಬಳಿಕ ಇಂದ್ರನು ವಿಶೇಷವಾದ ಅಹಂಕಾರದಿಂದ ಅತ್ಯಂತ ಶ್ರೇಷ್ಠವಾದ, ಪೂಜ್ಯವಾದ ತೇಜೋರೂಪದ ಸಮೀಪಕ್ಕೆ ಓಡಿಹೋದನು. ಆಮೇಲೆ ದೇವೇಂದ್ರನ ಇದುರಿಗಿದ್ದ ಆ ಯಕ್ಷರೂಪವಾದ ಪರಬ್ರಹ್ಮನು ಅವನ ಕಣ್ಣಿಗೆ ಕಾಣದೆ ಮರೆಯಾದನು. ॥೪೩-೪೪॥

ಇಂದ್ರನು ತಾನು ದೇವತೆಗಳ ರಾಜನಾದರೂ, ಆ ಯಕ್ಷನೊಡನೆ ಮಾತನಾಡುವುದಕ್ಕೂ ಆಗಲಿಲ್ಲವೆಂದು ಮನಸ್ಸಿಗೆ ಉಂಟಾದ ಲಾಘವದ ಅವಮಾನದಿಂದ ವಿಶೇಷವಾಗಿ ನಾಚಿಕೆಯನ್ನು ಹೊಂದಿದನು. ॥೪೫॥

ಇನ್ನು ಮುಂದೆ ದೇವತೆಗಳ ಗುಂಪಿಗೆ ನಾನು ಹೋಗಬಾರದು. ಅಲ್ಲಿಗೆ ಹೋಗಿ ನನ್ನ ಲಾಘವವನ್ನು ಏನೆಂದು ಹೇಳಿಕೊಳ್ಳಬೇಕು? ಗೌರವಶಾಲಿಗಳಿಗೆ ಮರ್ಯಾದೆಯೇ ಹಣದಂತಿರುವುದು. ಮಾನವನ್ನು ಕಳೆದುಕೊಳ್ಳುವುದಕ್ಕಿಂತ

ಇತಿ ನಿಶ್ಚಿತ್ಯ ತತ್ರೈವ ಗರ್ವಂ ಹಿತ್ವಾ ಸುರೇಶ್ವರಃ ।
ಚರಿತ್ರಸೀದೃಶಂ ಯಸ್ಯ ತಮೇವ ಶರಣಂ ಗತಃ ॥೪೮॥

ತಸ್ಮಿನ್ನೇವ ಕ್ಷಣೇ ಜಾತಾ ವ್ಯೋಮವಾಣೀ ನಭಸ್ತಲೇ ।
ಮಾಯಾ ಬೀಜಂ ಸಹಸ್ರಾಕ್ಷ ಜಪ ತೇನ ಸುಖೀ ಭವ ॥೪೯॥

ತತೋ ಜಜಾಪ ಪರಮಂ ಮಾಯಾ ಬೀಜಂ ಪರಾತ್ಪರಂ ।
ಲಕ್ಷವರ್ಷಂ ನಿರಾಹಾರೋ ಧ್ಯಾನಮೀಲಿತಲೋಚನಃ ॥೫೦॥

ಅಕಸ್ಮಾಚ್ಚೈತ್ರಮಾಸೀಯ ನವಮ್ಯಾಂ ಮಧ್ಯಗೇ ರವೌ ।
ತದೇವಾವಿರಭೂತ್ತೇಜಸ್ತಸ್ಮಿನ್ನೇವ ಸ್ಥಲೇ ಪುನಃ ॥೫೧॥

---

ಸಾಯುವುದು ಮೇಲು. ಮಾನವು ಹೋಗಿ ಬದುಕಿದ್ದರೂ ಸತ್ತಂತೆಯೇ ಸರಿ. ಈ ವಿಷಯದಲ್ಲಿ ಸಂದೇಹವಿಲ್ಲ. ॥೪೬-೪೭॥

ಈ ತೇಜಸ್ಸು ನಮಗೆ ಶತ್ರುಸ್ವರೂಪವಾದದ್ದಲ್ಲ. ಹಾಗೆ ಶತ್ರುವಾಗಿದ್ದರೆ ಯುದ್ಧಕ್ಕೆ ಬರಬೇಕಾಗಿದ್ದಿತು. ಹಾಗೆ ಮಾಡದೆ ಈ ತೇಜಸ್ಸು ಮರೆಯಾದುದರಿಂದ ಅದು ಪರಬ್ರಹ್ಮನೇ ಸರಿ. ಎಂದು ನಿಶ್ಚಯಿಸಿ, ದೇವೇಂದ್ರನು ಗರ್ವವನ್ನು ಬಿಟ್ಟು ಮಹಾಮಹಿಮನಾದ ಆ ಪರಬ್ರಹ್ಮನನ್ನೇ ಶರಣುಹೊಂದಿದನು. ॥೪೮॥

ಆಕ್ಷಣದಲ್ಲಿಯೇ ಆಕಾಶದಲ್ಲಿ, "ಎಲೈ ದೇವೇಂದ್ರನೇ, ಮಾಯಾ ಶಬಲ ಬ್ರಹ್ಮವಾಚಕವಾದ ಭುವನೇಶ್ವರೀ ಬೀಜಮಂತ್ರವನ್ನು ಜಪಿಸಿ, ಅದರಿಂದ ಸುಖವನ್ನು ಪಡೆ" ಎಂದು ಅಶರೀರವಾಣಿಯು ಕೇಳಿಸಿತು. ॥೪೯॥

ಮೂಲಪ್ರಕೃತಿಯ ದರ್ಶನವು ವಿಶೇಷ ಪುಣ್ಯವಂತರಿಗೆ ದೊರೆಯತಕ್ಕದಾದುದರಿಂದ ದೇವೇಂದ್ರನು ಲಕ್ಷ ವರ್ಷಗಳವರೆಗೆ ಆಹಾರವಿಲ್ಲದೆ ಕಣ್ಣುಮುಚ್ಚಿಕೊಂಡು ಅತ್ಯುತ್ತಮವಾದ ಭುವನೇಶ್ವರೀ ಮಂತ್ರವನ್ನು ಜಪಮಾಡಿದನು. ॥೫೦॥

ಅಕಸ್ಮಾತ್ತಾಗಿ ಚೈತ್ರ ಶುದ್ಧ ನವಮಿಯ ದಿನ ಮಧ್ಯಾಹ್ನ ಸಮಯದಲ್ಲಿ ಹಿಂದೆ ಯಾವ ಸ್ಥಳದಲ್ಲಿ ತೇಜಸ್ಸು ಮರೆಯಾಯಿತೋ ಅದೇ ಸ್ಥಳದಲ್ಲಿಯೇ ಅದೇ ತೇಜಸ್ಸು ಕಾಣಿಸಿಕೊಂಡಿತು. ॥೫೧॥

ತೇಜೋಮಂಡಲಮಧ್ಯೇ ತು ಕುಮಾರೀಂ ನವಯೌವನಾಂ ।
ಭಾಸ್ವಜ್ಜಪಾಪ್ರಸೂನಾಭಾಂ ಬಾಲಕೋಟಿರವಿಪ್ರಭಾಂ ॥೫೨॥

ಬಾಲ ಶೀತಾಂಶು ಮುಕುಟಾಂ ವಸ್ತ್ರಾಂತರ್ವ್ಯಂಜಿತಸ್ತನೀಂ ।
ಚತುರ್ಭಿರ್ವರ ಹಸ್ತೈಸ್ತು ವರಪಾಶಾಂಕುಶಾಭಯಾನ್ ॥೫೩॥

ದಧಾನಾಂ ರಮಣೀಯಾಂಗೀಂ ಕೋಮಲಾಂಗಲತಾಂ ಶಿವಾಂ ।
ಭಕ್ತಕಲ್ಪದ್ರುಮಾಮಂಬಾಂ ನಾನಾಭೂಷಣಭೂಷಿತಾಂ ॥೫೪॥

ತ್ರಿಣೇತ್ರಾಂ ಮಲ್ಲಿಕಾಮಾಲಾ ಕಬರೀಜೂಟಶೋಭಿತಾಂ ।
ಚತುರ್ದಿಕ್ಷು ಚತುರ್ವೇದೈರ್ಮೂರ್ತಿಮದ್ಭಿರಭಿಷ್ಟುತಾಂ ॥೫೫॥

ದಂತಚ್ಛಟಾಭಿರಭಿತಃ ಪದ್ಮರಾಗೀ ಕೃತಕ್ಷಮಾಂ ।
ಪ್ರಸನ್ನಸ್ಮೇರವದನಾಂ ಕೋಟಿಕಂದರ್ಪಸುಂದರಾಂ ॥೫೬॥

---

ಆ ತೇಜೋಮಂಡಲದ ನಡುವೆ ಕೌಮಾರಾವಸ್ಥೆಯುಳ್ಳ ಯೌವನವನ್ನು ಹೊಸದಾಗಿ ಪಡೆದಿರುವ, ಪ್ರಕಾಶಮಾನವಾದ ದಾಸವಾಳದ ಹೂವಿನ ಕಾಂತಿಯಿಂದಲೂ, ಉದಯಕಾಲದ ಸೂರ್ಯನ ಕಾಂತಿಯಿಂದಲೂ, ಹೊಳೆಯುತ್ತಿರುವ ಕಿರೀಟದಲ್ಲಿ ಚಂದ್ರಕಲೆಯನ್ನು ಧರಿಸಿದ ಪಾಶವನ್ನೂ ಅಂಕುಶಾಯುಧವನ್ನೂ ಧರಿಸಿ ಅಭಯವರದ ಹಸ್ತಗಳೊಡನೆ ನಾಲ್ಕು ಕೈಗಳಿಂದ ಕೂಡಿದ, ವಸ್ತ್ರದೊಳಗೇ ವ್ಯಕ್ತವಾಗುತ್ತಿರುವ ಸ್ತನಗಳಿಂದ ಕಂಗೊಳಿಸುತ್ತಿರುವ, ॥೫೨-೫೩॥

ಮನೋಹರವೂ, ಕೋಮಲವೂ, ಮಂಗಳಕರವೂ ಆದ ಅವಯವಗಳನ್ನು ಧರಿಸಿದ, ಭಕ್ತರಿಗೆ ಕಲ್ಪವೃಕ್ಷಸ್ವರೂಪಳಾದ, ಬಗೆಬಗೆಯ ಒಡವೆಗಳನ್ನಿಟ್ಟುಕೊಂಡಿರುವ, ಮೂರು ಕಣ್ಣುಗಳಿಂದಲೂ, ಮಲ್ಲಿಗೆಯ ಹೂವನ್ನು ಮುಡಿದಿರುವುದರಿಂದಲೂ, ಶೋಭಿಸುತ್ತಿರುವ, ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ವೇದಗಳೂ ಆಕಾರವನ್ನು ಧರಿಸಿ ಸ್ತೋತ್ರಮಾಡುತ್ತಿರುವ, ॥೫೪-೫೫॥

ಹಲ್ಲುಗಳ ಕಾಂತಿಯಿಂದ ಸುತ್ತಣ ಭೂಮಿಯೆಲ್ಲವೂ ಕೆಂಪುರತ್ನಗಳಿಂದ ಕೆತ್ತಿದಂತೆ ಕಾಣುತ್ತಿರುವ, ಶುದ್ಧವಾದ ಮುಗುಳು ನಗೆಯಿಂದ ಕೂಡಿದ ಮುಖವುಳ್ಳ, ಅನೇಕ ಮನ್ಮಥರಂತೆ ಸೌಂದರ್ಯವುಳ್ಳ, ಕೆಂಪಾದ ವಸ್ತ್ರವನ್ನುಟ್ಟು, ಕೆಂಪುಗಂಧ

ರಕ್ತಾಂಬರಪರೀಧಾನಾಂ ರಕ್ತಚಂದನಚರ್ಚಿತಾಂ ।
ಉಮಾಭಿಧಾನಾಂ ಪುರತೋ ದೇವೀಂ ಹೈಮವತೀಂ ಶಿವಾಂ ॥೫೭॥

ನಿರ್ವ್ಯಾಜಕರುಣಾಮೂರ್ತಿಂ ಸರ್ವಕಾರಣಕಾರಣಾಂ ॥
ದದರ್ಶ ವಾಸವಸ್ತತ್ರ ಪ್ರೇಮಸ(ಗ)ದ್ಗದಿತಾಂತರಃ ॥೫೮॥

ಪ್ರೇಮಾಶ್ರು ಪೂರ್ಣನಯನೋ ರೋಮಾಂಚಿತತನುಸ್ತತಃ ।
ದಂಡವತ್ಪ್ರಣನಾಮಾಥ ಪಾದಯೋರ್ಜಗದೀಶಿತುಃ ॥೫೯॥

ತುಷ್ಟಾವ ವಿವಿಧೈಃ ಸ್ತೋತ್ರೈಃ ಭಕ್ತಿಸನ್ನತ ಕಂಧರಃ ।
ಉವಾಚ ಪರಮಪ್ರೀತಃ ಕಿಮಿದಂ ಯಕ್ಷಮಿತ್ಯಪಿ ॥೬೦॥

ಪ್ರಾದುರ್ಭೂತಂ ಚ ಕಸ್ಮಾತ್ತದ್ವದ ಸರ್ವಂ ಸುಶೋಭನೇ ।
ಇತಿ ತಸ್ಯ ವಚಃ ಶ್ರುತ್ವಾ ಪ್ರೋವಾಚ ಕರುಣಾರ್ಣವಾ ॥೬೧॥

ರೂಪಂ ಮದೀಯಂ ಬ್ರಹ್ಮೈತತ್ಸರ್ವಕಾರಣಕಾರಣಂ ।
ಮಾಯಾಽಧಿಷ್ಠಾನ ಭೂತಂತು ಸರ್ವಸಾಕ್ಷಿ ನಿರಾಮಯಂ ॥೬೨॥

---

ವನ್ನು ಬಳಿದುಕೊಂಡು, ಚಿನ್ನದ ಆಭರಣಗಳನ್ನು ಧರಿಸಿದ, 'ಉಮಾ' ಎಂಬ ಹೆಸರುಳ್ಳ, ಸಮಸ್ತ ಪ್ರಪಂಚಕ್ಕೂ ಕಾರಣಳಾದ ದಯಾಮೂರ್ತಿಯಾದ, ಮಂಗಳ ಸ್ವರೂಪಳಾದ ದೇವಿಯನ್ನು ದೇವೇಂದ್ರನು ನೋಡಿ, ಭಕ್ತಿಯಿಂದ ಕೂಡಿದ ಮನಸ್ಸುಳ್ಳವನಾಗಿ. ॥೫೬-೫೭-೫೮॥

ಪ್ರೀತಿಯಿಂದ ಕಣ್ಣಿನಲ್ಲಿ ನೀರು ತುಂಬಿಕೊಂಡು ಮೈಯೆಲ್ಲ ರೋಮಾಂಚ ವಾಗಲು, ಆ ಜಗದಂಬೆಯ ಪಾದಗಳಿಗೆ ನಮಸ್ಕಾರವನ್ನು ಮಾಡಿ, ಭಕ್ತಿಯಿಂದ ಕುತ್ತಿಗೆಯನ್ನು ಬಗ್ಗಿಸಿಕೊಂಡು, ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸಿ ಸಂತುಷ್ಟನಾಗಿ, ಈ ಯಕ್ಷಸ್ವರೂಪವೇನೆಂದು ಕೇಳಿದನು. ॥೫೯-೬೦॥

ಈ ಯಕ್ಷಸ್ವರೂಪವು ಯಾವ ಕಾರಣದಿಂದ ಕಾಣಿಸಿಕೊಂಡಿತು ? ಆ ಕಾರಣ ವೆಲ್ಲವನ್ನೂ, ಓ ಮಂಗಳಸ್ವರೂಪಿಯಾದ ದೇವಿಯೇ, ನನಗೆ ಹೇಳು. ಎಂದು ದೇವೇಂದ್ರನು ಕೇಳುತ್ತಲು, ದಯಾಸಮುದ್ರಳಾದ ದೇವಿಯು ಹೇಳುವುದಕ್ಕೆ ಪ್ರಾರಂಭಿಸಿದಳು. ॥೬೧॥

ಈ ಯಕ್ಷಸ್ವರೂಪವು ನನ್ನ ಮುಖ್ಯವಾದ ಸ್ವರೂಪವು. ಇದೇ ಪರಬ್ರಹ್ಮ ಸ್ವರೂಪವು ; ಸಮಸ್ತಕ್ಕೂ ಕಾರಣವಾದುದು. ಗುಣಗಳ ಸಾಮ್ಯಾವಸ್ಥೆಯನ್ನು

**ಸರ್ವೇವೇದಾ ಯತ್ಪದ ಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇಪದಂ ಸಂಗ್ರಹೇಣ ಬ್ರವೀಮಿ ॥**

**ಓಮಿತ್ಯೇಕಾಕ್ಷರಂಬ್ರಹ್ಮ ತದೇವಾಹುಶ್ಚ ಹ್ರೀಂ ಮಯಂ ।**
**ದ್ವೇ ಬೀಜೇ ಮಮ ಮಂತ್ರೌಸ್ತೋ ಮುಖ್ಯತ್ವೇನ ಸುರೋತ್ತಮ ॥೬೪॥**

**ಭಾಗದ್ವಯವತೀ ಯಸ್ಮಾತ್ಸೃಜಾಮಿ ಸಕಲಂ ಜಗತ್ ।**
**ತತ್ರೈಕಭಾಗಃ ಸಂಪ್ರೋಕ್ತಃ ಸಚ್ಚಿದಾನಂದ ನಾಮಕಃ ॥೬೫॥**
**ಮಾಯಾಪ್ರಕೃತಿ ಸಂಜ್ಞಸ್ತು ದ್ವಿತೀಯೋ ಭಾಗ ಈರಿತಃ ।**

---

ಹೊಂದಿದ ಮಾಯೆಗೆ ಆಶ್ರಯವಾದುದು, ಸಮಸ್ತ ಕಾರ್ಯಗಳಿಗೂ ಸಾಕ್ಷಿಸ್ವರೂಪವಾಗಿ ನಿರ್ದೋಷವಾದುದಾಗಿರುವುದು. ॥೬೨॥

ಸಮಸ್ತ ವೇದಗಳೂ ಜ್ಞಾನಿಗಳು ಹೊಂದಬೇಕಾದ ಸ್ಥಿತಿಯು ಯಾವುದೆಂದು ಹೇಳುವುವೋ, ಸಮಸ್ತ ತಪಸ್ಸುಗಳೂ ಯಾವುದನ್ನು ಹೊಂದಲು ಆಚರಿಸಲ್ಪಡುವುವೋ ಬ್ರಾಹ್ಮಣರು ಬ್ರಹ್ಮಚರ್ಯವೆಂಬ ಧರ್ಮಾಚರಣೆಯಿಂದ ಯಾವುದನ್ನು ಅಪೇಕ್ಷಿಸುವರೋ, ಆ ಅತ್ಯುತ್ತಮವಾದ ವಸ್ತುವನ್ನು ಒಂದೇ ಒಂದು ಹೆಸರಿನಿಂದ ಹೇಳುವೆನು. ॥೬೩॥

ಓಂ ಬ್ರಹ್ಮ, ಹ್ರೀಂ ಬ್ರಹ್ಮ ಎಂದು ವೇದಗಳಲ್ಲಿ ಬ್ರಹ್ಮವಾಚಕವಾದ ಎರಡು ಬೀಜಮಂತ್ರಗಳಿರುವುವು. ದೇವೇಂದ್ರನೇ, ಈ ಎರಡೂ ಮುಖ್ಯಮಂತ್ರಗಳು. ॥೬೪॥

ನಾನು ಮಾಯಾಭಾಗ, ಬ್ರಹ್ಮಭಾಗ ಎಂಬೆರಡು ಭಾಗಗಳಿಂದ ಕೂಡಿ, ಮಾಯಾಶಬಲಬ್ರಹ್ಮರೂಪಿಣಿಯಾಗಿ ಸಕಲ ಜಗತ್ತನ್ನೂ ಸೃಷ್ಟಿಮಾಡುವೆನು. ಆದುದರಿಂದಲೇ ಎರಡು ಬೀಜಾಕ್ಷರಗಳೂ ನನ್ನ ವಾಚಕಗಳಾಗಿರುವುವು. ಅದರಲ್ಲಿ ಒಂದು ಭಾಗವು ಸಚ್ಚಿದಾನಂದ ಸ್ವರೂಪವಾದ ಬ್ರಹ್ಮವಸ್ತುವನ್ನು ಹೇಳುವುದು. ಎರಡನೆಯ ಭಾಗವು ಮಾಯಾಸ್ವರೂಪವಾದ ಪ್ರಕೃತಿಯನ್ನು ಹೇಳುವುದು. ಹೀಗಾದ ಮೇಲೆ, ಓಂ ಕಾರವು ಬ್ರಹ್ಮವಾಚಕವೂ, ಹ್ರೀಂ ಕಾರವು ಶಕ್ತಿವಾಚಕವೂ ಆಗಿವೆ. ಆದುದರಿಂದ ಓಂಕಾರೋಪಾಸನೆಯಲ್ಲಿ ಶಕ್ತಿಯ ಉಪಾಸನೆಯೂ, ಹ್ರೀಂಕಾರೋಪಾಸನೆಯಲ್ಲಿ ಬ್ರಹ್ಮೋಪಾಸನೆಯೂ, ಸೇರದೇ ಹೋಗುವುದೆಂದರೆ, ಸಮಾಧಾನವನ್ನು ಹೇಳಲಾಗುವುದು. ॥೬೫॥

**ಸಾ ಚ ಮಾಯಾ ಪರಾಶಕ್ತಿಃ ಶಕ್ತಿಮತ್ಯಹಮೀಶ್ವರೀ ॥೬೬॥**

**ಚಂದ್ರಸ್ಯ ಚಂದ್ರಿಕೇವೇಯಂ ಮಮಾಭಿನ್ನತ್ವಮಾಗತಾ ।**
**ಸಾಮ್ಯಾವಸ್ಥಾತ್ಮಿಕಾ ಚೈಷಾ ಮಾಯಾ ಮಮ ಸುರೋತ್ತಮ ॥೬೭॥**

**ಪ್ರಲಯೇ ಸರ್ವಜಗತೋ ಮದಭಿನ್ನೈವ ತಿಷ್ಠತಿ ।**
**ಪ್ರಾಣಿಕರ್ಮಪರಿಪಾಕವಶತಃ ಪುನರೇವ ಹಿ ॥೬೮॥**

**ರೂಪಂ ತದೇವಮವ್ಯಕ್ತಂ ವ್ಯಕ್ತಭಾವಮುಪೈತಿ ಚ ।**
**ಅಂತರ್ಮುಖಾ ತು ಯಾಽವಸ್ಥಾ ಸಾ ಮಾಯೇತ್ಯಭಿಧೀಯತೇ॥೬೯॥**

---

ಆ ಮಾಯೆಯೇ ಶ್ರೇಷ್ಠವಾದ ನನ್ನ ಶಕ್ತಿಯು. ಆ ಶಕ್ತಿಯುಳ್ಳವಳು ನಾನು ಜಗದೀಶ್ವರಿಯು, ಚಂದ್ರನಿಗೂ, ಬೆಳದಿಂಗಳಿಗೂ ಹೇಗೆ ಭೇದವಿಲ್ಲವೋ ಹಾಗೆ ಮಾಯೆಗೂ ನನಗೂ ಭೇದವಿಲ್ಲವು. ದೇವರಾಜನೇ, ಈ ನನ್ನ ಮಾಯೆಯು ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥಾಸ್ವರೂಪವಾದುದೆಂದು ತಿಳಿ. ಅಗ್ನಿಗೂ ಸುಡುವ ಶಕ್ತಿಗೂ ಹೇಗೆ ಭೇದವಿಲ್ಲವೋ ಹಾಗೆ ನನಗೂ ಮಾಯೆಗೂ ಭೇದವಿಲ್ಲ. ಓಂಕಾರವು ಶಕ್ತಿವಿಶಿಷ್ಟಬ್ರಹ್ಮವಾಚಕವಾಗಿರುವುದು. ಹ್ರೀಂ ಕಾರವು ಮಾಯಾವಿಶಿಷ್ಟ ಬ್ರಹ್ಮವಾಚಕವು. ಆದುದರಿಂದಲೇ ಹ್ರೀಂ ಬ್ರಹ್ಮ ಎಂದು ವೇದದಲ್ಲಿ ಹೇಳಿರುವುದು. ||೬೬-೬೭||

ಸಮಸ್ತ ಜಗತ್ತೂ ಪ್ರಳಯವಾದಾಗ ಮಾಯಾ ನಾಶವಾಗುವುದಿಲ್ಲ. ಆ ಮಾಯೆಯು ಬ್ರಹ್ಮಾಭಿನ್ನವಾಗಿ ಇದ್ದೇ ಇರುವುದು. ಮಾಯೆಯು ಯಾವಾಗಲೂ ಇದ್ದಮೇಲೆ ಪ್ರಪಂಚಸೃಷ್ಟಿಯೇ ಮೊದಲಾದ ಕಾರ್ಯವೂ ಯಾವಾಗಲೂ ಇರಬೇಕಾಯಿತು. ಎಂದರೆ ಕೇವಲ ಮಾಯೆಯು ಕರ್ಮಾದಿಗಳ ಸಹಾಯವಿಲ್ಲದೆ ಜಗತ್ತನ್ನು ಸೃಷ್ಟಿಸದು. ಪ್ರಳಯದಲ್ಲಿ ಸಮಸ್ತ ಪ್ರಾಣಿಗಳ ಕರ್ಮಗಳೂ ಪರಿಪಕ್ವವಾಗಿ ಫಲವನ್ನು ಕೊಟ್ಟುದರಿಂದಲೂ ಆ ಪರಿಪಾಕವಾದ ಕರ್ಮಗಳ ಫಲಕಾಲವು ಇಲ್ಲದುದರಿಂದಲೂ ಕರ್ಮರೂಪವಾದ ಸಹಾಯವು ಮಾಯೆಗೆ ಇಲ್ಲದುದರಿಂದ ಪ್ರಲಯವಾಗುವುದು. ಆಮೇಲೆ ಮಿಕ್ಕ ಪ್ರಾಣಿಕರ್ಮಗಳು ಪರಿಪಾಕಾವಸ್ಥೆಗೆ ಬಂದೊಡನೆಯೇ ಅವ್ಯಕ್ತವಾಗಿದ್ದ ಆ ಮಾಯೆಯು ಪರಿಪಕ್ವ ಕರ್ಮರೂಪವಾದ ಸಹಾಯಮೊಡನೆ ವ್ಯಕ್ತವಾಗುವುದು. ಇದೇ ಸೃಷ್ಟಿಯು. ||೬೮||

ಅಂತರ್ಮುಖವಾದ ಮಾಯೆಯೇ ಗುಣತ್ರಯಗಳ ಸಾಮ್ಯಾವಸ್ಥೆಯು. ಗುಣತ್ರಯಗಳ ವಿಷಮಾವಸ್ಥೆಯೇ ಬಹಿರ್ಮುಖವಾದ ಮಾಯೆಯು. ಇದನ್ನೇ

ಬಹಿರ್ಮುಖಾ ತು ಯಾ ಮಾಯಾ ತಮಃ ಶಬ್ದೇನ ಸೋಚ್ಯತೇ ।
ಬಹಿರ್ಮುಖಾತ್ತಮೋರೂಪಾಜ್ಜಾಯತೇ ಸತ್ವಸಂಭವಃ ॥೭೦॥

ರಜೋಗುಣಸ್ತದೈವ ಸ್ಯಾತ್ಸರ್ಗಾದೌ ಸುರಸತ್ತಮ ।
ಗುಣತ್ರಯಾತ್ಮಕಾಃ ಪ್ರೋಕ್ತಾ ಬ್ರಹ್ಮವಿಷ್ಣುಮಹೇಶ್ವರಾಃ ॥೭೧॥

ರಜೋಗುಣಾಧಿಕೋ ಬ್ರಹ್ಮಾ ವಿಷ್ಣುಃ ಸತ್ವಾಧಿಕೋ ಭವೇತ್ ।
ತಮೋಗುಣಾಧಿಕೋ ರುದ್ರಃ ಸರ್ವಕಾರಣರೂಪಧೃಕ್ ॥೭೨॥

ಸ್ಥೂಲದೇಹೋ ಭವೇದ್ಬ್ರಹ್ಮಾ ಲಿಂಗದೇಹೋ ಹರಿಃ ಸ್ಮೃತಃ ।
ರುದ್ರಸ್ತು ಕಾರಣೋ ದೇಹಸ್ತುರೀಯಾ ತ್ವಹಮೇವ ಹಿ ॥೭೩॥

---

ತಮಸ್ಸೆಂದು ವೇದದಲ್ಲಿ ಹೇಳಿರುವುದು. "ತಮಆಸೀತ್" ಎಂಬ ವೇದಕ್ಕೆ ಮಾಯೆಯ ಉತ್ಪತ್ತಿಯೆಂದು ಅರ್ಥವಲ್ಲ. ಮಾಯಾಗುಣಗಳ ಉತ್ಪತ್ತಿಯು ಎಂದು ಅರ್ಥವಾಗಬೇಕು. ॥೬೯॥

ಬಹಿರ್ಮುಖವಾದ ಅವ್ಯಕ್ತದಿಂದ ಮೊದಲು ತಮೋಗುಣವು ಹುಟ್ಟುವುದು. ಆಮೇಲೆ ಸತ್ವಗುಣವೂ, ಆಮೇಲೆ ರಜೋಗುಣವೂ ಹುಟ್ಟಿ, ಬಳಿಕ ಸೃಷ್ಟಿಯು ಪ್ರಾರಂಭವಾಗುವುದು. ॥೭೦॥

ಬ್ರಹ್ಮ ವಿಷ್ಣು ಮಹೇಶ್ವರರು ಪ್ರತಿಯೊಬ್ಬರೂ ಮೂರು ಗುಣಗಳಿಂದಲೂ ಕೂಡಿದವರು. ಆದರೂ ಬ್ರಹ್ಮನಲ್ಲಿ ರಜೋಗುಣ ಹೆಚ್ಚಾಗಿಯೂ, ವಿಷ್ಣುವಿನಲ್ಲಿ ಸತ್ವಗುಣವು ಹೆಚ್ಚಾಗಿಯೂ, ರುದ್ರನಲ್ಲಿ ತಮೋಗುಣವು ಹೆಚ್ಚಾಗಿಯೂ ಇರುವುದು. ತಮೋಗುಣದಿಂದಲೇ ರಜೋಗುಣವೂ, ಸತ್ವಗುಣವೂ ಹುಟ್ಟಿತೆಂದು ಹೇಳಿರುವುದರಿಂದ ತಮೋಗುಣೋಪಾಧಿಕನಾದ ರುದ್ರನಿಗೆ ಸರ್ವಕಾರಣರೂಪತ್ವವನ್ನು ಹೇಳಿರುವುದು. ॥೭೧-೭೨॥

ಸಮಷ್ಟಿರೂಪನಾದ ವಿರಾಟ್ಪುರುಷನ ಸ್ಥೂಲದೇಹವೇ ಬ್ರಹ್ಮನು. ಅವನ ಲಿಂಗದೇಹವೇ ವಿಷ್ಣುವು. ಕಾರಣಶರೀರವೇ ರುದ್ರನು. ತುರೀಯ (ನಾಲ್ಕನೆಯ) ರೂಪವೇ ನಾನು. ಹೀಗೆಯೇ ವ್ಯಷ್ಟಿಸ್ಥೂಲಲಿಂಗಕಾರಣ ಶರೀರಾಭಿಮಾನಿಗಳು ಬ್ರಹ್ಮ ವಿಷ್ಣು ರುದ್ರರೆಂದು ತಿಳಿಯಬೇಕು. ॥೭೩॥

**ಸಾಮ್ಯಾವಸ್ಥಾ ತು ಯಾ ಪ್ರೋಕ್ತಾ ಸರ್ವಾಂತರ್ಯಾಮಿರೂಪಿಣೀ ।**
**ಅತ ಊರ್ಧ್ವಂ ಪರಂಬ್ರಹ್ಮ ಮದ್ರೂಪಂ ರೂಪವರ್ಜಿತಂ ॥೨೪॥**

**ನಿರ್ಗುಣಂ ಸಗುಣಂ ಚೇತಿ ದ್ವಿಧಾ ಮದ್ರೂಪಮುಚ್ಯತೇ ।**
**ನಿರ್ಗುಣಂ ಮಾಯಯಾ ಹೀನಂ ಸಗುಣಂ ಮಾಯಯಾ ಯುತಂ॥೨೫॥**

**ಸಾಹಂ ಸರ್ವಂ ಜಗತ್ಸೃಷ್ಟ್ವಾ ತದಂತಃ ಸಂಪ್ರವಿಶ್ಯ ಚ ।**
**ಪ್ರೇರಯಾಮ್ಯನಿಶಂ ಜೀವಂ ಯಥಾಕರ್ಮ ಯಥಾಶ್ರುತಂ ॥೨೬॥**

**ಸೃಷ್ಟಿಸ್ಥಿತಿ ತಿರೋಧಾನೇ ಪ್ರೇರಯಾಮ್ಯಹಮೇವ ಹಿ ।**
**ಬ್ರಹ್ಮಾಣಂ ಚ ತಥಾ ವಿಷ್ಣುಂ ರುದ್ರಂ ವೈಕಾರಣಾತ್ಮಕಂ ॥೨೭॥**

---

ತುರೀಯರೂಪಕ್ಕೆ ಉಪಾಧಿಯಾವುದೆಂದರೆ—ಗುಣತ್ರಯಸಾಮ್ಯಾವಸ್ಥಾರೂಪವಾದ, ಅಂತರ್ಮುಖವಾದ ಮಾಯೆಯೇ ತುರೀಯರೂಪಕ್ಕೆ ಉಪಾಧಿಯು. ತುರೀಯಾತೀತವಾದ, ಮಾಯಾರಹಿತವಾದ ಯಾವ ರೂಪವೂ ಇಲ್ಲದ ನಿರ್ಗುಣ ಬ್ರಹ್ಮಸ್ವರೂಪವೇ ನಾನು. ಈ ಐದು ಅವಸ್ಥಾಸ್ವರೂಪವನ್ನೂ ತಾಪನೀಯ ಶ್ರುತಿಯಲ್ಲಿ ಹೇಳಿರುವುದು. ॥೨೪॥

ನನಗೆ ನಿರ್ಗುಣವೆಂದೂ, ಸಗುಣವೆಂದೂ ಎರಡು ರೂಪವಿರುವುದು. ಮಾಯಾಸಂಬಂಧವಿಲ್ಲದುದೇ ನಿರ್ಗುಣರೂಪವು ಮಾಯೆಯಿಂದ ಕೂಡಿದುದೇ ಸಗುಣರೂಪವು. ॥೨೫॥

ಸಗುಣನಿರ್ಗುಣಸ್ವರೂಪಳಾದ ಆ ನಾನೇ ಸಮಸ್ತವಾದ ಜಗತ್ತನ್ನೂ ಸೃಷ್ಟಿಮಾಡಿ, ಅದರೊಳಗೆ ಪ್ರವೇಶಮಾಡಿ. ಸಮಸ್ತ ಜೀವರುಗಳನ್ನೂ, ಅವರವರ ಕರ್ಮಫಲಾನುಸಾರವಾಗಿಯೂ, ಅವರವರ ತಿಳಿವಳಿಕೆಗನುಸಾರವಾಗಿಯೂ ಕಾರ್ಯವನ್ನು ಮಾಡುವಂತೆ ಪ್ರೇರಿಸುವೆನು. ॥೨೬॥

ಹಿರಣ್ಯಗರ್ಭನ ಸ್ಥೂಲಸೂಕ್ಷ್ಮಕಾರಣ ಶರೀರಾಭಿಮಾನಿಗಳಾದ ಬ್ರಹ್ಮವಿಷ್ಣುರುದ್ರರನ್ನು ಸೃಷ್ಟಿ ಸ್ಥಿತಿ ಸಂಹಾರ ಕಾರ್ಯಗಳನ್ನು ಮಾಡುವಂತೆ ನಾನೇ ಪ್ರೇರಿಸುವೆನು. ನನ್ನಾಜ್ಞೆಯಿಂದ ಅವರು ಸೃಷ್ಟ್ಯಾದಿ ಕಾರ್ಯಗಳನ್ನು ಮಾಡುವುದರಿಂದ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ನಾನೇ ಮುಖ್ಯ ಕಾರಣಳೆಂದು ತಿಳಿಯಬೇಕು. ಎಂದು ಭಾವವು. ॥೨೭॥

ಮದ್ಭಯಾದ್ವಾತಿ ಪವನೋ ಭೀತ್ಯಾ ಸೂರ್ಯಶ್ಚ ಗಚ್ಛತಿ ।
ಇಂದ್ರಾಗ್ನಿಮೃತ್ಯವಸ್ತದ್ವತ್ಸಾಽಹಂ ಸರ್ವೋತ್ತಮಾ ಸ್ಮೃತಾ ॥೭೮॥

ಮತ್ಪ್ರಸಾದಾದ್ಭವದ್ಭಿಸ್ತು ಜಯೋ ಲಬ್ಧೋಽಸ್ತಿ ಸರ್ವಥಾ ।
ಯುಷ್ಮಾನಹಂ ನರ್ತಯಾಮಿ ಕಾಷ್ಠಪುತ್ರಳಿಕೋಪಮಾನ್ ॥೭೯॥

ಕದಾಚಿದ್ದೇವವಿಜಯಂ ದೈತ್ಯಾನಾಂ ವಿಜಯಂ ಕ್ವಚಿತ್ ।
ಸ್ವತಂತ್ರಾ ಸ್ವೇಚ್ಛಯಾ ಸರ್ವಂ ಕುರ್ವೇ ಕರ್ಮಾನುರೋಧತಃ ॥೮೦॥

ತಾಂ ಮಾಂ ಸರ್ವಾತ್ಮಿಕಾಂ ಯೂಯಂ ವಿಸ್ಮೃತ್ಯ ನಿಜಗರ್ವತಃ ।
ಅಹಂಕಾರಾವೃತಾತ್ಮಾನೋ ಮೋಹಮಾಪ್ತಾ ದುರಂತಕಂ ॥೮೧॥

---

ನನ್ನ ಭಯದಿಂದಲೇ ಗಾಳಿಯು ಬೀಸುವುದು. ಸೂರ್ಯನು ಸಂಚರಿಸುವನು. ದೇವೇಂದ್ರನೂ, ಅಗ್ನಿಯೂ, ಮೃತ್ಯುದೇವತೆಯೂ, ತಮ್ಮ ತಮ್ಮ ಕೆಲಸಗಳನ್ನು ಮಾಡುವರು. ಆದುದರಿಂದ ನಾನೇ ಸರ್ವದೇವತೆಗಳಿಗಿಂತ ಶ್ರೇಷ್ಠಳು. ಇಲ್ಲಿಯ ವರೆಗೆ ಯಕ್ಷನ ಸ್ವರೂಪವನ್ನು ವಿವರಿಸಿ ಇಲ್ಲಿಂದ ಮುಂದೆ ಯಾವ ಕಾರಣದಿಂದ ಈ ಸ್ವರೂಪವು ಕಾಣಿಸಿಕೊಂಡಿತು ? ಎಂಬ ದೇವೇಂದ್ರನ ಪ್ರಶ್ನೆಗೆ ಉತ್ತರವನ್ನು ದೇವಿಯು ಹೇಳುವಳು. ||೭೮||

ನನ್ನ ಅನುಗ್ರಹದಿಂದಲೇ ನಿಮಗೆ ಜಯವುಂಟಾಗಿರುವುದು. ಮರದ ಬೊಂಬೆಗಳಂತಿರುವ ನಿಮ್ಮನ್ನು ನಾನು ಕುಣಿಸುತ್ತಿರುವೆನು ||೭೯||

ಕೆಲವು ಕಾಲದಲ್ಲಿ ದೇವತೆಗಳಿಗೂ, ಕೆಲವು ಸಮಯದಲ್ಲಿ ದೈತ್ಯರಿಗೂ ಜಯವುಂಟಾಗುವುದು. ನನ್ನ ಇಚ್ಛೆಯಿಂದ ನಾನು ಸ್ವತಂತ್ರಳಾದರೂ ಪ್ರಾಣಿಗಳ ಕರ್ಮಾನುಸಾರವಾದ ಒಂದು ನಿಯಮದಿಂದ ನಾನು ಕಾರ್ಯಗಳನ್ನು ಮಾಡುವೆನು. ಆದುದರಿಂದ ಜೀವರಿಗೆ ಅಸ್ವಾತಂತ್ರ್ಯವಾಗಲಿ, ನನಗೆ ವೈಷಮ್ಯನೈರ್ಘೃಣ್ಯದೋಷ ಗಳಾಗಲಿ, ಇಲ್ಲವೆಂದು ಭಾವವು. ||೮೦||

ಸರ್ವಾತ್ಮಸ್ವರೂಪಳಾದ ನನ್ನನ್ನು ನೀವು ಮರೆತು, ನಿಮ್ಮ ಶಕ್ತಿಯೇ ಹೆಚ್ಚೆಂದು ಅಹಂಕಾರದಿಂದ ಕೂಡಿ ನಿವಾರಣೆಮಾಡಲಸಾಧ್ಯವಾದ ಅಜ್ಞಾನವನ್ನು ಹೊಂದಿದಿರಿ. ||೮೧||

**ಅನುಗ್ರಹಂ ತತಃ ಕರ್ತುಂ ಯುಷ್ಮದ್ದೇಹಾದನುತ್ತಮಂ ।**
**ನಿಃಸೃತಂ ಸಹಸಾ ತೇಜೋ ಮದೀಯಂ ಯಕ್ಷಮಿತ್ಯಪಿ ॥೮೨॥**

**ಅತಃ ಪರಂ ಸರ್ವಭಾವೈರ್ಹಿತ್ವಾ ಗರ್ವಂ ತು ದೇಹಜಂ ।**
**ಮಾಮೇವ ಶರಣಂ ಯಾತ ಸಚ್ಚಿದಾನಂದರೂಪಿಣೀಂ ॥೮೩॥**

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ಚ ಮಹಾದೇವೀ ಮೂಲಪ್ರಕೃತಿರೀಶ್ವರೀ ।**
**ಅಂತರ್ಧಾನಂ ಗತಾ ಸದ್ಯೋ ಭಕ್ತ್ಯಾ ದೇವೈರಭಿಷ್ಟುತಾ ॥೮೪॥**

**ತತಃ ಸರ್ವೇ ಸ್ವಗರ್ವಂ ತು ವಿಹಾಯ ಪದಪಂಕಜಂ ।**
**ಸಮ್ಯಗಾರಾಧಯಾಮಾಸುರ್ಭಗವತ್ಯಾಃ ಪರಾತ್ಪರಂ ॥೮೫॥**

**ತ್ರಿಸಂಧ್ಯಂ ಸರ್ವದಾ ಸರ್ವೇ ಗಾಯತ್ರೀಜಪತತ್ಪರಾಃ ।**
**ಯಜ್ಞಭಾಗಾದಿಭಿಃ ಸರ್ವೇ ದೇವೀಂ ನಿತ್ಯಂ ಸಿಷೇವಿರೇ ॥೮೬॥**

---

ನಿಮಗೆ ಅನುಗ್ರಹವನ್ನು ಮಾಡಿ, ಜ್ಞಾನವನ್ನುಂಟುಮಾಡಬೇಕೆಂಬ ಉದ್ದೇಶದಿಂದ ನಿಮ್ಮಲ್ಲಿ ಶಕ್ತಿರೂಪವಾಗಿದ್ದ ನನ್ನ ಶ್ರೇಷ್ಠವಾದ ತೇಜಸ್ಸು ನಿಮ್ಮಿಂದ ಹೊರಹೊರಟು ಈ ಯಕ್ಷರೂಪದಿಂದ ಕಾಣಿಸಿಕೊಂಡಿರುವುದು. ॥೮೨॥

ಆದುದರಿಂದ ಇಲ್ಲಿಂದ ಮುಂದೆ ನೀವು ಶರೀರ ಸಂಬಂಧವಾದ ಗರ್ವವನ್ನು ಬಿಟ್ಟು ಸಂಪೂರ್ಣವಾದ ಭಕ್ತಿಯಿಂದ ಸಚ್ಚಿದಾನಂದ ಸ್ವರೂಪಳಾದ ನನ್ನನ್ನೇ ಶರಣು ಹೊಂದಿರಿ. ॥೮೩॥

ವ್ಯಾಸರು ಹೇಳಿದರು—ಮೂಲಪ್ರಕೃತಿಯೂ, ಸರ್ವೇಶ್ವರಿಯೂ ಆದ ಉಮಾದೇವಿಯು ಹೀಗೆ ಹೇಳುತ್ತಲು, ದೇವತೆಗಳು ಭಕ್ತಿಯಿಂದ ಸ್ತೋತ್ರಮಾಡುತ್ತಿರಲು, ಆ ಕ್ಷಣದಲ್ಲಿಯೇ ದೇವಿಯು ಅಂತರ್ಧಾನವನ್ನು ಹೊಂದಿದಳು. ॥೮೪॥

ಆ ದಿನ ಮೊದಲುಗೊಂಡು ಸಮಸ್ತ ದೇವತೆಗಳೂ ತಮ್ಮ ಅಹಂಕಾರವನ್ನು ಬಿಟ್ಟು ಶ್ರೇಷ್ಠವಾದ ದೇವಿಯ ಪಾದಪದ್ಮವನ್ನು ಚೆನ್ನಾಗಿ ಪೂಜಿಸಿದರು. ॥೮೫॥

ಪ್ರತಿದಿನವೂ ಮೂರು ಸಂಧ್ಯಾಕಾಲಗಳಲ್ಲಿಯೂ ಗಾಯತ್ರೀ ಜಪದಲ್ಲಾಸಕ್ತಿಯುಳ್ಳವರಾಗಿ ಯಜ್ಞಭಾಗಾದಿಗಳಿಂದ ದೇವಿಯನ್ನು ಪ್ರತಿದಿನವೂ ಪೂಜಿಸುತ್ತಿದ್ದರು. ॥೮೬॥

**ಏವಂ ಸತ್ಯಯುಗೇ ಸರ್ವೇ ಗಾಯತ್ರೀ ಜಪತತ್ಪರಾಃ ।**
**ತಾರಹೃಲ್ಲೇಖಯೋಶ್ಚಾಪಿ ಜಪೇ ನಿಷ್ಣಾತಮಾನಸಾಃ ॥೮೭॥**

**ನ ವಿಷ್ಣೂಪಾಸನಾ ನಿತ್ಯಾ ವೇದೇನೋಕ್ತಾ ತು ಕುತ್ರಚಿತ್ ।**
**ನ ವಿಷ್ಣುದೀಕ್ಷಾ ನಿತ್ಯಾಽಸ್ತಿ ಶಿವಸ್ಯಾಪಿ ತಥೈವ ಚ ॥೮೮॥**

**ಗಾಯತ್ರ್ಯುಪಾಸನಾ ನಿತ್ಯಾ ಸರ್ವ ವೇದೈಃ ಸಮೀರಿತಾ ।**
**ಯಯಾ ವಿನಾ ತ್ವಧಃ ಪಾತೋ ಬ್ರಾಹ್ಮಣಸ್ಯಾಸ್ತಿ ಸರ್ವಥಾ ॥೮೯॥**

**ತಾವತಾ ಕೃತಕೃತ್ಯತ್ವಂ ನಾನ್ಯಾಪೇಕ್ಷಾ ದ್ವಿಜಸ್ಯ ಹಿ ।**
**ಗಾಯತ್ರೀ ಮಾತ್ರ ನಿಷ್ಣಾತೋ ದ್ವಿಜೋ ಮೋಕ್ಷಮವಾಪ್ನುಯಾತ್ ॥೯೦॥**

---

ಈ ರೀತಿಯಲ್ಲಿ ಕೃತಯುಗದಲ್ಲಿ ಸಕಲ ದ್ವಿಜರೂ ದೇವತೆಗಳೂ ಮೂಲ ಪ್ರಕೃತಿವಾಚಕವಾದ ಗಾಯತ್ರೀ, ಪ್ರಣವ, ಹೃಲ್ಲೇಖಾ ಮಂತ್ರಗಳನ್ನು ಜಪಮಾಡುವುದರಲ್ಲಿ ಆಸಕ್ತರಾಗಿದ್ದರು. ॥೮೭॥

ವಿಷ್ಣುಶಿವರ ಉಪಾಸನೆಯು ನಿತ್ಯವಾದುದೆಂದು ವೇದದಲ್ಲಿ ಎಲ್ಲಿಯೂ ಹೇಳಿಲ್ಲ. ವಿಷ್ಣುದೀಕ್ಷೆಯಾಗಲಿ, ಶಿವದೀಕ್ಷೆಯಾಗಲಿ ನಿತ್ಯವಾದುದಲ್ಲ. ಲೋಕದಲ್ಲಿ ಶಿವ, ವಿಷ್ಣು, ಗಣಪತಿ ಮುಂತಾದ ದೇವತೋಪಾಸಕರಿರುವುದರಿಂದ ಈ ದೇವತೋಪಾಸನೆಗಳು ಕಾಮ್ಯವಾದುವುಗಳೆಂದು ಗೊತ್ತಾಗುವುದು. ॥೮೮॥

ದ್ವಿಜನಿಗೆ ಗಾಯತ್ರಿಯ ಉಪಾಸನೆಯು ನಿತ್ಯವಾದುದು ಎಂದು ಸಕಲ ವೇದಗಳೂ ಹೇಳುವುವು. ಬ್ರಾಹ್ಮಣನು ಗಾಯತ್ರ್ಯುಪಾಸನೆಯನ್ನು ಮಾಡದಿದ್ದರೆ ಪಾಪಿಯಾಗುವನು. ಅವನಿಗೆ ನರಕಪ್ರಾಪ್ತಿಯಾಗುವುದೆಂದು ವೇದವು ಹೇಳುವುದು. ಶಿವ, ವಿಷ್ಣು, ಗಣಪತಿ ಮುಂತಾದ ದೇವತೋಪಾಸನೆಯನ್ನು ಮಾಡದಿದ್ದರೆ ಪಾಪವು ಬರುವುದೆಂದು ಎಲ್ಲಿಯೂ ಹೇಳಿಲ್ಲ. ಸಮಸ್ತ ದ್ವಿಜರೂ ಗಾಯತ್ರೀ ಮಂತ್ರೋಪದೇಶರೂಪವಾದ ದೀಕ್ಷೆಯನ್ನು ವಹಿಸುವರು. ಆದುದರಿಂದ ಗಾಯತ್ರೀ ದೀಕ್ಷೆಯೇ ನಿತ್ಯವಾದುದು. ॥೮೯॥

ದ್ವಿಜನು ಗಾಯತ್ರಿಯ ಉಪಾಸನೆಯಿಂದಲೇ ಕೃತಾರ್ಥನಾಗುವನು. ಮತ್ತೊಂದು ದೇವತೋಪಾಸನೆಯ ಅವಶ್ಯಕತೆಯಿಲ್ಲವು. ಗಾಯತ್ರೀ ಮಂತ್ರ ಒಂದನ್ನೇ ಪುರಶ್ಚರಣೆ ಮಾಡುವ ದ್ವಿಜನು ಮೋಕ್ಷವನ್ನೂ ಹೊಂದುವನು. ॥೯೦॥

**ಕುರ್ಯಾದನ್ಯನ್ನವಾಕುರ್ಯಾದಿತಿ ಪ್ರಾಹ ಮನುಃ ಸ್ವಯಂ ।**
**ವಿಹಾಯ ತಾಂ ತು ಗಾಯತ್ರೀಂ ವಿಷ್ಣೂಪಾಸ್ತಿಪರಾಯಣಃ ॥೯೦॥**

**ಶಿವೋಪಾಸ್ತಿರತೋ ವಿಪ್ರೋ ನರಕಂ ಯಾತಿ ಸರ್ವಥಾ ।**
**ತಸ್ಮಾದಾದ್ಯಯುಗೇ ರಾಜರ್ಗಾಯತ್ರೀ ಜಪ ತತ್ಪರಾಃ ॥೯೨॥**
**ದೇವೀಪದಾಂಬುಜರತಾ ಆಸನ್ಸರ್ವೇ ದ್ವಿಜೋತ್ತಮಾಃ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ**
**ಅಷ್ಟಮೋಽಧ್ಯಾಯಃ**

---

ಇತರ ದೇವತೋಪಾಸನೆಯನ್ನು ಮಾಡಲಿ ಅಥವಾ ಮಾಡದೆ ಹೋಗಲಿ ದೋಷವಿಲ್ಲವು. ಗಾಯತ್ರಿಯ ಉಪಾಸನೆಯನ್ನು ಮಾತ್ರ ಬಿಡತಕ್ಕುದಲ್ಲವೆಂದು ಮನುವು ಹೇಳಿರುವನು.

ಗಾಯತ್ರೀ ಮಂತ್ರವನ್ನು ಬಿಟ್ಟು, ವಿಷ್ಣುಮಂತ್ರವನ್ನಾಗಲಿ, ಶಿವಮಂತ್ರವನ್ನಾಗಲಿ ಉಪಾಸನೆ ಮಾಡತಕ್ಕ ಬ್ರಾಹ್ಮಣನು ಖಂಡಿತವಾಗಿ ನರಕಕ್ಕೆ ಹೋಗುವನು. ವಿಷ್ಣ್ವಾದಿ ಮಂತ್ರಗಳನ್ನು ಬಿಟ್ಟು, ಗಾಯತ್ರೀ ಮಂತ್ರ ಒಂದನ್ನೇ ಉಪಾಸನೆಮಾಡತಕ್ಕವನು ಮೋಕ್ಷವನ್ನು ಹೊಂದುವನು. ಆದುದರಿಂದ ಶ್ರೇಷ್ಠವಾದ ಗಾಯತ್ರೀ ದೇವಿಯ ಉಪಾಸನೆಯೇ ನಿತ್ಯವಾದುದೂ ಸರ್ವೋತ್ತಮವಾದುದೂ ಆಗಿರುವುದು. ಈ ಗಾಯತ್ರಿಯೇ ಪರಾಶಕ್ತಿಸ್ವರೂಪಳಾದ ದೇವಿಯು ಎಂದು ತಾತ್ಪರ್ಯವು.॥೯೧॥

ಈ ಕಾರಣದಿಂದ ಎಲೈ ರಾಜನೇ, ಕೃತಯುಗದಲ್ಲಿ ಸಮಸ್ತ ದ್ವಿಜಶ್ರೇಷ್ಠರೂ ಗಾಯತ್ರೀಜಪದಲ್ಲಿ ಆಸಕ್ತರಾಗಿ, ಪರಾಶಕ್ತಿಯಾದ ಗಾಯತ್ರೀದೇವಿಯ ಪಾದಸೇವಕರಾಗಿದ್ದರು. ಮೊದಲು ದ್ವಿಜರಿಗೆ ವೇದವು ಗಾಯತ್ರಿಯ ಮಂತ್ರವನ್ನೇ ಉಪದೇಶ ಮಾಡಿದುದರಿಂದ ಆ ಮಂತ್ರದಿಂದಲೇ ಅವರ ಇಷ್ಟಾರ್ಥಗಳೆಲ್ಲವೂ ಸಿದ್ಧವಾಗುತ್ತಿರುವಲ್ಲಿ ಅನ್ಯದೇವತೋಪಾಸನೆಯು ಹೆಚ್ಚಿನಪ್ರಯೋಜನವಿಲ್ಲದುದೆಂದು ಭಾವವು.॥೯೨॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||



# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

### || ನವಮೋಽಧ್ಯಾಯಃ ||

### ಒಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಕದಾಚಿದಥ ಕಾಲೇ ತು ದಶಪಂಚಸಮಾ ವಿಭೋ ।**
**ಪ್ರಾಣಿನಾಂ ಕರ್ಮವಶತೋ ನ ವವರ್ಷ ಶತಕ್ರತುಃ ॥೧॥**

**ಅನಾವೃಷ್ಟ್ಯಾಽತಿ ದುರ್ಭಿಕ್ಷಮಭವತ್ಕ್ಷಯಕಾರಕಂ ।**
**ಗೃಹೇಗೃಹೇ ಶವಾನಾಂ ತು ಸಂಖ್ಯಾಂ ಕರ್ತುಂ ನ ಶಕ್ಯತೇ ॥೨॥**

---

ವ್ಯಾಸನು ಹೇಳಿದನು—ಈ ಅಧ್ಯಾಯದಲ್ಲಿ ಒಂದು ನೂರು ಶ್ಲೋಕಗಳಿಂದ ಗೌತಮಋಷಿಯ ಶಾಪದಿಂದ ಬ್ರಾಹ್ಮಣರಿಗೆ ಅನ್ಯದೇವತೋಪಾಸನೆಯಲ್ಲಿ ಶ್ರದ್ಧೆಯುಂಟಾಯಿತೆಂಬ ಸಂಗತಿಯನ್ನು ವಿವರಿಸಲಾಗುವುದು. ಕೃತಯುಗದಲ್ಲಿ ಪರಾಶಕ್ತಿಯ ಭಕ್ತಿಯನ್ನು ಆ ದೇವಿಯ ಮಹಿಮೆಯನ್ನು ಪ್ರಕಾಶಪಡಿಸುವುದರ ಮೂಲಕವಾಗಿ ವಿವರಿಸಿ, ಬ್ರಾಹ್ಮಣರಿಗೆ ಅನ್ಯದೇವತಾಭಕ್ತಿಯುಂಟಾಗಲು ಕಾರಣವೇನೆಂದು ಕೇಳಿದ ರಾಜನ ಪ್ರಶ್ನೆಗೆ ಉತ್ತರವಾಗಿ ವ್ಯಾಸಮುನಿಯು ಪೂರ್ವವೃತ್ತಾಂತವನ್ನು ಹೇಳುತ್ತಾನೆ. ಎಲೈ ರಾಜನೇ, ಒಂದಾನೊಂದು ಕಾಲದಲ್ಲಿ ಪ್ರಾಣಿಗಳ ಕರ್ಮಫಲಾನುಭವವಾಗ ಬೇಕಾದ ಕಾರಣದಿಂದ ಹದಿನೈದು ವರ್ಷಗಳವರೆಗೆ ದೇವೇಂದ್ರನು ಮಳೆಯನ್ನು ಸುರಿಸಲಿಲ್ಲ. ||೧||

ಮಳೆಯಿಲ್ಲದುದರಿಂದ ಪ್ರಾಣಿಗಳ ನಾಶಕ್ಕೆ ಕಾರಣವಾದ ಬರಗಾಲವು ಬಂದಿತು. ಪ್ರತಿಯೊಂದು ಮನೆಯಲ್ಲೂ ಹೆಣಗಳಿದ್ದುದರಿಂದ ಅವುಗಳನ್ನು ಲೆಖ್ಖ ಮಾಡಲು ಸಾಧ್ಯವಾಗಲಿಲ್ಲ. ಕೆಲವರು ಹೊಟ್ಟೆಯ ಹಸಿವಿನಿಂದ ಪೀಡಿತರಾಗಿ

ಕೇಚಿದಶ್ವಾನ್ನರಾಹಾನ್ವಾ ಭಕ್ಷಯಂತಿ ಕ್ಷುಧಾರ್ದಿತಾಃ ।
ಶವಾನಿ ಚ ಮನುಷ್ಯಾಣಾಂ ಭಕ್ಷಯಂತ್ಯಪರೇ ಜನಾಃ ॥೩॥

ಬಾಲಕಂ ಬಾಲಜನನೀ ಸ್ತ್ರಿಯಂ ಪುರುಷ ಏವ ಚ ।
ಭಕ್ಷಿತುಂ ಚಲಿತಾಃ ಸರ್ವೇ ಕ್ಷುಧಿತಾಃ ಪೀಡಿತಾ ನರಾಃ ॥೪॥

ಬ್ರಾಹ್ಮಣಾ ಬಹವಸ್ತತ್ರ ವಿಚಾರಂ ಚಕ್ರುರುತ್ತಮಂ ।
ತಪೋಧನೋ ಗೌತಮೋಽಸ್ತಿ ಸ ನಃ ಖೇದಂ ಹರಿಷ್ಯತಿ ॥೫॥

ಸರ್ವೈರ್ಮಿಲಿತ್ವಾ ಗಂತವ್ಯಂ ಗೌತಮಸ್ಯಾಶ್ರಮೋಽಧುನಾ ।
ಗಾಯತ್ರೀಜಪಸಂಸಕ್ತಾ ಗೌತಮಸ್ಯಾಶ್ರಮೋಽಧುನಾ ॥೬॥

ಸುಭಿಕ್ಷಂ ಶ್ರೂಯತೇ ತತ್ರ ಪ್ರಾಣಿನೋ ಬಹವೋ ಗತಾಃ ।
ಏವಂ ವಿಮೃಶ್ಯ ಭೂದೇವಾಃ ಸಾಗ್ನಿಹೋತ್ರಾಃ ಕುಟುಂಬಿನಃ ॥೭॥

ಸಗೋಧನಾಃ ಸದಾಸಾಶ್ಚ ಗೌತಮಸ್ಯಾಶ್ರಮಂ ಯಯುಃ ।
ಪೂರ್ವದೇಶಾದ್ಯಯುಃ ಕೇಚಿತ್ಕೇಚಿದ್ದಕ್ಷಿಣದೇಶತಃ ॥೮॥

---

ಕುದುರೆಯನ್ನೋ, ಹಂದಿಯನ್ನೋ ತಿನ್ನುತ್ತಿದ್ದರು. ಮತ್ತೆ ಕೆಲವರು ಮನುಷ್ಯರ ಹೆಣಗಳನ್ನೇ ತಿನ್ನುತ್ತಿದ್ದರು. ॥೨-೩॥

ಹಸಿವಿನಿಂದ ಹಿಂಸೆಪಡುತ್ತಿರುವ ಜನರಲ್ಲಿ ತಾಯಿಯು ಮಗುವನ್ನೂ, ಗಂಡನು ಹೆಂಡಿತಿಯನ್ನೂ ತಿನ್ನುವ ಪ್ರಯತ್ನವೂ ನಡೆಯಿತು. ॥೪॥

ಅನೇಕ ಬ್ರಾಹ್ಮಣರು ಸೇರಿ ಉತ್ತಮವಾದ ವಿಚಾರಮಾಡಿ, ಗಾಯತ್ರೀ ಜಪಾಸಕ್ತನಾದ, ಮಹಾತಪಸ್ವಿಯಾದ ಗೌತಮನ ಆಶ್ರಮಕ್ಕೆ ಹೋಗೋಣ. ಆ ಮಹರ್ಷಿಯ ಆಶ್ರಮದಲ್ಲಿ ಈಗ ಮಳೆ ಬೆಳೆ ಚನ್ನಾಗಿರುತ್ತದೆ. ಅನೇಕರು ಅಲ್ಲಿಗೆ ಹೋಗಿರುವರೆಂದು ಕೇಳಿದ್ದೇವೆ. ಎಂದು ನಿಶ್ಚಯಿಸಿದರು. ॥೫-೬॥

ಬ್ರಾಹ್ಮಣರು ಈ ರೀತಿಯಲ್ಲಿ ವಿಚಾರಮಾಡಿ ತಮ್ಮ ಹೆಂಡಿರು ಮಕ್ಕಳೊಡನೆಯೂ, ಹಸುಗಳೂ ಮತ್ತು ಸೇವಕರೊಡನೆಯೂ, ಅಗ್ನಿಹೋತ್ರಗಳನ್ನು ತೆಗೆದುಕೊಂಡು ಗೌತಮನ ಆಶ್ರಮಕ್ಕೆ ಹೋದರು. ॥೭॥

ಪೂರ್ವಾದಿ ಸಮಸ್ತ ದಿಕ್ಕುಗಳಿಂದಲೂ ಬಂದ ಬ್ರಾಹ್ಮಣರ ಗುಂಪನ್ನು ನೋಡಿ ಗೌತಮನು ಅವರಿಗೆ ನಮಸ್ಕರಿಸಿ ಆಸನಾದ್ಯುಪಚಾರಗಳಿಂದ ಅವರನ್ನು

ಪಾಶ್ಚಾತ್ಯಾ ಔತ್ತರಾಹಾಶ್ಚ ನಾನಾ ದಿಗ್ಭ್ಯಃ ಸಮಾಯಯುಃ ।
ದೃಷ್ಟ್ವಾ ಸಮಾಜಂ ವಿಪ್ರಾಣಾಂ ಪ್ರಣನಾಮ ಸ ಗೌತಮಃ ॥೯॥

ಆಸನಾದ್ಯುಪಚಾರೈಶ್ಚ ಪೂಜಯಾಮಾಸ ವಾಡವಾನ್ ।
ಚಕಾರ ಕುಶಲಪ್ರಶ್ನಂ ತತಶ್ಚಾಗಮಕಾರಣಂ ॥೧೦॥

ತೇ ಸರ್ವೇ ಸ್ವಸ್ವವೃತ್ತಾಂತಂ ಕಥಯಾಮಾಸುರುತ್ಸ್ಮಯಾಃ ।
ದೃಷ್ಟ್ವಾ ತಾನ್ದುಃಖಿತಾನ್ವಿಪ್ರಾನಭಯಂ ದತ್ತವಾನ್ಮುನಿಃ ॥೧೧॥

ಯುಷ್ಮಾಕಮೇತತ್ಸದನಂ ಭವದ್ದಾಸೋಽಸ್ಮಿ ಸರ್ವಥಾ ।
ಕಾ ಚಿಂತಾ ಭವತಾಂ ವಿಪ್ರಾ ಮಯಿ ದಾಸೇ ವಿರಾಜತಿ ॥೧೨॥

ಧನ್ಯೋಽಹಮಸ್ಮಿನ್ಸಮಯೇ ಯೂಯಂ ಸರ್ವೇ ತಪೋಧನಾಃ ।
ಯೇಷಾಂ ದರ್ಶನಮಾತ್ರೇಣ ದುಷ್ಕೃತಂ ಸುಕೃತಾಯತೇ ॥೧೩॥

ತೇ ಸರ್ವೇ ಪಾದರಜಸಾ ಪಾವಯಂತಿ ಗೃಹಂ ಮಮ ।
ಕೋ ಮದನ್ಯೋ ಭವೇದ್ಧನ್ಯೋ ಭವತಾಂ ಸಮನುಗ್ರಹಾತ್ ॥೧೪॥
ಸ್ಥೇಯಂ ಸರ್ವೈಃ ಸುಖೇನೈವ ಸಂಧ್ಯಾಜಪಪರಾಯಣೈಃ ।

---

ಪೂಜಿಸಿ ಅವರ ಕ್ಷೇಮಸಮಾಚಾರಗಳನ್ನು ಕೇಳಿ ಅಲ್ಲಿಗೆ ಬಂದ ಕಾರಣವನ್ನು ಪ್ರಶ್ನೆ ಮಾಡಿದನು. ॥೮-೯-೧೦॥

ಆ ಬ್ರಾಹ್ಮಣರೆಲ್ಲರೂ ನಗುತ್ತ ತಮ್ಮ ತಮ್ಮ ವೃತ್ತಾಂತವನ್ನು ಹೇಳಿದರು. ದುಃಖಿತರಾದ ಆವರನ್ನು ನೋಡಿ ಗೌತಮನು ಅಭಯಪ್ರದಾನ ಮಾಡಿದನು. ॥೧೧॥

ಈ ಮನೆಯು ನಿಮ್ಮದೇ ಆಗಿರುತ್ತದೆ. ನಾನು ನಿಮ್ಮ ಸೇವಕನಾಗಿರುವೆನು. ನೀವು ಚಿಂತಿಸಬೇಕಾದುದಿಲ್ಲ. ತಪಸ್ವಿಗಳಾದ ನೀವು ನನ್ನ ಮನೆಗೆ ಬಂದುದರಿಂದ ನಾನು ಕೃತಾರ್ಥನಾದೆನು. ನಿಮ್ಮ ದರ್ಶನದಿಂದ ನನ್ನ ಪಾಪಗಳು ಪುಣ್ಯಗಳಾಗಿ ಪರಿಣಮಿಸುವುವು. ॥೧೨-೧೩॥

ನಿಮ್ಮ ಪಾದಧೂಳಿಯಿಂದ ನನ್ನ ಮನೆಯನ್ನು ಪರಿಶುದ್ಧಮಾಡಿದಿರಿ. ನಿಮ್ಮ ಅನುಗ್ರಹದಿಂದ ನನಗಿಂತ ಕೃತಾರ್ಥನಾದವನು ಯಾವನಿರುವನು? ಸಂಧ್ಯಾಜಪಾನುಷ್ಠಾನಗಳನ್ನು ಮಾಡುತ್ತ ಸುಖವಾಗಿ ಎಲ್ಲರೂ ಇಲ್ಲಿಯೇ ಇರಿ. ಎಂದನು. ॥೧೪॥

|| ವ್ಯಾಸ ಉವಾಚ ||

ಇತಿ ಸರ್ವಾನ್ಸಮಾಶ್ವಾಸ್ಯ ಗೌತಮೋ ಮುನಿರಾಟ್ ತತಃ ||೧೫||

ಗಾಯತ್ರೀಂ ಪ್ರಾರ್ಥಯಾಮಾಸ ಭಕ್ತಿಸನ್ನತಕಂಧರಃ ।
ನಮೋ ದೇವಿ ಮಹಾವಿದ್ಯೇ ವೇದಮಾತಃ ಪರಾತ್ಪರೇ ||೧೬||

ವ್ಯಾಹೃತ್ಯಾದಿಪರಾಮಂತ್ರರೂಪೇ ಪ್ರಣವರೂಪಿಣಿ ।
ಸಾಮ್ಯಾವಸ್ಥಾತ್ಮಿಕೇ ಮಾತರ್ನಮೋ ಹ್ರೀಂಕಾರರೂಪಿಣಿ ||೧೭||

ಸ್ವಾಹಾ ಸ್ವಧಾಸ್ವರೂಪೇ ತ್ವಾಂ ನಮಾಮಿ ಸಕಲಾರ್ಥದಾಂ ।
ಭಕ್ತಕಲ್ಪಲತಾಂ ದೇವೀಮವಸ್ಥಾತ್ರಯ ಸಾಕ್ಷಿಣೀಂ ||೧೮||

ತುರ್ಯಾತೀತಸ್ವರೂಪಾಂ ಚ ಸಚ್ಚಿದಾನಂದ ರೂಪಿಣೀಂ ।
ಸರ್ವವೇದಾಂತಸಂವೇದ್ಯಾಂ ಸೂರ್ಯಮಂಡಲವಾಸಿನೀಂ ||೧೯||

ಪ್ರಾತರ್ಬಾಲಾಂ ರಕ್ತವರ್ಣಾಂ ಮಧ್ಯಾಹ್ನೇ ಯುವತೀಂ ಪರಾಂ ।
ಸಾಯಾಹ್ನೇ ಕೃಷ್ಣವರ್ಣಾಂ ತಾಂ ವೃದ್ಧಾಂ ನಿತ್ಯಂ ನಮಾಮ್ಯಹಂ ||೨೦||

---

ವ್ಯಾಸನು ಹೇಳಿದನು—ಹೀಗೆಂದು ಎಲ್ಲರನ್ನೂ ಸಮಾಧಾನಪಡಿಸಿ, ಆಮೇಲೆ ಮುನಿಶ್ರೇಷ್ಠನಾದ ಗೌತಮನು ಭಕ್ತಿಯಿಂದ ಕುತ್ತಿಗೆಯನ್ನು ಬಗ್ಗಿಸಿಕೊಂಡು ಗಾಯತ್ರೀದೇವಿಯನ್ನು ಪ್ರಾರ್ಥಿಸಿದನು. ||೧೫||

ಅತ್ಯಂತ ಶ್ರೇಷ್ಠಳಾದ, ವೇದಕ್ಕೆ ತಾಯಿಯಾದ ಮಹಾ ವಿದ್ಯಾಸ್ವರೂಪಳೇ, ವ್ಯಾಹೃತಿಪ್ರಣವ ಮುಂತಾದ ಮಹಾ ಮಂತ್ರಸ್ವರೂಪಳೇ, ಗುಣತ್ರಯ ಸಾಮ್ಯಾವಸ್ಥಾರೂಪಳಾಗಿ, ಸ್ವಾಹಾಸ್ವಧಾರೂಪಳಾಗಿ ಹ್ರೀಂಕಾರಸ್ವರೂಪಳಾದ ನಿನಗೆ ನಾನು ನಮಸ್ಕಾರವನ್ನು ಮಾಡುವೆನು. ಕಲ್ಪವೃಕ್ಷದಂತೆ ಭಕ್ತರ ಸಮಸ್ತ ಇಷ್ಟಾರ್ಥಗಳನ್ನೂ ಕೊಡತಕ್ಕ ನೀನು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೂ ಸಾಕ್ಷಿಸ್ವರೂಪವಾಗಿರುವೆ. ||೧೬-೧೭-೧೮||

ನೀನು ಮಾಯಾಶಬಲಬ್ರಹ್ಮಸ್ವರೂಪಕ್ಕಿಂತ ಮೀರಿದ ಸಚ್ಚಿದಾನಂದ ಸ್ವರೂಪವಾದ ನಿರ್ಗುಣಬ್ರಹ್ಮಸ್ವರೂಪಳು; ಸಮಸ್ತ ವೇದಾಂತಗಳಿಂದ ನಿನ್ನನ್ನು ತಿಳಿಯಬೇಕಾಗಿರುವುದು. ನೀನು ಸೂರ್ಯಮಂಡಲದಲ್ಲಿ ವಾಸಮಾಡತಕ್ಕವಳು. ಪ್ರಾತಃಕಾಲದಲ್ಲಿ ಬಾಲಿಕೆಯಾಗಿಯೂ, ಮಧ್ಯಾಹ್ನದಲ್ಲಿ ಕೆಂಪಾದ ಬಣ್ಣದಿಂದ ಕೂಡಿ

ಸರ್ವಭೂತಾರ್ಂತೇ ದೇವಿ ಕ್ಷಮಸ್ವ ಪರಮೇಶ್ವರಿ ।
ಇತಿ ಸ್ತುತಾ ಜಗನ್ಮಾತಾ ಪ್ರತ್ಯಕ್ಷಂ ದರ್ಶನಂ ದದೌ ॥೨೦॥

ಪೂರ್ಣಪಾತ್ರಂ ದದೌ ತಸ್ಮೈ ಯೇನ ಸ್ಯಾತ್ಸರ್ವಪೋಷಣಂ ।
ಉವಾಚ ಮುನಿ ಮಂಬಾ ಸಾ ಯಂ ಯಂ ಕಾಮಂ ತ್ವಮಿಚ್ಛಸಿ ॥೨೨॥

ತಸ್ಯ ಪೂರ್ತಿಕರಂ ಪಾತ್ರಂ ಮಯಾ ದತ್ತಂ ಭವಿಷ್ಯತಿ ।
ಇತ್ಯುಕ್ತ್ವಾಽಂತರ್ದಧೇ ದೇವೀ ಗಾಯತ್ರೀ ಪರಮಾ ಕಲಾ ॥೨೩॥

ಅನ್ನಾನಾಂ ರಾಶಯಸ್ತಸ್ಮಾನ್ನಿರ್ಗತಾಃ ಪರ್ವತೋಪಮಾಃ ।
ಷಡ್ರಸಾ ವಿವಿಧಾ ರಾಜಂಸ್ತೃಣಾನಿ ವಿವಿಧಾನಿ ಚ ॥೨೪॥

ಭೂಷಣಾನಿ ಚ ದಿವ್ಯಾನಿ ಕ್ಷೌಮಾಣಿ ವಸನಾನಿ ಚ ।
ಯಜ್ಞಾನಾಂ ಚ ಸಮಾರಂಭಾಃ ಪಾತ್ರಾಣಿ ವಿವಿಧಾನಿ ಚ ॥೨೫॥

ಯದ್ಯದಿಷ್ಟಮಭೂದ್ರಾಜನ್ಮುನೇಸ್ತಸ್ಯ ಮಹಾತ್ಮನಃ ।
ತತ್ಸರ್ವಂ ನಿರ್ಗತಂ ತಸ್ಮಾದ್ಗಾಯತ್ರೀ ಪೂರ್ಣಪಾತ್ರತಃ ॥೨೬॥

---

ಯೌವನವತಿಯಾಗಿಯೂ, ಸಾಯಂಕಾಲದಲ್ಲಿ ಕಪ್ಪು ಬಣ್ಣದಿಂದ ಕೂಡಿ ವೃದ್ಧಳಾಗಿಯೂ ಕಾಣುತ್ತಿರುವ ನಿನಗೆ ನಮಸ್ಕಾರ ಮಾಡುವೆನು. ಸಮಸ್ತ ಭೂಮಂಡಲವನ್ನೂ ಕಷ್ಟದಿಂದ ಬಿಡಿಸುವ ಪರಮೇಶ್ವರಿಯೇ, ನಮ್ಮ ತಪ್ಪುಗಳನ್ನು ಕ್ಷಮಿಸು. ಎಂದು ಪ್ರಾರ್ಥಿಸಲು, ದೇವಿಯು, ||೧೯-೨೦||

ಪ್ರತ್ಯಕ್ಷಳಾಗಿ ಆ ಮುನಿಗೆ ಸಮಸ್ತರನ್ನೂ ಪೋಷಣೆಮಾಡಲು ಅನುಕೂಲ ವಾದ ಪೂರ್ಣಪಾತ್ರೆಯನ್ನು ಕೊಟ್ಟು ದೇವಿಯು ಆ ಮುನಿಯನ್ನು ಕುರಿತು, " ನೀನು ಯಾವ ಯಾವ ಇಷ್ಟಾರ್ಥಗಳನ್ನು ಅಪೇಕ್ಷಿಸುವೆಯೋ ಅವುಗಳನ್ನು ಈ ಪಾತ್ರೆಯು ಪೂರ್ಣಮಾಡುವುದು " ಎಂದು ಹೇಳಿ ಮರೆಯಾದಳು. ||೨೧-೨೨-೨೩||

ಆ ಗಾಯತ್ರೀದೇವಿಯು ಕೊಟ್ಟ ಪೂರ್ಣಪಾತ್ರೆಯಿಂದ ಪರ್ವತದಂತಿರುವ ಅನ್ನದ ರಾಶಿಗಳೂ, ಷಡ್ರಸಗಳಿಂದ ಕೂಡಿದ ಬಗೆಬಗೆಯಾದ ಭಕ್ಷ್ಯಗಳೂ, ಆಭರಣ ಗಳೂ, ರೇಷ್ಮೆಯ ವಸ್ತ್ರಗಳೂ, ಯಜ್ಞಕ್ಕೆ ಬೇಕಾದ ಪದಾರ್ಥಗಳೂ, ಬಗೆಬಗೆಯ ಪಾತ್ರೆಗಳೂ, ಇನ್ನೂ ಗೌತಮಮುನಿಯು ಅಪೇಕ್ಷಿಸಿದ ಸಕಲ ವಸ್ತುಗಳೂ ಹೊರಗೆ ಬಂದು ಕಾಣಿಸಿಕೊಂಡುವು. ||೨೪-೨೫-೨೬||

ಅಥಾಹೂಯ ಮುನೀನ್ಸರ್ವಾನ್ಮುನಿರಾಡ್ಗೌತಮಸ್ತದಾ ।
ಧನಂ ಧಾನ್ಯಂ ಭೂಷಣಾನಿ ವಸನಾನಿ ದದೌ ಮುದಾ ॥೨೭॥

ಗೋಮಹಿಷ್ಯಾದಿಪಶವೋ ನಿರ್ಗತಾಃ ಪೂರ್ಣಪಾತ್ರತಃ ।
ನಿರ್ಗತಾನ್ಯಜ್ಞಸಂಭಾರಾನ್ಸ್ರುಕ್ಸ್ರುವಪ್ರಭೃತೀನ್ದದೌ ॥೨೮॥

ತೇ ಸರ್ವೇ ಮಿಲಿತಾ ಯಜ್ಞಾಂಶ್ಚಕ್ರಿರೇ ಮುನಿವಾಕ್ಯತಃ ।
ಸ್ಥಾನಂ ತದೇವ ಭೂಯಿಷ್ಠಮಭವತ್ಸ್ವರ್ಗಸನ್ನಿಭಂ ॥೨೯॥

ಯತ್ಕಿಂಚಿತ್ತ್ರಿಷುಲೋಕೇಷು ಸುಂದರಂ ವಸ್ತು ದೃಶ್ಯತೇ ।
ತತ್ಸರ್ವಂ ತತ್ರ ನಿಷ್ಪನ್ನಂ ಗಾಯತ್ರೀದತ್ತಪಾತ್ರತಃ ॥೩೦॥

ದೇವಾಂಗನಾಸಮಾ ದಾರಾಃ ಶೋಭಂತೇ ಭೂಷಣಾದಿಭಿಃ ।
ಮುನಯೋ ದೇವಸದೃಶಾ ವಸ್ತ್ರಚಂದನಭೂಷಣೈಃ ॥೩೧॥

ನಿತ್ಯೋತ್ಸವಃ ಪ್ರವವೃತೇ ಮುನೇರಾಶ್ರಮಮಂಡಲೇ ।
ನ ರೋಗಾದಿ ಭಯಂ ಕಿಂಚಿನ್ನ ಚ ದೈತ್ಯಭಯಂ ಕ್ವಚಿತ್ ॥೩೨॥

---

ಆ ಮೇಲೆ ಮುನಿಶ್ರೇಷ್ಠನಾದ ಗೌತಮನು ಎಲ್ಲ ಋಷಿಗಳನ್ನೂ ಕರೆದು ಧನಗಳನ್ನೂ ಧಾನ್ಯಗಳನ್ನೂ ವಸ್ತ್ರಗಳನ್ನೂ ಪೂರ್ಣಪಾತ್ರದಿಂದ ಹೊರಟ ಗೋವುಗಳನ್ನೂ, ಎಮ್ಮೆಗಳನ್ನೂ ಯಜ್ಞಸಂಬಂಧವಾದ ಸ್ರುಕ್ಸ್ರುವಾದಿ ವಸ್ತುಗಳನ್ನೂ ಸಂತೋಷದಿಂದ ಕೊಟ್ಟನು. ॥೨೭-೨೮॥

ಆ ಬ್ರಾಹ್ಮಣರೆಲ್ಲರೂ ಸೇರಿ ಗೌತಮನ ಮಾತಿನಂತೆ ಅಲ್ಲಿ ಯಜ್ಞವನ್ನು ಮಾಡಿದರು. ಆ ಸ್ಥಳವು ಸ್ವರ್ಗಕ್ಕಿಂತಲೂ ಮನೋಹರವಾಗಿ ಕಾಣಿಸಿತು. ಮೂರು ಲೋಕಗಳಲ್ಲಿಯೂ ಯಾವ ಯಾವ ಸುಂದರ ವಸ್ತುಗಳಿವೆಯೋ ಅವೆಲ್ಲವೂ ಗಾಯತ್ರೀ ದೇವಿಯು ಕೊಟ್ಟ ಪೂರ್ಣಪಾತ್ರೆಯಿಂದ ಆ ಸ್ಥಳದಲ್ಲಿ ಕಾಣಿಸಿಕೊಂಡವು. ॥೨೯-೩೦॥

ಆಭರಣವಸ್ತ್ರಾದಿಗಳನ್ನು ಧರಿಸಿದ ಮುನಿ ಪತ್ನಿಯರು ದೇವಸ್ತ್ರೀಯರಂತೆಯೂ, ಮುನಿಗಳು ದೇವತೆಗಳಂತೆಯೂ ಕಾಣಿಸುತ್ತಿದ್ದರು. ಆ ಗೌತಮ ಮುನಿಯ ಆಶ್ರಮ ಪ್ರದೇಶದಲ್ಲಿ ನಿತ್ಯೋತ್ಸವವು ನಡೆಯುತ್ತಿದ್ದಿತು. ರೋಗಭಯವಾಗಲಿ ರಾಕ್ಷಸರ ಬಾಧೆಯಾಗಲಿ ಅಲ್ಲಿ ಇರಲಿಲ್ಲ. ॥೩೧-೩೨॥

ಸ ಮುನೇರಾಶ್ರಮೋ ಜಾತಃ ಸಮಂತಾಚ್ಛತ ಯೋಜನಃ ।
ಅನ್ಯೇ ಚ ಪ್ರಾಣಿನೋ ಯೇಽಪಿ ತೇಽಪಿ ತತ್ರ ಸಮಾಗತಾಃ ॥೩೩॥

ತಾಂಶ್ಚ ಸರ್ವಾನ್ಸುಪೋಷಾಽಯಂ ದತ್ವಾಽಭಯಮುದಾತ್ಮವಾನ್ ।
ನಾನಾವಿಧೈರ್ಮಹಾಯಜ್ಞೈರ್ವಿಧಿವತ್ಕಲ್ಪಿತೈಃ ಸುರಾಃ ॥೩೪॥
ಸಂತೋಷಂ ಪರಮಂ ಪ್ರಾಪುರ್ಮುನೇಶ್ಚೈವ ಜಗುರ್ಯಶಃ ।

ಅಹೋ ಅಯಂ ನಃ ಕಿಲ ಕಲ್ಪಪಾದಪೋ
ಮನೋರಥಾ ನ್ಪೂರಯತಿ ಪ್ರತಿಷ್ಠಿತಃ ॥
ನೋಚೇದಕಾಂಡೇ ಕ್ವ ಹವಿರ್ವಪಾ ವಾ
ಸುದುರ್ಲಭಾ ಯತ್ರ ತು ಜೀವನಾಶಾ ॥೩೬॥

ಇತ್ಥಂ ದ್ವಾದಶವರ್ಷಾಣಿ ಪುಪೋಷ ಮುನಿಪುಂಗವಾನ್ ।
ಪುತ್ರವನ್ಮುನಿರಾಡ್ಗರ್ವ ಗಂಧೇನ ಪರಿವರ್ಜಿತಃ ॥೩೭॥

---

ಆ ಗೌತಮಾಶ್ರಮವು ಸುತ್ತಲೂ ನೂರು ಗಾವುದ ವಿಸ್ತಾರವುಳ್ಳದಾಯಿತು. ಇತರ ಜನರೂ, ಎಮ್ಮೆ, ಹಸು ಮುಂತಾದ ಪ್ರಾಣಿಗಳೂ ಅಲ್ಲಿ ಬಂದು ಸೇರಿದವು. ಮುನಿಯು ಅವರೆಲ್ಲರಿಗೂ ಅಭಯದಾನ ಮಾಡಿ ಎಲ್ಲರನ್ನೂ ಕಾಪಾಡಿದನು. ವಿಧಿಯನ್ನನುಸರಿಸಿ ಮಾಡಿದ ಬಗೆಬಗೆಯ ಯಜ್ಞಗಳಿಂದ ದೇವತೆಗಳು ಅತ್ಯಂತ ಸಂತೋಷವನ್ನು ಹೊಂದಿ ಆ ಮುನಿಯ ಕೀರ್ತಿಯನ್ನು ಕೊಂಡಾಡಿದರು. ॥೩೩-೩೪॥

ವೃತ್ರಾಸುರನನ್ನು ಸಂಹರಿಸಿದ ದೇವೇಂದ್ರನು ದೇವಸಭೆಯಲ್ಲಿ ಪುನಃ ಪುನಃ ಈ ಮುಂದೆ ಹೇಳುವ ಶ್ಲೋಕವನ್ನು ಗಾನಮಾಡುತ್ತಿದ್ದನು. ॥೩೫॥

ಈ ಗೌತಮಮುನಿಯು ನಮಗೆ ಕಲ್ಪವೃಕ್ಷಸ್ವರೂಪನಾಗಿ ನಮ್ಮ ಇಷ್ಟಾರ್ಥಗಳನ್ನು ಪೂರ್ಣಮಾಡುತ್ತಿರುವನು. ಈ ಮುನಿಯು ನಿಯಮನಿಷ್ಠನಾಗಿ ಯಜ್ಞಾದಿಗಳನ್ನು ಮಾಡದಿದ್ದರೆ, ಜೀವಿಸುವುದೇ ಕಷ್ಟವಾಗಿರುವ ಈ ಬರಗಾಲದಲ್ಲಿ, ಹವಿಸ್ಸಾಗಲಿ ವಪೆಯಾಗಲಿ ನಮಗೆ ಹೇಗೆ ದೊರೆಯುತ್ತಿದ್ದಿತು? ಆದುದರಿಂದ ಈ ಮುನಿಯ ಮಹಿಮೆಯು ಆಶ್ಚರ್ಯಕರವಾದುದಾಗಿರುವುದು. ॥೩೬॥

ಈ ರೀತಿಯಲ್ಲಿ ಗೌತಮಮುನಿಯು ಎಲ್ಲರನ್ನೂ ತನ್ನ ಮಕ್ಕಳಂತೆ ಭಾವಿಸುತ್ತಾ

ಗಾಯತ್ರ್ಯಾಃ ಪರಮಂ ಸ್ಥಾನಂ ಚಕಾರ ಮುನಿಸತ್ತಮಃ ।
ಯತ್ರ ಸರ್ವೈಃ ಮುನಿವರ್ಯೈಃ ಪೂಜ್ಯತೇ ಜಗದಂಬಿಕಾ ॥೩೮॥

ತ್ರಿಕಾಲಂ ಪರಯಾ ಭಕ್ತ್ಯಾ ಪುರಶ್ಚರಣಕರ್ಮಭಿಃ ।
ಅದ್ಯಾಪಿ ತತ್ರ ದೇವೀ ಸಾ ಪ್ರಾತರ್ಬಾಲಾ ತು ದೃಶ್ಯತೇ ॥೩೯॥

ಮಧ್ಯಾಹ್ನೇ ಯುವತೀ ವೃದ್ಧಾ ಸಾಯಂ ಕಾಲೇ ತು ದೃಶ್ಯತೇ ।
ತತ್ರೈಕದಾ ಸಮಾಯಾತೋ ನಾರದೋ ಮುನಿಸತ್ತಮಃ ॥೪೦॥

ರಣಯನ್ಮಹತೀಂ ಗಾಯನ್ ಗಾಯತ್ರ್ಯಾಃ ಪರಮಾನ್ಗುಣಾನ್ ।
ನಿಷಸಾದ ಸಭಾ ಮಧ್ಯೇ ಮುನೀನಾಂ ಭಾವಿತಾತ್ಮನಾಂ ॥೪೧॥

ಗೌತಮಾದಿಭಿರತ್ಯುಚ್ಚೈಃ ಪೂಜಿತಃ ಶಾಂತಮಾನಸಃ ।
ಕಥಾಶ್ಚಕಾರ ವಿವಿಧಾ ಯಶಸೋ ಗೌತಮಸ್ಯ ಚ ॥೪೨॥

---

ಸ್ವಲ್ಪವಾದರೂ ಅಹಂಕಾರವಿಲ್ಲದವನಾಗಿ ಹನ್ನೆರಡು ವರ್ಷಗಳವರೆಗೆ ಆ ಮುನಿಗಳೆಲ್ಲ ರನ್ನೂ ಆಹಾರಾದಿಗಳನ್ನು ಕೊಟ್ಟು ಕಾಪಾಡಿದನು. ॥೩೭॥

ಆ ಮುನಿಶ್ರೇಷ್ಠನು ಗಾಯತ್ರೀದೇವಿಗೆ ಒಂದು ಶ್ರೇಷ್ಠವಾದ ದೇವಾಲಯ ಸ್ಥಾನವನ್ನು ಕಲ್ಪಿಸಿದನು. ಆ ದೇವಸ್ಥಾನದಲ್ಲಿ ಸಮಸ್ತ ಮುನಿಗಳೂ ಜಗದಂಬೆ ಯಯಾದ ಗಾಯತ್ರೀದೇವಿಯನ್ನು ಪೂಜೆಮಾಡುತ್ತಿದ್ದರು. ॥೩೮॥

ಆ ಮುನಿಗಳೆಲ್ಲರೂ ಆ ಸ್ಥಳದಲ್ಲಿ ಮೂರು ಕಾಲಗಳಲ್ಲಿಯೂ ಭಕ್ತಿಯಿಂದ ಗಾಯತ್ರೀಮಂತ್ರವನ್ನು ಜಪಮಾಡುತ್ತಿದ್ದರು. ಈಗಲೂ ಆ ಪ್ರದೇಶದಲ್ಲಿ ಗಾಯತ್ರೀ ದೇವಿಯು ಪ್ರಾತಃಕಾಲದಲ್ಲಿ ಬಾಲಿಕೆಯಾಗಿಯೂ, ಮಧ್ಯಾಹ್ನದಲ್ಲಿ ಯುವತಿ ಯಾಗಿಯೂ, ಸಾಯಂಕಾಲದಲ್ಲಿ ವೃದ್ಧಳಾಗಿಯೂ ಕಾಣಿಸುತ್ತಿರುವಳು. ॥೩೯॥

ಒಂದಾನೊಂದು ದಿನ ದೇವರ್ಷಿಯಾದ ನಾರದಮುನಿಯು ತನ್ನ ಮಹತೀ ಎಂಬ ವೀಣೆಯನ್ನು ನುಡಿಸುತ್ತ, ಶ್ರೇಷ್ಠವಾದ ಗಾಯತ್ರೀದೇವಿಯ ಗುಣಗಳನ್ನು ಗಾನಮಾಡುತ್ತ, ಆ ಗೌತಮಾಶ್ರಮಕ್ಕೆ ಬಂದು, ಋಷಿಗಳ ಸಭಾಮಧ್ಯದಲ್ಲಿ ಕುಳಿತು ಗೌತಮಾದಿಗಳ ಪೂಜೆಯನ್ನು ಸ್ವೀಕರಿಸಿ, ಶಾಂತಚಿತ್ತನಾಗಿ ಅನೇಕ ಮಾತುಗಳನ್ನಾ ಡುತ್ತ ಗೌತಮನ ಯಶಸ್ಸನ್ನು ಹೊಗಳಿದನು. ॥೪೦-೪೧-೪೨॥

ಬ್ರಹ್ಮರ್ಷೇ ದೇವಸದಸಿ ದೇವರಾಟ್ ತವ ಯದ್ಯಶಃ ।
ಜಗೌ ಬಹುವಿಧಂ ಸ್ವಚ್ಛಂ ಮುನಿಪೋಷಣಜಂ ಪರಂ ॥೪೩॥

ಶ್ರುತ್ವಾ ಶಚೀಪತೇರ್ವಾಣೀಂ ತ್ವಾಂ ದ್ರಷ್ಟುಮುಹಮಾಗತಃ ।
ಧನ್ಯೋಽಸಿ ತ್ವಂ ಮುನಿಶ್ರೇಷ್ಠ ಜಗದಂಬಾಪ್ರಸಾದತಃ ॥೪೪॥

ಇತ್ಯುಕ್ತ್ವಾ ಮುನಿವರ್ಯಂ ತಂ ಗಾಯತ್ರೀಸದನಂ ಯಯೌ ।
ದದರ್ಶ ಜಗದಂಬಾಂ ತಾಂ ಪ್ರೇಮೋತ್ಫುಲ್ಲವಿಲೋಚನಃ ॥೪೫॥

ತುಷ್ಟಾವ ವಿಧಿವದ್ದೇವೀಂ ಜಗಾಮ ತ್ರಿದಿವಂ ಪುನಃ ।
ಅಥ ತತ್ರ ಸ್ಥಿತಾ ಯೇ ತೇ ಬ್ರಾಹ್ಮಣಾ ಮುನಿಪೋಷಿತಾಃ ॥೪೬॥

ಉತ್ಕರ್ಷಂ ತು ಮುನೇಃ ಶ್ರುತ್ವಾಽಸೂಯಯಾ ಖೇದಮಾಗತಾಃ ।
ಯಥಾಽಸ್ಯ ನ ಯಶೋ ಭೂಯಾತ್ಕರ್ತವ್ಯಂ ಸರ್ವಥೈವ ಹಿ ॥೪೭॥
ಕಾಲೇ ಸಮಾಗತೇ ಪಶ್ಚಾದಿತಿ ಸರ್ವೈರ್ಽಸ್ತು ನಿಶ್ಚಿತಂ ।

---

ಎಲೈ ಬ್ರಹ್ಮರ್ಷಿಯಾದ ಗೌತಮನೇ, ದೇವತೆಗಳ ಸಭೆಯಲ್ಲಿ ದೇವೇಂದ್ರನು ನೀನು ಮುನಿಗಳನ್ನು ಪೋಷಿಸುತ್ತಿರುವುದರಿಂದ ಉಂಟಾಗುವ ಅನೇಕ ಬಗೆಯಾದ ಮತ್ತು ಪರಿಶುದ್ಧವಾದ ಕೀರ್ತಿಯನ್ನು ಗಾನಮಾಡಿದನು. ಆ ದೇವೇಂದ್ರನ ಮಾತನ್ನು ನೋಡಬೇಕೆಂದು ನಾನು ಬಂದೆನು. ಜಗದಂಬೆಯಾದ ಗಾಯತ್ರೀ ದೇವಿಯ ಅನುಗ್ರಹದಿಂದ ನೀನು ಕೃತಾರ್ಥನಾದೆ! ॥೪೩-೪೪॥

ನಾರದನು ಹೀಗೆಂದು ಗೌತಮನಿಗೆ ಹೇಳಿ ಗಾಯತ್ರೀ ದೇವಸ್ಥಾನಕ್ಕೆ ಹೋಗಿ ಭಕ್ತಿಯಿಂದ ಜಗದಂಬೆಯಾದ ಆ ದೇವಿಯನ್ನು ನೋಡಿ ವೇದ ವಿಧಿಯಂತೆ ಆ ದೇವಿಯನ್ನು ಸ್ತೋತ್ರಮಾಡಿ ಪುನಃ ಸ್ವರ್ಗಕ್ಕೆ ಹೊರಟು ಹೋದನು. ॥೪೫॥

ಆಮೇಲೆ ಆ ಮುನಿಯ ಪೋಷಣೆಯಲ್ಲಿ ಅಲ್ಲಿದ್ದ ಬ್ರಾಹ್ಮಣರು ಗೌತಮನ ಕೀರ್ತಿಯನ್ನು ಕೇಳಿ ಅಸೂಯೆಯಿಂದ ದುಃಖಪಡುತ್ತಾ ಸುಭಿಕ್ಷಕಾಲವು ಬಂದ ಮೇಲೆ ಈ ಗೌತಮ ಮುನಿಗೆ ಕೀರ್ತಿಯು ಬರದಂತೆ ಮಾಡಬೇಕು. ಎಂದು ನಿಶ್ಚಯಿಸಿಕೊಂಡರು. ॥೪೬-೪೭॥

ತತಃ ಕಾಲೇನ ಕಿಯತಾಪ್ಯಭೂದ್ವೃಷ್ಟಿರ್ಧರಾತಲೇ ॥೪೮॥

ಸುಭಿಕ್ಷಮಭವತ್ಸರ್ವದೇಶೇಷು ನೃಪಸತ್ತಮ ।
ಶ್ರುತ್ವಾ ವಾರ್ತಾಂ ಸುಭಿಕ್ಷಸ್ಯ ಮಿಲಿತಾಃ ಸರ್ವವಾಡವಾಃ ॥೪೯॥

ಗೌತಮಂ ಶಪ್ತುಮುದ್ಯೋಗಂ ಹಾಹಾ ರಾಜನ್ಪ್ರಚಕ್ರಿರೇ ।
ಧನ್ಯೌ ತೇಷಾಂ ಚ ಪಿತರೌ ಯಯೋರುತ್ಪತ್ತಿರೀದೃಶೀ ॥೫೦॥

ಕಾಲಸ್ಯ ಮಹಿಮಾ ರಾಜನ್ವಕ್ತುಂ ಕೇನ ಹಿ ಶಕ್ಯತೇ ।
ಗೌರ್ನಿರ್ಮಿತಾ ಮಾಯಯೈಕಾ ಮುಮೂರ್ಷುರ್ಜರತೀ ನೃಪ ॥೫೧॥

ಜಗಾಮ ಸಾ ಚ ಶಾಲಾಯಾಂ ಹೋಮಕಾಲೇ ಮುನೇಸ್ತದಾ ।
ಹುಂಹುಂಶಬ್ದೈರ್ವಾರಿತಾ ಸಾ ಪ್ರಾಣಾಂಸ್ತತ್ಯಾಜ ತತ್ಕ್ಷಣೇ ॥೫೨॥

ಗೌರ್ಹತಾನೇನ ದುಷ್ಟೇನೇತ್ಯೇವಂ ತೇ ಚುಕ್ರುಶುರ್ದ್ವಿಜಾಃ ।
ಹೋಮಂ ಸಮಾಪ್ಯ ಮುನಿರಾಡ್ವಿಸ್ಮಯಂ ಪರಮಂ ಗತಃ ॥೫೩॥

---

ಎಲೈ ಜನಮೇಜಯರಾಜನೇ, ಕೇಳು; ಕೆಲವು ಕಾಲದ ಮೇಲೆ ಭೂಮಂಡಲದಲ್ಲಿ ಚೆನ್ನಾಗಿ ಮಳೆಯಾಗಿ ಎಲ್ಲ ದೇಶಗಳಲ್ಲಿಯೂ ಸುಭಿಕ್ಷ ವುಂಟಾಯಿತು. ಇದನ್ನು ಕೇಳಿದ ಬ್ರಾಹ್ಮಣರೆಲ್ಲರೂ ಕೂಡಿ ಗೌತಮನ ಸಹಾಯವು ಇನ್ನುಮೇಲೆ ತಮಗೆ ಬೇಕಾಗುವುದಿಲ್ಲವೆಂದು ನಿಶ್ಚಯಿಸಿಕೊಂಡು ಕೃತಘ್ನರಾಗಿ, ಅಸಹನೆಯಿಂದ ಆ ಮುನಿಯನ್ನು ಬೈಯ್ಯುವುದಕ್ಕೆ ಪ್ರಾರಂಭಿಸಿದರು. ॥೪೮-೪೯॥

ಎಲೈ ರಾಜನೇ, ಇಂತಹ ಕೃತಘ್ನರಾದ ಮಕ್ಕಳು ಹುಟ್ಟಿದ ಮೇಲೆ ಇವರ ತಂದೆತಾಯಿಗಳು ಎಷ್ಟುಮಟ್ಟಿಗೆ ಕೃತಾರ್ಥರಾದರು, ವಿಚಾರಮಾಡು. ಕಾಲದ ಮಹಿಮೆಯನ್ನು ಯಾರುತಾನೇ ಹೇಳಬಲ್ಲರು? ಆ ಬ್ರಾಹ್ಮಣರು ಮಾಯೆಯಿಂದ ಮುದಿಯಾಗಿ ಸಾಯುತ್ತಿರುವಂತಹ ಒಂದು ಹಸುವನ್ನು ನಿರ್ಮಿಸಿದರು. ಆ ಹಸುವು ಗೌತಮಮುನಿಯು ಹೋಮಮಾಡುವ ಸಮಯದಲ್ಲಿ ಯಜ್ಞಶಾಲೆಗೆ ನುಗ್ಗಿತು. ಅದನ್ನು ಕಂಡು ಗೌತಮನು "ಹುಂ ಹುಂ" ಎಂದು ಗಟ್ಟಿಯಾಗಿ ಶಬ್ದಮಾಡಿ ದೊಡನೆಯೇ ಅದು ಅಲ್ಲಿಯೇ ಪ್ರಾಣವನ್ನು ಬಿಟ್ಟಿತು. ॥೫೦-೫೧-೫೨॥

ಆಗ ಆ ಬ್ರಾಹ್ಮಣರು "ದುಷ್ಟನಾದ ಗೌತಮನು ಹಸುವನ್ನು ಕೊಂದನು." ಎಂದು ಕೂಗಿಕೊಂಡರು. ಮುನಿಶ್ರೇಷ್ಠನು ಹೋಮವನ್ನು ಮುಗಿಸಿ ಆಶ್ಚರ್ಯಪಡುತ್ತ

ಸಮಾಧಿ ಮೀಲಿತಾಕ್ಷಸ್ಸನ್ ಚಿಂತಯಾಮಾಸ ಕಾರಣಂ ।
ಕೃತಂ ಸರ್ವಂ ದ್ವಿಜೈರೇತದಿತಿ ಜ್ಞಾತ್ವಾ ತದೈವ ಸಃ ॥೫೪॥

ದಧಾರ ಕೋಪಂ ಪರಮಂ ಪ್ರಲಯೇ ರುದ್ರಕೋಪವತ್ ।
ಶಶಾಪ ಚ ಋಷೀನ್ಸರ್ವಾನ್ಕೋಪಸಂರಕ್ತ ಲೋಚನಃ ॥೫೫॥

ವೇದಮಾತರಿ ಗಾಯತ್ರ್ಯಾಂ ತದ್ಧ್ಯಾನೇ ತನ್ಮನೋರ್ಜಪೇ ।
ಭವತಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೫೬॥

ವೇದೇ ವೇದೋಕ್ತಯಜ್ಞೇಷು ತದ್ವಾರ್ತಾಸು ತಥೈವ ಚ ।
ಭವತಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೫೭॥

ಶಿವೇ ಶಿವಸ್ಯ ಮಂತ್ರೇ ಚ ಶಿವಶಾಸ್ತ್ರೇ ತಥೈವ ಚ ।
ಭವತಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೫೮॥

ಮೂಲಪ್ರಕೃತ್ಯಾಂ ಶ್ರೀದೇವ್ಯಾಂ ತದ್ಧ್ಯಾನೇ ತತ್ಕಥಾಸು ಚ ।
ಭವತಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೫೯॥

ದೇವೀಮಂತ್ರೇ ತಥಾ ದೇವ್ಯಾಃ ಸ್ಥಾನೇಽನುಷ್ಠಾನಕರ್ಮಣಿ ।
ಭವತಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೦॥

---

ಆ ಗೌತಮನು ಸಮಾಧಿಯನ್ನು ಹೊಂದಿ ಕಣ್ಣುಮುಚ್ಚಿ ಕಾರಣವನ್ನು ಯೋಚಿಸುತ್ತಿರಲು, ಇದೆಲ್ಲವೂ ಬ್ರಾಹ್ಮಣರು ಮಾಡಿದ ಮೋಸವೆಂದು ತಿಳಿದನು. ಮತ್ತು ಪ್ರಲಯ ಕಾಲದ ರುದ್ರನಂತೆ ಗೌತಮಮುನಿಯು ಕೋಪವನ್ನು ಹೊಂದಿದನು. ॥೫೪-೫೫॥

ಗೌತಮನು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಆ ಬ್ರಾಹ್ಮಣರಿಗೆಲ್ಲರಿಗೂ ಶಾಪವನ್ನು ಕೊಟ್ಟನು. ಎಲೈ ನೀಚ ಬ್ರಾಹ್ಮಣರೇ, ನೀವು ವೇದಕ್ಕೆ ತಾಯಿಯಾದ ಗಾಯತ್ರೀ ದೇವಿಯ ಧ್ಯಾನ ಜಪ ಇವುಗಳಲ್ಲಿ ಆಸಕ್ತಿ ಇಲ್ಲದವರಾಗಿರಿ. ॥೫೫-೫೬॥

ಎಲೈ ನಿಕೃಷ್ಟ ಬ್ರಾಹ್ಮಣರೇ, ನೀವೆಲ್ಲರೂ ವೇದಗಳಲ್ಲಿಯೂ, ವೇದೋಕ್ತವಾದ ಯಜ್ಞಾದಿಗಳಲ್ಲಿಯೂ, ಶಿವನಲ್ಲಿಯೂ, ಶಿವಮಂತ್ರಗಳಲ್ಲಿಯೂ, ಶಿವನ ಸಂಬಂಧವಾದ ಶಾಸ್ತ್ರಗಳಲ್ಲಿಯೂ, ಮೂಲ ಪ್ರಕೃತಿಯಾದ ಶ್ರೀ ದೇವಿಯ ಧ್ಯಾನ ಕಥಾದಿಗಳಲ್ಲಿಯೂ,

ದೇವ್ಯುತ್ಸವ ದಿದೃಕ್ಷಾಯಾಂ ದೇವೀನಾಮಾನುಕೀರ್ತನೇ ।
ಭವತಾಽನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೧॥

ದೇವೀ-ಭಕ್ತಸ್ಯ ಸಾನ್ನಿಧ್ಯೇ ದೇವೀಭಕ್ತಾರ್ಚನೇ ತಥಾ ।
ಭವತಾಽನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೨॥

ಶಿವೋತ್ಸವದಿದೃಕ್ಷಾಯಾಂ ಶಿವಭಕ್ತಸ್ಯ ಪೂಜನೇ ।
ಭವತಾಽನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೩॥

ರುದ್ರಾಕ್ಷೇ ಬಿಲ್ವಪತ್ರೇ ಚ ತಥಾ ಶುದ್ಧೇ ಚ ಭಸ್ಮನಿ ।
ಭವತಾಽನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೪॥

ಶ್ರೌತಸ್ಮಾರ್ತಸದಾಚಾರೇ ಜ್ಞಾನಮಾರ್ಗೇ ತಥೈವ ಚ ।
ಭವತಾಽನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೫॥

ಅದ್ವೈತಜ್ಞಾನನಿಷ್ಠಾಯಾಂ ಶಾಂತಿದಾಂತ್ಯಾದಿಸಾಧನೇ ।
ಭವತಾಽನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೬॥

ನಿತ್ಯಕರ್ಮಾದ್ಯನುಷ್ಠಾನೇಽಪ್ಯಗ್ನಿಹೋತ್ರಾದಿ ಸಾಧನೇ ।
ಭವತಾಽನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೭॥

---

ದೇವೀಮಂತ್ರ ಮತ್ತು ದೇವಿಯಸ್ಥಾನ, ಆ ದೇವಿಯ ಪೂಜಾದಿ ಕರ್ಮಗಳು ಇವುಗಳಲ್ಲಿಯೂ ಆಸಕ್ತಿ ಇಲ್ಲದವರಾಗಿರಿ. ॥೫೭-೫೮-೫೯-೬೦॥

ದುಷ್ಟಬ್ರಾಹ್ಮಣರೇ, ನೀವು ದೇವಿಯ ಉತ್ಸವವನ್ನು ನೋಡುವುದರಲ್ಲಿಯೂ ದೇವಿಯ ನಾಮಸಂಕೀರ್ತನೆಯಲ್ಲಿಯೂ, ಆ ದೇವಿಯ ಭಕ್ತರ ಸಾನ್ನಿಧ್ಯದಲ್ಲಿಯೂ, ಅವರ ಪೂಜೆಯ ವಿಷಯದಲ್ಲಿಯೂ, ಶಿವನ ಉತ್ಸವಗಳನ್ನು ನೋಡುವುದರಲ್ಲಿಯೂ, ಶಿವನ ಭಕ್ತನನ್ನು ಪೂಜಿಸುವ ವಿಷಯದಲ್ಲಿಯೂ, ರುದ್ರಾಕ್ಷಿ, ಬಿಲ್ವಪತ್ರೆ, ಭಸ್ಮ, ಶ್ರುತಿಸ್ಮೃತಿವಿಹಿತವಾದ ಸದಾಚಾರ, ಜ್ಞಾನಮಾರ್ಗ ಇವುಗಳಲ್ಲಿಯೂ ಆಸಕ್ತಿಯಿಲ್ಲದವರಾಗಿರಿ. ॥೬೧-೬೨-೬೩-೬೪-೬೫॥

ನೀವು ಅದ್ವೈತಜ್ಞಾನಸಾಧನವಾದ ಶಾಂತಿದಾಂತಿ ಮುಂತಾದ ನಿಷ್ಕಾಮ ಕರ್ಮಾನುಷ್ಠಾನಲಭ್ಯವಾದ ಗುಣಗಳಲ್ಲಿಯೂ, ನಿತ್ಯಕರ್ಮಗಳು, ಅಗ್ನಿಹೋತ್ರಗಳು,

ಸ್ವಾಧ್ಯಾಯಾಧ್ಯಯನೇ ಚೈವ ತಥಾ ಪ್ರವಚನೇಽಪಿ ಚ ।
ಭವತ್ವಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೮॥

ಗೋದಾನಾದಿಷು ದಾನೇಷು ಪಿತೃಶ್ರಾದ್ಧೇಷು ಚೈವ ಹಿ ।
ಭವತ್ವಾನುನ್ಮುಖಾ ಯೂಯಂ ಸರ್ವಥಾ ಬ್ರಾಹ್ಮಣಾಧಮಾಃ ॥೬೯॥

ಕೃಚ್ಛ್ರ ಚಾಂದ್ರಾಯಣೇ ಚೈವ ಪ್ರಾಯಶ್ಚಿತ್ತೇ ತಥೈವ ಚ ।
ಭವತ್ವಾನುನ್ಮುಖಾ ಯೂಯಂ ಸರ್ವದಾ ಬ್ರಾಹ್ಮಣಾಧಮಾಃ ॥೭೦॥

ಶ್ರೀದೇವೀಭಿನ್ನದೇವೇಷು ಶ್ರದ್ಧಾಭಕ್ತಿಸಮನ್ವಿತಾಃ ।
ಶಂಖಚಕ್ರಾದ್ಯಂಕಿತಾಶ್ಚ ಭವತ ಬ್ರಾಹ್ಮಣಾಧಮಾಃ ॥೭೧॥

ಕಾಪಾಲಿಕಮತಾಸಕ್ತಾ ಬೌದ್ಧಶಾಸ್ತ್ರರತಾಸ್ಸದಾ ।
ಪಾಖಂಡಾಚಾರನಿರತಾ ಭವತ ಬ್ರಾಹ್ಮಣಾಧಮಾಃ ॥೭೨॥

ಪಿತೃಮಾತೃ ಸುತಭ್ರಾತೃ ಕನ್ಯಾವಿಕ್ರಯಿಣಸ್ತಥಾ ।
ಭಾರ್ಯಾವಿಕ್ರಯಿಣಸ್ತದ್ವದ್ಭವತ ಬ್ರಾಹ್ಮಣಾಧಮಾಃ ॥೭೩॥

ವೇದವಿಕ್ರಯಿಣಸ್ತದ್ವತ್ತೀರ್ಥವಿಕ್ರಯಿಣಸ್ತಥಾ ।
ಧರ್ಮವಿಕ್ರಯಿಣಸ್ತದ್ವದ್ಭವತ ಬ್ರಾಹ್ಮಣಾಧಮಾಃ ॥೭೪॥

---

ವೇದಾಧ್ಯಯನ, ಶಿಷ್ಯರಿಗೆ ವೇದವನ್ನು ಹೇಳಿಕೊಡುವುದು, ಗೋದಾನವೇ ಮುಂತಾದ ದಾನಗಳು, ಪಿತೃಗಳಿಗಾಗಿ ಮಾಡುವ ಶ್ರಾದ್ಧಕರ್ಮಗಳು, ಕೃಚ್ಛ್ರಚಾಂದ್ರಾಯಣ ಮುಂತಾದ ವ್ರತಗಳು, ಪಾಪಪರಿಹಾರಕ್ಕಾಗಿ ಮಾಡತಕ್ಕ ಪ್ರಾಯಶ್ಚಿತ್ತಗಳು, ಇವು ಗಳಲ್ಲಿ ಯಾವಾಗಲೂ ಆಸಕ್ತರಾಗಬೇಡಿ. ॥೬೬-೬೭-೬೮-೬೯-೭೦॥

ಶ್ರೀದೇವಿಯು ಹೊರತು ಇತರ ದೇವತೆಗಳಲ್ಲಿ ಭಕ್ತಿಯುಳ್ಳವರಾಗಿ, ಶಂಖ ಚಕ್ರಾದಿಗಳ ಗುರುತುಗಳನ್ನು ಶರೀರದಲ್ಲಿ ಧರಿಸಿದವರಾಗಿಯೂ, ಕಾಪಾಲಿಕಮತ ದಲ್ಲಿಯೂ, ಬೌದ್ಧಶಾಸ್ತ್ರಗಳಲ್ಲಿಯೂ, ಆಸಕ್ತರಾಗಿಯೂ, ಪಾಖಂಡಮತಾಚಾರವನ್ನು ಅನುಸರಿಸಿದವರಾಗಿಯೂ, ತಂದೆ, ತಾಯಿ, ಸಹೋದರರು, ಕನ್ಯೆಯರು, ಹೆಂಡಿತಿ ಇವರುಗಳನ್ನು ಮಾರಿ ಜೀವಿಸುವವರಾಗಿಯೂ, ವೇದ, ತೀರ್ಥ, ಧರ್ಮ ಇವುಗಳಿಂದ ಬಂದ ಫಲವನ್ನು ಮಾರುವವರಾಗಿಯೂ, ಪಾಂಚರಾತ್ರಾಗಮ, ಕಾಮಶಾಸ್ತ್ರ, ಬೌದ್ಧ ತಂತ್ರ, ಕಾಪಾಲಿಕಮತಶಾಸ್ತ್ರ ಇವುಗಳನ್ನು ಅಭ್ಯಾಸಮಾಡುವವರಾಗಿಯೂ, ತಾಯಿ,

ಪಾಂಚರಾತ್ರೇ ಕಾಮಶಾಸ್ತ್ರೇ ತಥಾ ಕಾಪಾಲಿಕೇ ಮತೇ ।
ಬೌದ್ಧೇ ಶ್ರದ್ಧಾಯುತಾ ಯೂಯಂ ಭವತ ಬ್ರಾಹ್ಮಣಾಧಮಾಃ॥೭೫॥

ಮಾತೃ ಕನ್ಯಾ ಗಾಮಿನಶ್ಚ ಭಗಿನೀ ಗಾಮಿನಸ್ತಥಾ ।
ಪರಸ್ತ್ರೀ ಲಂಪಟಾಃ ಸರ್ವೇ ಭವತ ಬ್ರಾಹ್ಮಣಾಧಮಾಃ ॥೭೬॥

ಯುಷ್ಮಾಕಂ ವಂಶಜಾತಾಶ್ಚ ಸ್ತ್ರಿಯಶ್ಚ ಪುರುಷಾಸ್ತಥಾ ।
ಮದ್ದತ್ತ ಶಾಪದಗ್ಧಾಸ್ತೇ ಭವಿಷ್ಯಂತಿ ಭವತ್ಸಮಾಃ ॥೭೭॥

ಕಿಂ ಮಯಾ ಬಹುನೋಕ್ತೇನ ಮೂಲಪ್ರಕೃತಿರೀಶ್ವರೀ ।
ಗಾಯತ್ರೀ ಪರಮಾ ಭೂಯಾದ್ಯುಷ್ಮಾಸು ಖಲು ಕೋಪಿತಾ ॥೭೮॥

ಅಂಧಕೂಪಾದಿಕುಂಡೇಷು ಯುಷ್ಮಾಕಂ ಸ್ಯಾತ್ಸದಾ ಸ್ಥಿತಿಃ ।

॥ ವ್ಯಾಸ ಉವಾಚ ॥

ವಾಗ್ದಂಡಮೀದೃಶಂ ಕೃತ್ವಾಽಪ್ಯುಪಸ್ಪೃಶ್ಯ ಜಲಂ ತತಃ ॥೭೯॥

ಜಗಾಮ ದರ್ಶನಾರ್ಥಂ ಚ ಗಾಯತ್ರ್ಯಾಃ ಪರಮೋತ್ಸುಕಃ ।
ಪ್ರಣನಾಮ ಮಹಾದೇವೀಂ ಸಾಽಪಿ ದೇವೀ ಪರಾತ್ಪರಾ ॥೮೦॥

ಬ್ರಾಹ್ಮಣಾನಾಂ ಕೃತಿಂ ದೃಷ್ಟ್ವಾ ಸ್ಮಯಂ ಚಿತ್ತೇ ಚಕಾರ ಹ ।
ಅದ್ಯಾಪಿ ತಸ್ಯಾ ವದನಂ ಸ್ಮಯಯುಕ್ತಂ ಚ ದೃಶ್ಯತೇ ॥೮೧॥

---

ಕನ್ಯೆ, ಸಹೋದರಿ, ಪರಸ್ತ್ರೀ ಇವರ ಸಂಗವನ್ನು ಮಾಡುವವರಾಗಿಯೂ ಹೀನಸ್ಥಿತಿಯನ್ನು ಪಡೆಯಿರಿ. ॥೭೧-೭೨-೭೩-೭೪-೭೫-೭೬॥

ನಿಮ್ಮ ವಂಶದಲ್ಲಿ ಹುಟ್ಟಿದ ಸ್ತ್ರೀ ಪುರುಷರೆಲ್ಲರೂ ನಾನು ಕೊಟ್ಟ ಶಾಪದಿಂದ ನಿಮ್ಮ ಸಮಾನರೇ ಆಗುವರು. ಹೆಚ್ಚಾಗಿ ಹೇಳುವುದರಿಂದೇನು? ಮೂಲ ಪ್ರಕೃತಿಯಾದ ಗಾಯತ್ರೀ ದೇವಿಯು ನಿಮ್ಮ ವಿಷಯದಲ್ಲಿ ಕೋಪವುಳ್ಳವಳಾಗಲಿ! ನಿಮಗೆ ಯಾವಾಗಲೂ ಅಂಧಕೂಪಾದಿ ನರಕಗಳಲ್ಲಿ ದುಃಖವುಂಟಾಗಲಿ! ॥೭೭-೭೮॥

ವ್ಯಾಸರು ಹೇಳಿದರು — ಗೌತಮ ಮುನಿಯು ಈ ರೀತಿಯಲ್ಲಿ ವಾಗ್ದಂಡವನ್ನು ಮಾಡಿ, ಬಳಿಕ ಆಚಮನವನ್ನು ಮಾಡಿ ಗಾಯತ್ರೀ ದೇವಿಯನ್ನು ದರ್ಶನಮಾಡಬೇಕೆಂಬ ಉತ್ಸಾಹದಿಂದ ಹೋದನು. ಆ ದೇವಿಗೆ ನಮಸ್ಕಾರ ಮಾಡಿದನು. ಪರಬ್ರಹ್ಮಸ್ವರೂಪಳಾದ ಗಾಯತ್ರೀ ದೇವಿಯು ಬ್ರಾಹ್ಮಣರ ಕೃತಘ್ನತೆಯನ್ನು

ಉವಾಚ ಮುನಿವರ್ಯಂ ತಂ ಸ್ಮಯಮಾನ ಮುಖಾಂಬುಜಾ ।
ಭುಜಂಗಾಯಾರ್ಪಿತಂ ದುಗ್ಧಂ ವಿಷಾಯೈವೋಪಜಾಯತೇ ॥೮೨॥

ಶಾಂತಿಂ ಕುರು ಮಹಾಭಾಗ ಕರ್ಮಣೋ ಗತಿರೀದೃಶೀ ।
ಇತಿ ದೇವೀಂ ಪ್ರಣಮ್ಯಾಥ ತತೋಽಗಾತ್ಸ್ವಾಶ್ರಮಂ ಪ್ರತಿ ॥೮೩॥

ತತೋ ವಿಪ್ರೈಃ ಶಾಪದಗ್ಧೈರ್ವಿಸ್ಮೃತಾ ವೇದರಾಶಯಃ ।
ಗಾಯತ್ರೀ ವಿಸ್ಮೃತಾ ಸರ್ವೈಸ್ತದದ್ಭುತಮಿವಾಽಭವತ್ ॥೮೪॥

ತೇ ಸರ್ವೇಽಥಮಿಲಿತ್ವಾ ತು ಪಶ್ಚಾತ್ತಾಪಯುತಾಸ್ತಥಾ ।
ಪ್ರಣೇಮುರ್ಮುನಿವರ್ಯಂ ತಂ ದಂಡವತ್ಪತಿತಾ ಭುವಿ ॥೮೫॥

ನೋಚುಃ ಕಿಂಚ ನ ವಾಕ್ಯಂ ತು ಲಜ್ಜಯಾಽಧೋಮುಖಾಃ ಸ್ಥಿತಾಃ ।
ಪ್ರಸೀದೇತಿ ಪ್ರಸೀದೇತಿ ಪ್ರಸೀದೇತಿ ಪುನಃ ಪುನಃ ॥೮೬॥

ಪ್ರಾರ್ಥಯಾಮಾಸುರಭಿತಃ ಪರಿವಾರ್ಯ ಮುನೀಶ್ವರಂ ।
ಕರುಣಾಪೂರ್ಣಹೃದಯೋ ಮುನಿಸ್ತಾನ್ಸಮುವಾಚ ಹ ॥೮೭॥

---

ನೋಡಿ ಮನಸ್ಸಿನಲ್ಲಿಯೇ ನಕ್ಕಳು. ಈಗಲೂ ಗಾಯತ್ರೀ ದೇವಿಯ ಮುಖವು ನಗುತ್ತಿರುವಂತೆಯೇ ಕಾಣುವುದು. ॥೭೯-೮೦-೮೧॥

ಆ ಗಾಯತ್ರೀದೇವಿಯು ನಗುತ್ತಿರುವ ಮುಖಕಮಲದಿಂದ ಕೂಡಿ ಗೌತಮ ಮುನಿಯನ್ನು ಕುರಿತು ಹಾವಿಗೆ ಹಾಲೆರೆದರೆ ವಿಷವೇ ಆಗುವುದು. ಕರ್ಮಗಳ ಸ್ವರೂಪವೇ ಇಂತಹುದು. ಜ್ಞಾನಿಯಾದ ನೀನು ಶಾಂತನಾಗು, ಎಂದು ಹೇಳಿದಳು. ಗೌತಮನು ದೇವಿಗೆ ನಮಸ್ಕಾರವನ್ನು ಮಾಡಿ ತನ್ನಾಶ್ರಮಕ್ಕೆ ಹೋದನು.॥೮೨-೮೩॥

ಬಳಿಕ ಶಾಪದ ತಾಪದಿಂದ ಕೂಡಿದ ಬ್ರಾಹ್ಮಣರು ವೇದವನ್ನೂ, ಗಾಯತ್ರೀ ಮಂತ್ರವನ್ನೂ ಮರೆತುಬಿಟ್ಟರು. ಇದು ಅವರಿಗೆ ಆಶ್ಚರ್ಯಕರವಾಗಿ ಕಂಡಿತು. ಆ ಬ್ರಾಹ್ಮಣರೆಲ್ಲರೂ ಸೇರಿ, ತಾವು ಮಾಡಿದ ಕೆಲಸಕ್ಕೆ ಪಶ್ಚಾತ್ತಾಪಪಟ್ಟು ಆ ಮುನಿ ಶ್ರೇಷ್ಠನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ॥೮೪-೮೫॥

ಅವರು ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡು ಯಾವ ಮಾತನ್ನೂ ಆಡದೆ ಪ್ರಸನ್ನನಾಗೆಂದು ಮತ್ತೆ ಮತ್ತೆ ಬೇಡಿಕೊಂಡರು. ಗೌತಮನು ಕರುಣೆಯಿಂದ ಕೂಡಿ ಅವರಿಗೆ ಮುಂದೆ ಹೇಳುವಂತೆ ಹೇಳಿದನು. ॥೮೬-೮೭॥

ಕೃಷ್ಣಾವತಾರ ಪರ್ಯಂತಂ ಕುಂಭಿಪಾಕೇ ಭವೇತ್ಸ್ಥಿತಿಃ ।
ನ ಮೇ ವಾಕ್ಯಂ ಮೃಷಾ ಭೂಯಾದಿತಿ ಜಾನೀಥ ಸರ್ವಥಾ ॥೮೮॥

ತತಃ ಪರಂ ಕಲಿಯುಗೇ ಭುವಿ ಜನ್ಮ ಭವೇದ್ದ್ವಿಜಾಂ ।
ಮದುಕ್ತಂ ಸರ್ವಮೇತತ್ತು ಭವೇದೇವ ನ ಚಾನ್ಯಥಾ ॥೮೯॥

ಮಚ್ಛಾಪಸ್ಯ ವಿಮೋಕ್ಷಾರ್ಥಂ ಯುಷ್ಮಾಕಂ ಸ್ಯಾದ್ಯದೀಷಣಾ ।
ತರ್ಹಿ ಸೇವ್ಯಂ ಸದಾ ಸರ್ವೈರ್ಗಾಯತ್ರೀ ಪದಪಂಕಜಂ ॥೯೦॥

॥ ವ್ಯಾಸ ಉವಾಚ ॥

ಇತಿ ಸರ್ವಾನ್ವಿಸೃಜ್ಯಾಥ ಗೌತಮೋ ಮುನಿಸತ್ತಮಃ ।
ಪ್ರಾರಬ್ಧಮಿತಿ ಮತ್ವಾ ತು ಚಿತ್ತೇ ಶಾಂತಿಂ ಜಗಾಮ ಹ ॥೯೧॥

ಏತಸ್ಮಾತ್ಕಾರಣಾದ್ರಾಜನ್ ಗತೇ ಕೃಷ್ಣೇ ತು ಧಾಮನಿ ।
ಕಲೌಯುಗೇ ಪ್ರವೃತ್ತೇ ತು ಕುಂಭಿಪಾಕಾತ್ತು ನಿರ್ಗತಾಃ ॥೯೨॥

ಭುವಿ ಜಾತಾ ಬ್ರಾಹ್ಮಣಾಶ್ಚ ಶಾಪದಗ್ಧಾಃ ಪುರಾ ತು ಯೇ ।
ಸಂಧ್ಯಾತ್ರಯ ವಿಹೀನಾಶ್ಚ ಗಾಯತ್ರೀ ಭಕ್ತಿವರ್ಜಿತಾಃ ॥೯೩॥

---

ನಿಮಗೆ ಕೃಷ್ಣಾವತಾರಕಾಲದ ವರೆಗೂ ಕುಂಭೀಪಾಕವೆಂಬ ನರಕವಾಸವುಂಟಾಗುವುದು. ನನ್ನ ಮಾತು ಸುಳ್ಳಾಗಲಾರದು, ಎಂದು ತಿಳಿಯಿರಿ. ಆಮೇಲೆ ಕಲಿಯುಗದಲ್ಲಿ ನಿಮಗೆ ಭೂಮಿಯಲ್ಲಿ ಜನ್ಮವುಂಟಾಗುವುದು. ನಾನು ಹೇಳಿದುದೆಲ್ಲವೂ ಸಂದೇಹವಿಲ್ಲದೆ ನಡೆಯುವುದು! ॥೮೮-೮೯॥

ನನ್ನ ಶಾಪವನ್ನು ಕಳೆದುಕೊಳ್ಳಬೇಕೆಂದು ನಿಮಗೆ ಇಚ್ಛೆಯಿದ್ದರೆ, ನೀವೆಲ್ಲರೂ ಗಾಯತ್ರೀದೇವಿಯ ಪಾದಕಮಲವನ್ನು ಪೂಜಿಸಬೇಕು. ॥೯೦॥

ವ್ಯಾಸರು ಹೇಳಿದರು— ಹೀಗೆಂದು ಹೇಳಿ ಗೌತಮನು ಬ್ರಾಹ್ಮಣರನ್ನೆಲ್ಲರನ್ನೂ ಕಳುಹಿಸಿ, ಹೀಗೆ ನಡೆದುದು ಪ್ರಾರಬ್ಧಕರ್ಮಫಲವೆಂದು ತಿಳಿದು ಮನಸ್ಸಿನಲ್ಲಿ ಶಾಂತಿಯನ್ನು ಹೊಂದಿದನು. ॥೯೧॥

ಜನಮೇಜಯರಾಜನೇ, ಕೇಳು, ಈ ಕಾರಣದಿಂದಲೇ ಕೃಷ್ಣಾವತಾರವು ಮುಗಿದ ಮೇಲೆ ಕಲಿಯುಗವು ಪ್ರಾರಂಭವಾಗುತ್ತಲು ಕುಂಭೀಪಾಕನರಕದಲ್ಲಿ ದುಃಖವನ್ನನುಭವಿಸುತ್ತಿದ್ದ, ಗೌತಮನ ಶಾಪವನ್ನು ಹೊಂದಿದ್ದ ಬ್ರಾಹ್ಮಣರು

ವೇದಭಕ್ತಿವಿಹೀನಾಶ್ಚ ಪಾಖಂಡಮತಗಾಮಿನಃ ।
ಅಗ್ನಿಹೋತ್ರಾದಿ ಸತ್ಕರ್ಮ ಸ್ವಧಾಸ್ವಾಹಾ ವಿವರ್ಜಿತಾಃ ॥೯೪॥

ಮೂಲಪ್ರಕೃತಿಮವ್ಯಕ್ತಾಂ ನೈವ ಜಾನಂತಿ ಕರ್ಹಿಚಿತ್ ।
ತಪ್ತ ಮುದ್ರಾಂಕಿತಾಃ ಕೇಚಿತ್ಕಾಮಾಚಾರರತಾಃ ಪರೇ ॥೯೫॥

ಕಾಪಾಲಿಕಾಃ ಕೌಲಿಕಾಶ್ಚ ಬೌದ್ಧಾ ಜೈನಾಸ್ತಥಾ ಪರೇ ।
ಪಂಡಿತಾ ಅಪಿ ತೇ ಸರ್ವೇ ದುರಾಚಾರ ಪ್ರವರ್ತಕಾಃ ॥೯೬॥

ಲಂಪಟಾಃ ಪರದಾರೇಷು ದುರಾಚಾರಪರಾಯಣಾಃ ।
ಕುಂಭೀಪಾಕಂ ಪುನಃ ಸರ್ವೇ ಯಾಸ್ಯಂತಿ ನಿಜಕರ್ಮಭಿಃ ॥೯೭॥

ತಸ್ಮಾತ್ಸರ್ವಾತ್ಮನಾ ರಾಜನ್ ಸಂಸೇವ್ಯಾ ಪರಮೇಶ್ವರೀ ।
ನ ವಿಷ್ಣೂಪಾಸನಾ ನಿತ್ಯಾ ನ ಶಿವೋಪಾಸನಾ ತಥಾ ॥೯೮॥

---

ಭೂಮಿಯಲ್ಲಿ ಹುಟ್ಟಿ ತ್ರಿಕಾಲಸಂಧ್ಯೆಯನ್ನು ಮಾಡದೆ ಗಾಯತ್ರೀದೇವಿಯಲ್ಲಿ ಭಕ್ತಿಯಿಲ್ಲದವರಾಗಿರುವರು. ॥೯೨-೯೩॥

ವೇದದಲ್ಲಿ ಭಕ್ತಿಯಿಲ್ಲದವರಾಗಿ, ಸ್ವಾಹಾ ಸ್ವಧಾಕಾರಗಳಿಂದ ಕೂಡಿದ ಅಗ್ನಿಹೋತ್ರವೇ ಮುಂತಾದ ಸತ್ಕರ್ಮಗಳನ್ನು ಮಾಡದೆ ಅವ್ಯಕ್ತಸ್ವರೂಪಳಾದ ಮೂಲ ಪ್ರಕೃತಿಯನ್ನು ತಿಳಿಯದೆ, ಪಾಖಂಡಮತವನ್ನಾಶ್ರಯಿಸಿ, ತಪ್ತಮುದ್ರಾ ಧಾರಣೆಯನ್ನು ಮಾಡಿಕೊಳ್ಳುತ್ತಲೂ, ಮನಬಂದ ಆಚಾರವನ್ನು ನಡೆಸುತ್ತಲೂ ಕಾಪಾಲಿಕ, ಕೌಲ, ಬೌದ್ಧ, ಜೈನಮತವನ್ನು ಅನುಸರಿಸುತ್ತಿರುವರು. ॥೯೪-೯೫॥

ಅವರೆಲ್ಲರೂ ವಿದ್ಯಾವಂತರಾದರೂ, ತಾವೂ ಕೆಟ್ಟಮಾರ್ಗದಲ್ಲಿ ನಡೆಯುತ್ತ ಇತರರನ್ನೂ ಆ ದಾರಿಗೆ ಎಳೆಯುವರು. ಪರಸ್ತ್ರೀಯರಲ್ಲಾಸಕ್ತರಾಗಿ ತಮ್ಮ ದುಷ್ಕರ್ಮಕ್ಕೆ ಫಲವಾಗಿ ಮತ್ತೆ ಕುಂಭೀಪಾಕ ನರಕಕ್ಕೆ ಹೋಗುವರು. ॥೯೬-೯೭॥

ಎಲೈ ರಾಜನೇ, ಆ ಕಾರಣದಿಂದ ಮನಃಪೂರ್ವಕವಾಗಿ ಭುವನೇಶ್ವರೀ ದೇವಿಯನ್ನೇ ಸೇವಿಸಬೇಕು. ವಿಷ್ಣುವಿನ ಉಪಾಸನೆಯಾಗಲಿ, ಶಿವನ ಉಪಾಸನೆಯಾಗಲಿ ನಿತ್ಯವಾದುದಲ್ಲ. ಶಕ್ತಿದೇವತೆಯಾದ ಗಾಯತ್ರಿಯ ಉಪಾಸನೆಯೇ ನಿತ್ಯವಾದುದು. ಆದುದರಿಂದ ಈ ನಿತ್ಯಕರ್ಮವನ್ನು ಮಾಡದಿದ್ದರೆ ನರಕವು ಪ್ರಾಪ್ತವಾಗುವುದು. ॥೯೮॥

ನಿತ್ಯಾಚೋಪಾಸನಾ ಶಕ್ತೇರ್ಯಾಂ ವಿನಾ ತು ಪತತ್ಯಧಃ ।
ಸರ್ವಮುಕ್ತಂ ಸಮಾಸೇನ ಯತ್ಪೃಷ್ಟಂ ತತ್ತ್ವಯಾನಘ ॥೯೯॥

ಅತಃಪರಂ ಮಣಿದ್ವೀಪವರ್ಣನಂ ಶೃಣು ಸುಂದರಂ ।
ಯತ್ಪರಂ ಸ್ಥಾನಮಾದ್ಯಾಯಾ ಭುವನೇಶ್ಯಾ ಭವಾರಣೇಃ ॥೧೦೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ನವಮೋಽಧ್ಯಾಯಃ

---

ಪಾಪರಹಿತನಾದ ರಾಜನೇ, ನೀನು ಕೇಳಿದ ಪ್ರಶ್ನೆಗಳಿಗೆಲ್ಲಕ್ಕೂ ಸಂಪೂರ್ಣವಾಗಿ ಉತ್ತರವನ್ನು ಹೇಳಿದೆನು. ಇಲ್ಲಿಂದ ಮುಂದೆ ಸುಂದರವಾದ ಮಣಿದ್ವೀಪದ ವರ್ಣನೆಯನ್ನು ಕೇಳು. ಆ ಮಣಿದ್ವೀಪವು ಪ್ರಪಂಚದ ಉತ್ಪತ್ತಿಗೆ ಕಾರಣಳಾದ ಆದಿಶಕ್ತಿಯಾದ ಭುವನೇಶ್ವರೀದೇವಿಯ ಉತ್ತಮವಾದ ವಾಸಸ್ಥಾನವಾಗಿರುವುದು. ॥೯೯-೧೦೦॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

---

## ದ್ವಾದಶಸ್ಕಂಧೇ

### ॥ ದಶಮೋಽಧ್ಯಾಯಃ ॥

### ಹತ್ತನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಬ್ರಹ್ಮಲೋಕಾದೂರ್ಧ್ವಭಾಗೇ ಸರ್ವಲೋಕೋಽಸ್ತಿಯಃ ಶ್ರುತಃ ।**
**ಮಣಿದ್ವೀಪಃ ಸಏವಾಸ್ತಿ ಯತ್ರ ದೇವೀ ವಿರಾಜತೇ ॥೧॥**

**ಸರ್ವಸ್ಮಾದಧಿಕೋ ಯಸ್ಮಾತ್ಸರ್ವಲೋಕಸ್ತತಃ ಸ್ಮೃತಃ ।**
**ಪುರಾ ಪರಾಂಬಯೈವಾಯಂ ಕಲ್ಪಿತೋ ಮನಸೇಚ್ಛಯಾ ॥೨॥**

---

ಈ ಅಧ್ಯಾಯದಲ್ಲಿ ನೂರೂವರೆ ಶ್ಲೋಕಗಳಿಂದ ದೇವಿಯ ಭಕ್ತಿಯ ಅಭಿವೃದ್ಧಿಗಾಗಿ ಮಣಿದ್ವೀಪದ ವರ್ಣನೆಯನ್ನು ವ್ಯಾಸರು ಯಥಾಸ್ಥಿತವಾಗಿ ಮಾಡುತ್ತ ರಾಜನನ್ನು ಕುರಿತು ಹೇಳಿದರು. ಸುಬಾಲೋಪನಿಷತ್ತಿನಲ್ಲಿ ಬ್ರಹ್ಮಲೋಕಕ್ಕಿಂತಲೂ ಮೇಲ್ಭಾಗದಲ್ಲಿ ಸರ್ವಲೋಕವೆಂಬ ಹೆಸರಿನ ಲೋಕವಿರುವುದು. ಅದಕ್ಕೆ ಮಣಿದ್ವೀಪವೆಂದು ಮತ್ತೊಂದು ಹೆಸರಿರುವುದು. ಅಲ್ಲಿ ಮೂಲಪ್ರಕೃತಿರೂಪಳಾದ ಭುವನೇಶ್ವರೀ ದೇವಿಯು ಪ್ರಕಾಶಿಸುತ್ತಿರುವಳು ಎಂದು ಹೇಳಿದೆ. “ ಸರ್ವಲೋಕಾ ಆತ್ಮನಿಬ್ರಹ್ಮಣಿ ಮಣಯಇವ ಓತಾಶ್ಚಪ್ರೋತಾಶ್ಚ ” ಎಂದು ಸುಬಾಲೋಪನಿಷತ್ತಿನಲ್ಲಿ ಹೇಳಿದೆ. ॥೧॥

ಎಲ್ಲ ಲೋಕಕ್ಕಿಂತಲೂ ಹೆಚ್ಚಿನ ಲೋಕವಾದುದರಿಂದ ಅದಕ್ಕೆ ಸರ್ವಲೋಕವೆಂದು ಹೆಸರಾಯಿತು. ಈ ಲೋಕವನ್ನು ಶ್ರೀ ಭಗವತಿಯೇ ತನ್ನ ನಿವಾಸಾರ್ಥವಾಗಿ ಪ್ರಪಂಚಸೃಷ್ಟಿಯ ಆದಿಯಲ್ಲಿ ತನ್ನ ಮನಸ್ಸಿನ ಇಚ್ಛೆಯಂತೆ ನಿರ್ಮಿಸಿದಳು. ॥೨॥

ಸರ್ವಾದೌ ನಿಜವಾಸಾರ್ಥಂ ಪ್ರಕೃತ್ಯಾ ಮೂಲಭೂತಯಾ ।
ಕೈಲಾಸಾದಧಿಕೋ ಲೋಕೋ ವೈಕುಂಠಾದಪಿ ಚೋತ್ತಮಃ ॥೩॥

ಗೋಲೋಕಾದಪಿ ಸರ್ವಸ್ಮಾತ್ಸರ್ವಲೋಕೋಽಧಿಕಃ ಸ್ಮೃತಃ ।
ನೈತತ್ಸಮಂ ತ್ರಿಲೋಕ್ಯಾಂ ತು ಸುಂದರಂ ವಿದ್ಯತೇ ಕ್ವಚಿತ್ ॥೪॥

ಛತ್ರೀಭೂತಂ ತ್ರಿಜಗತೋ ಭವಸಂತಾಪನಾಶಕಂ ।
ಛಾಯಾಭೂತಂ ತದೇವಾಸ್ತಿ ಬ್ರಹ್ಮಾಂಡಾನಾಂ ತು ಸತ್ತಮ ॥೫॥

---

ಸರ್ವಪ್ರಪಂಚಸೃಷ್ಟಿಗಿಂತಲೂ ಮುಂಚಿತವಾಗಿ ಮೂಲಪ್ರಕೃತಿಯಾದ ಭುವನೇಶ್ವರೀ ದೇವಿಯು, ಕೈಲಾಸ, ವೈಕುಂಠ, ಗೋಲೋಕ ಇವುಗಳಿಗಿಂತ ಹೆಚ್ಚಿನದಾದ ಸರ್ವಲೋಕವನ್ನು ಮನಸ್ಸಿನಿಂದ ನಿರ್ಮಿಸಿದಳು. ಇದಕ್ಕೆ ಸಮವಾದ ಸುಂದರವಾದ ಪ್ರದೇಶವು ಮೂರು ಲೋಕದಲ್ಲಿ ಯಾವುದೂ ಇರುವುದಿಲ್ಲ. ಈ ವಿಷಯದಲ್ಲಿ ಮಣಿದ್ವೀಪವೆಂಬ ಈ ಲೋಕವನ್ನು ದೇವಿಯ ಪ್ರಾರ್ಥನೆಯಿಂದ ಶಿವನು ನಿರ್ಮಿಸಿದನೆಂದು ಶಿವರಹಸ್ಯದ ದ್ವಿತೀಯಾಂಕದಲ್ಲಿ ಎಂಟನೆಯ ಅಧ್ಯಾಯದಿಂದ ಹದಿಮೂರನೆಯ ಅಧ್ಯಾಯದವರೆಗೂ ವಿಸ್ತಾರವಾಗಿ ಮಣಿದ್ವೀಪದ ವರ್ಣನೆಯು ಇರುವುದು. ಆ ಮಣಿದ್ವೀಪವು ಕೈಲಾಸಕ್ಕಿಂತಲೂ ಸುಂದರವಾದುದು. ಅಲ್ಲಿರುವವರೆಲ್ಲರಿಗೂ ಹಸಿವು, ಬಾಯಾರಿಕೆ, ಆಯಾಸ, ಮುಪ್ಪು ಮೊದಲಾದುವುಗಳಿಲ್ಲ. ಯಾವಾಗಲೂ ಸಂತೋಷವು ಹೆಚ್ಚುತ್ತಿರುವುದು. ಶಿವನು ಸಂಕಲ್ಪದಿಂದ ತೇಜೋರೂಪವಾಗಿ ಆ ಲೋಕವನ್ನು ನಿರ್ಮಿಸಿದನು, ಎಂದು ಹೇಳಿರುವುದು. ಹದಿನಾಲ್ಕನೆಯ ಅಧ್ಯಾಯದಲ್ಲಿ ಚಿಂತಾಮಣಿಗೃಹದ ವರ್ಣನೆಯು ಇರುವುದು. ಬ್ರಹ್ಮಾಂಡಪುರಾಣದಲ್ಲಿ ಲಲಿತೋಪಾಖ್ಯಾನದಲ್ಲಿ ಸುಮೇರು ಪರ್ವತ ಶಿಖರದಲ್ಲಿ ವಿಶ್ವಕರ್ಮನು ಈ ಲೋಕವನ್ನು ನಿರ್ಮಿಸಿದನೆಂದು ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಹೇಳಿರುವುದು. ಈ ಎರಡು ಪುರಾಣಗಳಲ್ಲಿ ಹೇಳಿರುವ ಮಣಿದ್ವೀಪವು ಶ್ರೀ ತ್ರಿಪುರಸುಂದರೀದೇವಿಯಿಂದ ಆಶ್ರಯಿಸಲ್ಪಟ್ಟುದು. ಈ ದೇವೀಭಾಗವತದಲ್ಲಿ ಹೇಳಿರುವ ಮಣಿ ದ್ವೀಪವು ಶ್ರೀ ಭುವನೇಶ್ವರೀದೇವಿಗೆ ಆಶ್ರಯವಾಗಿ ಸರ್ವಲೋಕವೆಂಬ ಹೆಸರನ್ನು ಹೊಂದಿ ಬ್ರಹ್ಮಾಂಡದಿಂದ ಹೊರಗೆ ಬ್ರಹ್ಮಲೋಕಕ್ಕಿಂತ ಉತ್ತಮವಾದುದಾಗಿರುವುದೆಂದು ವರ್ಣಿಸಿರುವುದು. ॥೩-೫॥

ಜನಮೇಜಯನೇ ಕೇಳು. ಮಣಿದ್ವೀಪವು ಸಕಲ ಬ್ರಹ್ಮಾಂಡಗಳ ಮೇಲುಭಾಗ

ಬಹುಯೋಜನವಿಸ್ತೀರ್ಣೋ ಗಂಭೀರಸ್ತಾವದೇವ ಹಿ ।
ಮಣಿದ್ವೀಪಸ್ಯ ಪರಿತೋ ವರ್ತತೇ ತು ಸುಧೋದಧಿಃ ॥೬॥

ಮರುತ್ಸಂಘಟ್ಟನೋತ್ಕೀರ್ಣ ತರಂಗಶತಸಂಕುಲಃ ।
ರತ್ನಾಚ್ಛವಾಲುಕಾಯುಕ್ತೋ ಝುಷಶಂಖಸಮಾಕುಲಃ ॥೭॥

ವೀಚಿಸಂಘರ್ಷಸಂಜಾತ ಲಹರೀಕಣಶೀತಲಃ ।
ನಾನಾಧ್ವಜಸಮಾಯುಕ್ತ ನಾನಾಪೋತಗತಾಗತೈಃ ॥೮॥

ವಿರಾಜಮಾನಃ ಪರಿತಸ್ತೀರರತ್ನದ್ರುಮೋ ಮಹಾನ್ ।
ತದುತ್ತರಮಯೋಧಾತು ನಿರ್ಮಿತೋ ಗಗನೇ ತತಃ ॥೯॥

ಸಪ್ತಯೋಜನವಿಸ್ತೀರ್ಣಃ ಪ್ರಾಕಾರೋ ವರ್ತತೇ ಮಹಾನ್ ।
ನಾನಾ-ಶಸ್ತ್ರಪ್ರಹರಣಾ ನಾನಾಯುದ್ಧವಿಶಾರದಾಃ ॥೧೦॥

---

ದಲ್ಲಿರುವುದರಿಂದ ಮೂರು ಲೋಕಕ್ಕೂ ಛತ್ರಿಯಂತಿರುತ್ತ ನೆರಳಿನಂತಾಗಿ ಆ ಲೋಕಗಳಲ್ಲಿರುವ ಜೀವರುಗಳ ಸಂತಾಪವನ್ನು ನಾಶಮಾಡತಕ್ಕುದಾಗಿರುವುದು. ॥೫॥

ಮಣಿದ್ವೀಪದ ಸುತ್ತಲೂ ಅನೇಕ ಗಾವುದ ವಿಸ್ತಾರವಾದ ಅಮೃತ ಸಮುದ್ರವು ಅಷ್ಟೇ ಆಳವಾಗಿರುವುದು. ॥೬॥

ಆ ಅಮೃತ ಸಮುದ್ರವು ಗಾಳಿಯ ಬೀಸುವಿಕೆಯಿಂದ ಎದ್ದ ದೊಡ್ಡದೊಡ್ಡ ಅಲೆಗಳಿಂದ ಕೂಡಿ, ಶುದ್ಧವಾದ ರತ್ನಗಳಂತಿರುವ ಮರಳುಗಳಿಂದಲೂ, ಮೀನು ಮತ್ತು ಶಂಖಗಳಿಂದಲೂ ತುಂಬಿ, ಸಣ್ಣ ಅಲೆಗಳಿಂದ ಹುಟ್ಟಿದ ಪ್ರವಾಹಗಳ ಹನಿಗಳಿಂದ ತಣ್ಣಗಾಗಿ ಬಗೆ ಬಗೆಯ ಬಾವುಟಗಳಿಂದ ಕೂಡಿದ ಅನೇಕ ಹಡಗುಗಳ ಸಂಚಾರವುಳ್ಳದಾಗಿದ್ದಿತು. ॥೭-೮॥

ಆ ಅಮೃತ ಸಮುದ್ರದ ತೀರದಲ್ಲಿ ಸುತ್ತಲೂ ರತ್ನಗಳ ಕಾಂತಿಯಂತೆ ಶೋಭಿಸುವ ದೊಡ್ಡ ದೊಡ್ಡ ಮರಗಳಿರುವುವು. ಆ ಮರಗಳಿಂದಾಚೆಗೆ ಕಬ್ಬಿಣದಿಂದ ಮಾಡಿದ ಬಹಳ ಎತ್ತರವಾದ ಏಳುಗಾವುದ ಉದ್ದವಾದ ಸುತ್ತಣ ಗೋಡೆಯು ದೊಡ್ಡದಾಗಿರುವುದು. ॥೯॥

ನಾಲ್ಕು ದಿಕ್ಕಿನ ಬಾಗಿಲುಗಳಲ್ಲಿಯೂ ಅನೇಕ ದ್ವಾರಪಾಲಕರೂ ಕೋಟೆಯು

ರಕ್ಷಕಾನಿ ವಸಂತ್ಯತ್ರ ಮೋದಮಾನಾಃ ಸಮಂತತಃ ।
ಚತುರ್ದ್ವಾರಸಮಾಯುಕ್ತೋ ದ್ವಾರಪಾಲಶತಾನ್ವಿತಃ ॥೧೧॥

ನಾನಾಗಣೈಃ ಪರಿವೃತೋ ದೇವೀಭಕ್ತಿಯುತೈರ್ನೃಪ ।
ದರ್ಶನಾರ್ಥಂ ಸಮಾಯಾಂತಿ ಯೇ ದೇವಾ ಜಗದೀಶಿತುಃ ॥೧೨॥

ತೇಷಾಂ ಗಣಾ ವಸಂತ್ಯತ್ರ ವಾಹನಾನಿ ಚ ತತ್ರ ಹಿ ।
ವಿಮಾನಶತಸಂಘರ್ಷ ಘಂಟಾಸ್ವನಸಮಾಕುಲಃ ॥೧೩॥

ಹಯಹೇಷಾ ಖುರಾಘಾತ ಬಧಿರೀಕೃತದಿಙ್ಮುಖಃ ।
ಗಣೈಃ ಕಿಲಕಿಲಾರಾವೈರ್ವೇತ್ರಹಸ್ತೈಶ್ಚ ತಾಡಿತಾಃ ॥೧೪॥

ಸೇವಕಾದೇವ ಸಂಘಾನಾಂ ಭ್ರಾಜಂತೇ ತತ್ರ ಭೂಮಿಪ ।
ತಸ್ಮಿನ್ಕೋಲಾಹಲೇ ರಾಜನ್ನಶಬ್ದಃ ಕೇನಚಿತ್ಕ್ವಚಿತ್ ॥೧೫॥
ಕಸ್ಯಚಿಚ್ಛ್ರೂಯತೇಽತ್ಯಂತಂ ನಾನಾಧ್ವನಿಸಮಾಕುಲೇ ।

---

ಸುತ್ತಲೂ ಅನೇಕ ಆಯುಧಗಳನ್ನು ಧರಿಸಿ, ಬಗೆಬಗೆಯ ಯುದ್ಧಗಳನ್ನು ಬಲ್ಲ ಸೈನಿಕರು ಸಂತೋಷದಿಂದ ಅಲ್ಲಿ ಕಾವಲಿರುವರು. ॥೧೦-೧೧॥

ಆ ಮೊದಲನೆಯ ಪ್ರಾಕಾರದೊಳಗೆ ದೇವೀಭಕ್ತಿಯಿಂದ ಕೂಡಿದ ದೇವತೆಗಳು ಜಗದಂಬೆಯ ದರ್ಶನಕ್ಕಾಗಿ ತಮ್ಮ ಅನೇಕ ಗಣಗಳಿಂದ ಕೂಡಿ ತಮ್ಮ ತಮ್ಮ ವಾಹನಗಳೊಡನೆ ಅಲ್ಲಿಗೆ ಬಂದು ವಾಸವಾಗಿರುವರು. ಅನೇಕ ವಿಮಾನಗಳು ಅಲ್ಲಿಗೆ ಬಂದುದರಿಂದ ಅವರ ಗಂಟೆಯ ಶಬ್ದಗಳಿಂದ ಆ ಪ್ರದೇಶವು ತುಂಬಿರುವುದು. ॥೧೨-೧೩॥

ಕುದುರೆಗಳ ಕೂಗಿನಿಂದಲೂ, ಗೊರಸಿನ ಶಬ್ದಗಳಿಂದಲೂ, ದಿಕ್ಕುಗಳು ತುಂಬಿರುವುವು. ದೇವತೆಗಳ ಗಣಗಳು ಗದ್ದಲ ಮಾಡುತ್ತ, ಬೆತ್ತಗಳಿಂದ ಸೇವಕರನ್ನು ಹೊಡೆದು ಕೆಲಸಮಾಡಿಸುತ್ತಿರುವರು. ಬಗೆಬಗೆಯ ಧ್ವನಿಯಿಂದ ತುಂಬಿದ ಆ ಗದ್ದಲದಲ್ಲಿ ಒಬ್ಬನ ಮಾತು ಮತ್ತೊಬ್ಬನಿಗೆ ಸಂಪೂರ್ಣವಾಗಿ ಕೇಳಿಸುವುದೇ ಇಲ್ಲವು. ॥೧೪-೧೫॥

ಪದೇಪದೇ ಮಿಷ್ಟವಾರಿ ಪರಿಪೂರ್ಣಸರಾಂಸಿ ಚ ॥೧೬॥

ವಾಟಿಕಾ ವಿವಿಧಾ ರಾಜನ್ ರತ್ನದ್ರುಮವಿರಾಜಿತಾಃ ।
ತದುತ್ತರಂ ಮಹಾಸಾರ ಧಾತು ನಿರ್ಮಿತ ಮಂಡಲಃ ॥೧೭॥

ಸಾಲೋಽಪರೋ ಮಹಾನಸ್ತಿ ಗಗನಸ್ಪರ್ಶಿ ಯಚ್ಛಿರಃ ।
ತೇಜಸಾ ಸ್ಯಾಚ್ಛತಗುಣಃ ಪೂರ್ವಸಾಲಾದಯಂ ಪರಃ ॥೧೮॥

ಗೋಪುರದ್ವಾರಸಹಿತೋ ಬಹುವೃಕ್ಷಸಮನ್ವಿತಃ ।
ಯಾ ವೃಕ್ಷಜಾತಯಃ ಸಂತಿ ಸರ್ವಾಸ್ತಾಸ್ತತ್ರ ಸಂತಿ ಚ ॥೧೯॥

ನಿರಂತರಂ ಪುಷ್ಪಯುತಾಃ ಸದಾ ಫಲಸಮನ್ವಿತಾಃ ।
ನವಪಲ್ಲವಸಂಯುಕ್ತಾಃ ಪರಸೌರಭಸಂಕುಲಾಃ ॥೨೦॥

ಪನಸಾ ಬಕುಲಾ ಲೋಧ್ರಾಃ ಕರ್ಣಿಕಾರಾಶ್ಚ ಶಿಂಶಪಾಃ ।
ದೇವದಾರು ಕಾಂಚನಾರಾ ಆಮ್ರಾಶ್ಚೈವ ಸುಮೇರವಃ ॥೨೧॥

ಲಿಕುಚಾ ಹಿಂಗುಲಾಶ್ಚೈಲಾ ಲವಂಗಾಃ ಕಟ್ಫಲಾಸ್ತಥಾ ।
ಪಾಟಲಾ ಮುಚುಕುಂದಾಶ್ಚ ಫಲಿನ್ಯೋ ಜಘನೇಫಲಾಃ ॥೨೨॥

---

ಆ ಪ್ರಾಕಾರದಲ್ಲಿ ಸಿಹಿಯಾದ ನೀರಿನಿಂದ ತುಂಬಿದ ಸರೋವರಗಳೂ, ರತ್ನಗಳಂತೆ ಪ್ರಕಾಶಿಸುತ್ತಿರುವ ಅನೇಕ ಮರಗಳಿಂದ ಕೂಡಿದ ಬಗೆಬಗೆಯ ಹೂ ತೋಟಗಳೂ ಪ್ರಕಾಶಿಸುತ್ತಿರುವುವು. ॥೧೬॥

ಆದರಿಂದ ಮುಂದೆ ಕಂಚಿನಿಂದ ಮಾಡಿದ ಎತ್ತರವಾದ ಪ್ರಾಕಾರವು ಮೊದಲನೆಯ ಪ್ರಾಕಾರದ ನೂರರಷ್ಟು ಕಾಂತಿಯುಳ್ಳುದಾಗಿರುವುದು. ॥೧೭-೧೮॥

ಆ ಪ್ರಾಕಾರವು ಗೋಪುರಗಳುಳ್ಳ ಬಾಗಿಲುಗಳಿಂದ ಕೂಡಿ ಒಳಗಡೆಯಲ್ಲಿ ಯಾವಾಗಲೂ, ಚಿಗುರು, ಹೂ, ಹಣ್ಣುಕಾಯಿಗಳಿಂದ ತುಂಬಿದ ಸಮಸ್ತ ವೃಕ್ಷಜಾತಿಗಳಿಂದ ಕೂಡಿ ಸುಗಂಧಯುಕ್ತವಾಗಿರುವುದು. ॥೧೯-೨೦॥

ಅಲ್ಲಿದ್ದ ಮರಗಳ ಹೆಸರುಗಳನ್ನೆಲ್ಲವನ್ನೂ ಹೇಳಿರುವುದು. ಹಲಸು, ಪಗಡೆ, ಲೋಧ್ರ (ಅರಗ), ಕಣಿಗಲು (ಬೆಟ್ಟದಾವರೆ), ಅಶೋಕ, ದೇವದಾರು, ಕಾಂಚನಾರ, ಮಾವು, ಸುಮೇರು, ಕಿತ್ತಲೆ, ಹಿಂಗು, ಏಲಕ್ಕಿ, ಲವಂಗ, ತೇಗ, ಪಾದರಿ, ಮುಚುಕುಂದ, ಫಲಿನೀ, ಜಘನೇಫಲ, ತಾಳೆ, ಹೊಂಗೆ, ಧೂಪದಗಿಡ ಕಂಕೋಲ,

ತಾಲಾಸ್ತಮಾಲಾಃ ಸಾಲಾಶ್ಚ ಕಂಕೋಲಾ ನಾಗಭದ್ರಕಾಃ ।
ಪುನ್ನಾಗಾಃ ಪೀಲವಸ್ಸಾಲ್ಲಕಾವ್ಯೆ ಕರ್ಪೂರಶಾಖಿನಃ ॥೨೩॥

ಅಶ್ವಕರ್ಣಾ ಹಸ್ತಿಕರ್ಣಾಸ್ತಾಲಪರ್ಣಾಶ್ಚ ದಾಡಿಮಾಃ ।
ಗಣಿಕಾ ಬಂಧು ಜೀವಾಶ್ಚ ಜಂಬೀರಾಶ್ಚ ಕುರಂಡಕಾಃ ॥೨೪॥

ಚಾಂಪೇಯಾ ಬಂಧುಜೀವಾಶ್ಚ ತಥಾ ವೈ ಕನಕದ್ರುಮಾಃ ।
ಕಾಲಾಗರುದ್ರುಮಾಶ್ಚೈವ ತಥಾ ಚಂದನಪಾದಪಾಃ ॥೨೫॥

ಖರ್ಜೂರಾ ಯೂಥಿಕಾಸ್ತಾಲಪರ್ಣ್ಯಶ್ಚೈವ ತಥೇಕ್ಷವಃ ।
ಕ್ಷೀರವೃಕ್ಷಾಶ್ಚ ಖದಿರಾಶ್ಚಿಂಚಾ ಭಲ್ಲಾತಕಾಸ್ತಥಾ ॥೨೬॥

ರುಚಕಾಃ ಕುಟಜಾ ವೃಕ್ಷಾ ಬಿಲ್ವವೃಕ್ಷಾಸ್ತಥೈವ ಚ ।
ತುಲಸೀನಾಂ ವನಾನ್ಯೇವಂ ಮಲ್ಲಿಕಾನಾಂ ತಥೈವ ಚ ॥೨೭॥

ಇತ್ಯಾದಿ ತರುಜಾತೀನಾಂ ವನಾನ್ಯುಪವನಾನಿ ಚ ।
ನಾನಾವಾಪೀಶತೈರ್ಯುಕ್ತಾನ್ಯೇವಂ ಸಂತಿ ಧರಾಧಿಪ ॥೨೮॥

ಕೋಕಿಲಾರಾವಸಂಯುಕ್ತಾ ಗುಂಜದ್ಭ್ರಮರಭೂಷಿತಾಃ ।
ನಿರ್ಯಾಸಸ್ರಾವಿಣಃ ಸರ್ವೇ ಸ್ನಿಗ್ಧಚ್ಛಾಯಾಸ್ತರೂತ್ತಮಾಃ ॥೨೯॥

---

ಜೀವು, ಪುನ್ನಾಗ, ಗೋಣಿ, ಕರ್ಪೂರದ ಮರ, ಅಶ್ವಕರ್ಣ, ಹಸ್ತಿಕರ್ಣ, ತಾಲಪರ್ಣ, ದಾಳಿಂಬ, ಗಣಿಕೆ, ಬಿಂದುಗೆ, ನಿಂಬೆ, ಗೋರಂಟೆ, ಸಂಪಿಗೆ, ಹೊನ್ನೆ, ಕರಿ ಅಗುರು, ಶ್ರೀಗಂಧ, ಖರ್ಜೂರ, ಸೇವಂತಿಗೆ, ಕಬ್ಬು, ಹಾಲೆಮರ, ಕಗ್ಗಲಿ, ಹುಣಿಸೆ, ಬೇಲ, ಕೊಡಸಿಗೆ, ಬಿಲ್ವ, ತುಲಸೀವನ, ಮಲ್ಲಿಗೆವನ, ಇವುಗಳೆಲ್ಲವೂ ಇದ್ದುವು. ||೨೧-೨೨-೨೩-೨೪-೨೫-೨೬-೨೭||

ಜನಮೇಜಯ ರಾಜನೇ, ಅನೇಕ ಜಾತಿಯ ಮರಗಳಿಂದ ಕೂಡಿದ ವನಗಳೂ, ಉಪವನಗಳೂ, ನೂರಾರು ಇಳಿಯುವ ಬಾವಿಗಳೂ ಆ ಎರಡನೆಯ ಪ್ರಾಕಾರದಲ್ಲಿರುವುವು. ||೨೮||

ಅಲ್ಲಿರುವ ಉತ್ತಮವಾದ ಮರಗಳೆಲ್ಲವೂ ಭ್ರಮರ ಮತ್ತು ಕೋಗಿಲೆಗಳ ಧ್ವನಿಗಳಿಂದ ಕೂಡಿ ರಸವನ್ನು ಸುರಿಸುತ್ತಿರುವುವು. ಅವುಗಳ ನೆರಳುಗಳು ಒತ್ತಾಗಿ ಬಿದ್ದಿರುವುವು. ಸಮಸ್ತ ಋತುಗಳ ಸಂಬಂಧವಾದ ಮರಗಳೂ ಅನೇಕ ಪಕ್ಷಿಗಳಿಂದ

ನಾನಾಋತುಭವಾ ವೃಕ್ಷಾ ನಾನಾಪಕ್ಷಿಸಮಾಕುಲಾಃ ।
ನಾನಾರಸಸ್ರಾವಿಣೀಭಿರ್ನದೀಭಿರತಿಶೋಭಿತಾಃ ॥೩೦॥

ಪಾರಾವತಶುಕವ್ರಾತಸಾರಿಕಾಪಕ್ಷಮಾರುತೈಃ ।
ಹಂಸಪಕ್ಷಸಮುದ್ಭೂತ ವಾತವ್ರಾತೈಶ್ಚಲದ್ದ್ರುಮಂ ॥೩೧॥

ಸುಗಂಧಗ್ರಾಹಿಪವನಪೂರಿತಂ ತದ್ವನೋತ್ತಮಂ ।
ಸಹಿತಂ ಹರಿಣೀಯೂಥೈರ್ಧಾವಮಾನೈರಿತಸ್ತತಃ ॥೩೨॥

ನೃತ್ಯದ್ಬರ್ಹಿ ಕದಂಬಸ್ಯ ಕೇಕಾರಾವೈಃ ಸುಖಪ್ರದೈಃ ।
ನಾದಿತಂ ತದ್ವನಂ ದಿವ್ಯಂ ಮಧುಸ್ರಾವಿ ಸಮಂತತಃ ॥೩೩॥

ಕಾಂಸ್ಯಸಾಲಾದುತ್ತರೇ ತು ತಾಮ್ರಸಾಲಃ ಪ್ರಕೀರ್ತಿತಃ ।
ಚತುರಸ್ರಸಮಾಕಾರ ಉನ್ನತ್ಯಾ ಸಪ್ತಯೋಜನಃ ॥೩೪॥

ದ್ವಯೋಸ್ತು ಸಾಲಯೋರ್ಮಧ್ಯೇ ಸಂಪ್ರೋಕ್ತಾ ಕಲ್ಪವಾಟಿಕಾ ।
ಯೇಷಾಂ ತರೂಣಾಂ ಪುಷ್ಪಾಣಿ ಕಾಂಚನಾಭಾನಿ ಭೂಮಿಪ ॥೩೫॥

---

ಕೂಡಿ ಅನೇಕ ಬಗೆಯ ರಸಗಳನ್ನು ಸ್ರವಿಸುತ್ತಲೂ, ಸಮೀಪದಲ್ಲಿ ಹರಿಯುತ್ತಿರುವ ನದಿಗಳಿಂದಲೂ, ಮನೋಹರವಾಗಿರುವುವು. ॥೨೯-೩೦॥

ಪಾರಿವಾಳಗಳು, ಹೆಣ್ಣುಗಂಡು ಗಿಳಿಗಳು, ಹಂಸಗಳು ಇವುಗಳ ರೆಕ್ಕೆಯ ಗಾಳಿಗಳಿಂದ ಮರಗಳು ಅಲುಗಾಡುತ್ತಿರುವುವು. ॥೩೧॥

ಆ ಉತ್ತಮವಾದ ವನದಲ್ಲಿ ಸುವಾಸನೆಯಿಂದ ಕೂಡಿದ ಗಾಳಿಯು ಬೀಸುತ್ತಿರುವುದು. ಜಿಂಕೆಗಳ ಗುಂಪುಗಳು ಓಡಾಡುತ್ತಿದ್ದುವು. ನವಿಲುಗಳು ಕುಣಿಯುತ್ತ ಕೇಕೇನಾಕುತ್ತಿರುವುವು. ಆ ದಿವ್ಯವಾದ ವನದ ಸುತ್ತಲೂ ಮಕರಂದವು ಸುರಿಯುತ್ತಿರುವುದಲ್ಲದೆ ಇಂಪಾದ ಧ್ವನಿಯು ಕೇಳಿಸುತ್ತಿರುವುದು. ॥೩೨-೩೩॥

ಕಂಚಿನ ಪ್ರಾಕಾರದಿಂದ ಮುಂದೆ ತಾಮ್ರದ ಪ್ರಾಕಾರವು ನಾಲ್ಕು ಮೂಲೆಗಳೂ ಸಮಕೋಣವಾಗಿ ಏಳು ಗಾವುದ ಎತ್ತರವಾಗಿರುವುದು. ಆ ಎರಡು ಪ್ರಾಕಾರಗಳ ನಡುವೆ ಚಿನ್ನದ ಬಣ್ಣದಂತೆ ಪ್ರಕಾಶಿಸುವ ಹೂವುಗಳುಳ್ಳ ಕಲ್ಪವೃಕ್ಷದ ತೋಟಗಳಿರುವುವು. ॥೩೪-೩೫॥

ಪತ್ರಾಣಿ ಕಾಂಚನಾಭಾನಿ ರತ್ನಬೀಜಫಲಾನಿ ಚ ।
ದಶಯೋಜನಗಂಧೋ ಹಿ ಪ್ರಸರ್ಪತಿ ಸಮಂತತಃ ॥೩೬॥

ತದ್ವನಂ ರಕ್ಷಿತಂ ರಾಜನ್ವಸಂತೇನರ್ತುನಾಽನಿಶಂ ।
ಪುಷ್ಪಸಿಂಹಾಸನಾಸೀನಃ ಪುಷ್ಪಚ್ಛತ್ರವಿರಾಜಿತಃ ॥೩೭॥

ಪುಷ್ಪಭೂಷಾ ಭೂಷಿತಶ್ಚ ಪುಷ್ಪಾಸವವಿಘೂರ್ಣಿತಃ ।
ಮಧುಶ್ರೀರ್ಮಾಧವಶ್ರೀಶ್ಚ ದ್ವೇ ಭಾರ್ಯೇ ತಸ್ಯ ಸಂಮತೇ ॥೩೮॥

ಕ್ರೀಡತಃ ಸ್ಮೇರವದನೇ ಸುಮಸ್ತಬಕಕಂದುಕೈಃ ।
ಅತೀವ ರಮ್ಯಂ ವಿಪಿನಂ ಮಧುಸ್ರಾವಿ ಸಮಂತತಃ ॥೩೯॥

ದಶಯೋಜನಪರ್ಯಂತಂ ಕುಸುಮಾಮೋದವಾಯುನಾ ।
ಪೂರಿತಂ ದಿವ್ಯಗಂಧರ್ವೈಃ ಸಾಂಗನೈರ್ಗಾನಲೋಲುಪೈಃ ॥೪೦॥

ಶೋಭಿತಂ ತದ್ವನಂ ದಿವ್ಯಂ ಮತ್ತಕೋಕಿಲನಾದಿತಂ ।
ವಸಂತಲಕ್ಷ್ಮೀಸಂಯುಕ್ತಂ ಕಾಮಿಕಾಮಪ್ರವರ್ಧನಂ ॥೪೧॥

---

ಆ ಮರದ ಎಲೆಗಳು ಚಿನ್ನದಂತೆ ಹೊಳೆಯುವುವು. ರತ್ನಗಳನ್ನೇ ಬೀಜಗಳಾಗಿ ಉಳ್ಳ ಹಣ್ಣುಗಳು ಅದರಲ್ಲಿರುವುವು. ಅದರ ಸುವಾಸನೆಯು ಸುತ್ತಲೂ ಹತ್ತುಯೋಜನದವರೆಗೆ ಹರಡುತ್ತಿರುವುದು. ಆ ವನವು ಯಾವಾಗಲೂ ವಸಂತ ರಾಜನ ರಕ್ಷಣೆಯಲ್ಲಿರುವುದು. ಆ ರಾಜನು ಹೂವಿನ ಸಿಂಹಾಸನದಲ್ಲಿ ಕುಳಿತು, ಹೂವಿನ ಛತ್ರಿಯನ್ನೂ, ಆಭರಣಗಳನ್ನೂ ಧರಿಸಿ, ಹೂವಿನ ರಸದ ಮದ್ಯದಿಂದ ಮದಿಸಿರುವನು. ಆ ರಾಜನಿಗೆ ಮಧುಶ್ರೀ ಎಂದೂ, ಮಾಧವಶ್ರೀ ಎಂದೂ ಇಬ್ಬರು ಪತ್ನಿಯರು. ॥೩೬-೩೭-೩೮॥

ಆ ಸ್ತ್ರೀಯರಿಬ್ಬರೂ ನಗುತ್ತ ಹೂವಿನ ಗೊಂಚಲಿನಿಂದ ಮಾಡಿದ ಚೆಂಡನ್ನಾಡುತ್ತಿರುವರು. ಆ ಕಾಡು ಮನೋಹರವಾಗಿ ಸುತ್ತಲೂ ಮಕರಂದವು ಸುರಿಯುತ್ತಿರುವುದು. ಹತ್ತು ಗಾವುದದವರೆಗೂ ಹೂವಿನ ವಾಸನೆಯಿಂದ ಕೂಡಿದ ಗಾಳಿಯು ಬೀಸುತ್ತಿರುವುದು. ಅಲ್ಲಿ ಗಂಧರ್ವರು ತಮ್ಮ ಪತ್ನಿಯರೊಡನೆ ಗಾನ ಮಾಡುತ್ತಲಿರುವರು. ॥೩೯-೪೦॥

ಸುಂದರವಾದ ಮತ್ತು ಶ್ರೇಷ್ಠವಾದ ಆ ವನವು ಮದಿಸಿದ ಕೋಗಿಲೆಯ

ತಾಮ್ರಸಾಲಾದುತ್ತರತ್ರ ಸೀಸಸಾಲಃ ಪ್ರಕೀರ್ತಿತಃ ।
ಸಮುಚ್ಛ್ರಾಯಃ ಸ್ಮೃತೋಽಪ್ಯಸ್ಯ ಸಪ್ತಯೋಜನಸಂಖ್ಯಯಾ॥೪೨॥

ಸಂತಾನವಾಟಿಕಾ ಮಧ್ಯೇ ಸಾಲಯೋಸ್ತು ದ್ವಯೋರ್ನೃಪ ।
ದಶಯೋಜನಗಂಧಸ್ತು ಪ್ರಸೂನಾನಾಂ ಸಮಂತತಃ ॥೪೩॥

ಹಿರಣ್ಯಾಭಾನಿ ಕುಸುಮಾನ್ಯುತ್ಫುಲ್ಲಾನಿ ನಿರಂತರಂ ।
ಅಮೃತದ್ರವಸಂಯುಕ್ತಫಲಾನಿ ಮಧುರಾಣಿ ಚ ॥೪೪॥

ಗ್ರೀಷ್ಮರ್ತುರ್ನಾಯಕಸ್ತಸ್ಯಾ ವಾಟಿಕಾಯಾ ನೃಪೋತ್ತಮ ।
ಶುಕ್ರಶ್ರೀಶ್ಚ ಶುಚಿಶ್ರೀಶ್ಚ ದ್ವೇ ಭಾರ್ಯೇ ತಸ್ಯ ಸಂಮತೇ ॥೪೫॥

ಸಂತಾಪತ್ರಸ್ತ-ಲೋಕಾಸ್ತು ವೃಕ್ಷಮೂಲೇಷು ಸಂಸ್ಥಿತಾಃ ।
ನಾನಾಸಿದ್ಧೈಃ ಪರಿವೃತೋ ನಾನಾದೇವೈಃ ಸಮನ್ವಿತಃ ॥೪೬॥

---

ಧ್ವನಿಯುಳ್ಳದಾಗಿ ವಸಂತಲಕ್ಷ್ಮಿಯಿಂದ ಕೂಡಿ ಕಾಮುಕರ ಕಾಮವನ್ನು ಹೆಚ್ಚಿಸುವುದಾಗಿರುವುದು. ||೪೧||

ತಾಮ್ರದ ಪ್ರಾಕಾರದಿಂದ ಮುಂದೆ ಸೀಸದ ಪ್ರಾಕಾರವಿರುವುದು. ಅದೂ ಏಳುಗಾವುದ ಎತ್ತರವಾಗಿರುವುದು. ||೪೨||

ತಾಮ್ರ ಮತ್ತು ಸೀಸದ ಪ್ರಾಕಾರಗಳ ನಡುವೆ ಸಂತಾನವೆಂಬ ಕಲ್ಪವೃಕ್ಷಗಳ ತೋಟವಿರುವುದು. ಆ ಮರದ ಹೂಗಳ ವಾಸನೆಯು ಹತ್ತು ಗಾವುದಗಳವರೆಗೆ ಹರಡಿರುವುದು. ಅದರ ಹೂಗಳು ಚಿನ್ನದಂತೆ ಇರುತ್ತ ಯಾವಾಗಲೂ ಅರಳಿರುವುವು. ಅದರ ಹಣ್ಣುಗಳು ಅಮೃತ ರಸದಿಂದ ಕೂಡಿ ರುಚಿಯಾಗಿರುವುವು. ||೪೩-೪೪||

ಎಲೈ ರಾಜಶ್ರೇಷ್ಠನೇ, ಆ ತೋಟಕ್ಕೆ ಗ್ರೀಷ್ಮಋತುವೇ ಅಧಿಪತಿಯು. ಆ ಗ್ರೀಷ್ಮನಿಗೆ ಶುಕ್ಲಶ್ರೀ ಎಂದೂ ಶುಚಿಶ್ರೀ ಎಂದೂ ಇಬ್ಬರು ಪತ್ನಿಯರು. ||೪೫||

ಸಂತಾಪದಿಂದ ಹೆದರಿದ ಜನರು ಆ ಮರಗಳ ಬುಡಗಳಲ್ಲಿರುವರು. ಬಗೆ ಬಗೆಯ ಸಿದ್ಧರೂ, ದೇವತೆಗಳೂ, ಸ್ತ್ರೀಯರ ಗುಂಪುಗಳೂ, ಅಲ್ಲಿರುವುವು. ಅವರೆಲ್ಲರೂ ಶ್ರೀಗಂಧದ ಕೆಸರನ್ನು ಬಳಿದುಕೊಂಡು, ಹೂಮಾಲೆಗಳಿಂದ ಅಲಂಕರಿಸಿಕೊಂಡು,

ವಿಲಾಸಿನೀನಾಂ ವೃಂದೈಸ್ತು ಚಂದನದ್ರವ ಪಂಕಿಲೈಃ ।
ಪುಷ್ಪಮಾಲಾ ಭೂಷಿತೈಸ್ತು ತಾಲವೃಂತ ಕರಾಂಬುಜೈಃ ॥೪೭॥

ಪ್ರಾಕಾರಃ ಶೋಭಿತೋ ರಾಜನ್ ಶೀತಲಾಂಬುನಿಷೇವಿಭಿಃ ।
ಸೀಸಸಾಲಾದುತ್ತರತ್ರಾ ಪ್ಯಾರಕೂಟಮಯಃ ಶುಭಃ ॥೪೮॥

ಪ್ರಾಕಾರೋ ವರ್ತತೇ ರಾಜನ್ಮುನಿಯೋಜನ ದೈರ್ಘ್ಯವಾನ್ ।
ಹರಿಚಂದನವೃಕ್ಷಾಣಾಂ ವಾಟೀ ಮಧ್ಯೇ ತಯೋಃ ಸ್ಮೃತಾ ॥೪೯॥

ಸಾಲಯೋರಧಿನಾಥಸ್ತು ವರ್ಷರ್ತುರ್ಮೇಘವಾಹನಃ ।
ವಿದ್ಯುತ್ಪಿಂಗಲ ನೇತ್ರಶ್ಚ ಜೀಮೂತಕವಚಃ ಸ್ಮೃತಃ ॥೫೦॥

ವಜ್ರನಿರ್ಘೋಷಮುಖರಶ್ಚೇಂದ್ರಧನ್ವಾ ಸಮಂತತಃ ।
ಸಹಸ್ರಶೋ ವಾರಿಧಾರಾ ಮುಂಚನ್ನಾಸ್ತೇ ಗಣಾವೃತಃ ॥೫೧॥

ನಭಶ್ರೀಶ್ಚ ನಭಸ್ಯಶ್ರೀಃ ಸ್ವರಸ್ಯಾ ರಸ್ಯಮಾಲಿನೀ ।
ಅಂಬಾ ದುಲಾ ನಿರತ್ನಿಶ್ಚಾಭ್ರಮಂತೀ ಮೇಘಯಂತಿಕಾ ॥೫೨॥

---

ತಾಳೆಗರಿಯ ಬೀಸಣಿಗೆಗಳನ್ನು ಕೈಯಲ್ಲಿ ಹಿಡಿದುಕೊಂಡಿರುವರು. ಆ ಪ್ರಾಕಾರವು ತಣ್ಣಗಿರುವ ನೀರನ್ನು ಕುಡಿಯುತ್ತಿರುವ ಜನರಿಂದ ಅಲಂಕೃತವಾಗಿರುವುದು. ॥೪೬-೪೭॥

ಸೀಸದ ಪ್ರಾಕಾರದಿಂದ ಮುಂದೆ ಹಿತ್ತಾಳೆಯ ಪ್ರಾಕಾರವಿರುವುದು. ಅದು ಏಳು ಗಾವುದ ವಿಸ್ತಾರವಾಗಿರುವುದು. ಆ ಪ್ರಾಕಾರಗಳ ನಡುವೆ ಹರಿಚಂದನ ವೃಕ್ಷಗಳ ತೋಟಗಳಿರುವುವು. ॥೪೮-೪೯॥

ಆ ಪ್ರಾಕಾರಗಳಿಗೆ ಮೇಘಗಳನ್ನು ನಡೆಸುವ ವರ್ಷರ್ತುವೇ ಅಧಿಪತಿಯು. ಅವನು ಮಿಂಚಿನಂತೆ ಪಿಂಗಳ ವರ್ಣದ ಕಣ್ಣುಗಳುಳ್ಳವನು. ಮೇಘಗಳೇ ಅವನ ಕವಚಗಳು. ಸಿಡಿಲಿನ ಧ್ವನಿಯೇ ಅವನ ಧ್ವನಿಯು. ಕಾಮನಬಿಲ್ಲೇ ಅವನ ಧನುಸ್ಸು. ಅವನು ತನ್ನ ಗಣಗಳೊಡನೆ ಸುತ್ತಲೂ ನೀರಿನ ಹನಿಗಳನ್ನು ಸುರಿಸುತ್ತಿರುವನು. ॥೫೦-೫೧॥

ಆ ವರ್ಷಋತುವಿಗೆ ನಭಶ್ರೀ, ನಭಸ್ಯಶ್ರೀ, ಸ್ವರಸ್ಯಾ, ರಸ್ಯಮಾಲಿನೀ, ಅಂಬಾ, ದುಲಾ, ನಿರತ್ನಿ, ಅಭ್ರಮಂತೀ, ಮೇಘಯಂತಿಕಾ ವರ್ಷಯಂತೀ,

ವರ್ಷಯಂತೀ ಚಿಬುಣಿಕಾ ವಾರಿಧಾರಾ ಚ ಸಂಮತಾಃ ।
ವರ್ಷತೋರ್ದ್ವಾದಶ ಪ್ರೋಕ್ತಾಃ ಶಕ್ತಯೋ ಮದವಿಹ್ವಲಾಃ ॥೫೩॥

ನವಪಲ್ಲವವೃಕ್ಷಾಶ್ಚ ನವೀನ ಲತಿಕಾನ್ವಿತಾಃ ।
ಹರಿತಾನಿ ತೃಣಾನ್ಯೇವ ವೇಷ್ಟಿತಾ ಯೈರ್ಧರಾಽಖಿಲಾ ॥೫೪॥

ನದೀನದಪ್ರವಾಹಾಶ್ಚ ಪ್ರವಹಂತಿ ಚ ವೇಗತಃ ।
ಸರಾಂಸಿ ಕಲುಷಾಂಬೂನಿ ರಾಗಿಚಿತ್ತಸಮಾನಿ ಚ ॥೫೫॥

ವಸಂತಿ ದೇವಾಃ ಸಿದ್ಧಾಶ್ಚ ಯೇ ದೇವೀಕರ್ಮಕಾರಿಣಃ ।
ವಾಪೀಕೂಪತಟಾಕಾಶ್ಚ ಯೈಃ ದೇವ್ಯರ್ಥಂ ಸಮರ್ಪಿತಾಃ ॥೫೬॥

ತೇ ಗಣಾ ನಿವಸಂತ್ಯತ್ರ ಸವಿಲಾಸಾಶ್ಚ ಸಾಂಗನಾಃ ।
ಆರಕೂಟಮಯಾದಗ್ರೇ ಸಪ್ತಯೋಜನ ದೈರ್ಘ್ಯವಾನ್ ॥೫೭॥

---

ಚಿಬುಣಿಕಾ, ವಾರಿಧಾರಾ ಎಂಬ ಹನ್ನೆರಡು ಜನ ಮದಿಸಿದ ಶಕ್ತಿದೇವಿಯರು ಪತ್ನಿಯರಾಗಿರುವರು. ॥೫೨-೫೩॥

ಅಲ್ಲಿನ ಭೂಮಿಯೆಲ್ಲವೂ ಹೊಸದಾಗಿ ಚಿಗುರಿದ ಮರಗಳಿಂದಲೂ ಬಳ್ಳಿಗಳಿಂದಲೂ, ಹಸುರು ಹುಲ್ಲುಗಳಿಂದಲೂ ತುಂಬಿರುವುದು. ॥೫೪॥

ಅಲ್ಲಿ ನದಿಗಳ ಮತ್ತು ನದಗಳ ಪ್ರವಾಹಗಳು ವೇಗವಾಗಿ ಹರಿಯುತ್ತಿರುವುವು. ಸರೋವರಗಳು ಕಾಮುಗಳ ಮನಸ್ಸಿನಂತೆ ಕದಡಿದ ನೀರಿನಿಂದ ತುಂಬಿರುವುವು. ॥೫೫॥

ಆ ಪ್ರದೇಶದಲ್ಲಿ ದೇವತೆಗಳೂ, ಸಿದ್ಧರೂ, ದೇವೀಪ್ರೀತ್ಯರ್ಥವಾಗಿ ಯಜ್ಞಾದಿಗಳನ್ನು ಮಾಡಿದವರೂ, ಭಾವಿ, ಕೆರೆ ಮುಂತಾದ ಜಲಾಶಯಗಳನ್ನು ಮಾಡಿಸಿ ದೇವಿಗೆ ಸಮರ್ಪಿಸಿದವರೂ, ವಾಸಮಾಡುತ್ತಿರುವರು. ॥೫೬॥

ಅಲ್ಲಿರುವ ಆ ದೇವಗಣಗಳೆಲ್ಲವೂ ವಿಲಾಸಯುಕ್ತರಾದ ಸ್ತ್ರೀಯರೊಡನೆ ವಾಸಮಾಡುತ್ತಿರುವರು.

ಹಿತ್ತಾಳೆಯ ಪ್ರಾಕಾರದ ಮುಂದೆ ಏಳು ಗಾವುದ ವಿಸ್ತಾರದಲ್ಲಿ ಪಂಚಲೋಹದ ಪ್ರಾಕಾರವಿರುವುದು. ಅವೆರಡು ಪ್ರಾಕಾರಗಳ ನಡುವೆ ಮಂದಾರವೃಕ್ಷಗಳ ತೋಟಗಳು

ಪಂಚಲೋಹಾತ್ಮಕಃ ಸಾಲೋ ಮಧ್ಯೇ ಮಂದಾರವಾಟಿಕಾ ।
ನಾನಾಪುಷ್ಪಲತಾ ಕೀರ್ಣಾ ನಾನಾಪಲ್ಲವ ಶೋಭಿತಾ ॥೫೮॥

ಅಧಿಷ್ಠಾತಾಽತ್ರ ಸಂಪ್ರೋಕ್ತಃ ಶರದೃತುರನಾಮಯಃ ।
ಇಷಲಕ್ಷ್ಮೀರೂರ್ಜಲಕ್ಷ್ಮೀಃ ದ್ವೇಭಾರ್ಯೇ ತಸ್ಯ ಸಂಮತೇ ॥೫೯॥

ನಾನಾಸಿದ್ಧಾ ವಸಂತ್ಯತ್ರ ಸಾಂಗನಾಃ ಸಪರಿಚ್ಛದಾಃ ।
ಪಂಚಲೋಹ ಮಯಾದಗ್ರೇ ಸಪ್ತಯೋಜನದೈರ್ಘ್ಯವಾನ್ ॥೬೦॥

ದೀಪ್ಯಮಾನೋ ಮಹಾಶೃಂಗೈರ್ವರ್ತತೇ ರೌಪ್ಯಸಾಲಕಃ ।
ಪಾರಿಜಾತಾಟವೀ ಮಧ್ಯೇ ಪ್ರಸೂನಸ್ತಬಕಾನ್ವಿತಾ ॥೬೧॥

ದಶಯೋಜನಗಂಧೀನಿ ಕುಸುಮಾನಿ ಸಮಂತತಃ ।
ನೋದಯಂತಿ ಗಣಾನ್ಸರ್ವಾನ್ ಯೇ ದೇವೀಕರ್ಮಕಾರಿಣಃ ॥೬೨॥

---

ಬಗೆ ಬಗೆಯ ಹೂಬಳ್ಳಿಗಳಿಂದಲೂ, ಚಿಗುರುಗಳಿಂದಲೂ ಕೂಡಿ ಶೋಭಿಸುತ್ತಿರುವುದು. ॥೫೭-೫೮॥

ಆ ಪ್ರದೇಶಕ್ಕೆ ಶರದೃತುವೇ ಅಧಿಪತಿಯು. ಅವನಿಗೆ ಇಷಲಕ್ಷ್ಮೀ ಎಂದೂ ಊರ್ಜಲಕ್ಷ್ಮೀ ಎಂದೂ ಇಬ್ಬರು ಪತ್ನಿಯರು. ನಾನಾ ಬಗೆಯ ಸಿದ್ಧರು ಅಲ್ಲಿ ಸ್ತ್ರೀಯರೊಡನೆ ತಮಗೆ ಬೇಕಾದ ವಸ್ತುಗಳಿಂದ ಕೂಡಿ ವಾಸವಾಗಿರುವರು. ॥೫೯॥

ಪಂಚಲೋಹದ ಪ್ರಾಕಾರದ ಮುಂದೆ ಏಳು ಗಾವುದ ವಿಸ್ತಾರದಲ್ಲಿ ಬೆಳ್ಳಿಯ ಪ್ರಾಕಾರವು ಎತ್ತರವಾದ ಶಿಖರಗಳಿಂದ ಪ್ರಕಾಶಿಸುತ್ತಿರುವುದು. ॥೬೦॥

ಆ ಎರಡು ಪ್ರಾಕಾರಗಳ ನಡುವೆ ಹೂಗೊಂಚಲುಗಳಿಂದ ಕೂಡಿದ ಪಾರಿಜಾತ ವೃಕ್ಷಗಳ ಕಾಡುಇರುವುದು. ಆ ಹೂಗಳ ವಾಸನೆಯು ಸುತ್ತಲೂ ಹತ್ತು ಗಾವುದ ಗಳಿಗೆ ಹರಡುವುದು. ದೇವೀಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡಿ ದೇವತೆಗಳಾಗಿ ಅಲ್ಲಿ ವಾಸವಾಗಿರುವ ದೇವಗಣಗಳನ್ನು ಆ ವಾಸನೆಯು ಸಂತೋಷಪಡಿಸುವುದು. ॥೬೧-೬೨॥

ತತ್ರಾಧಿನಾಥಃ ಸಂಪ್ರೋಕ್ತೋ ಹೇಮಂತರ್ತುರ್ಮಹೋಜ್ವಲಃ ।
ಸಗಣಃ ಸಾಯುಧಃ ಸರ್ವಾನ್ ರಾಗಿಣೋ ರಂಜಯನ್ನೃಪ ॥೬೩॥

ಸಹಶ್ರೀಶ್ಚ ಸಹಸ್ಯಶ್ರೀಃ ದ್ವೇ ಭಾರ್ಯೇ ತಸ್ಯ ಸಂಮತೇ ।
ವಸಂತಿ ತತ್ರ ಸಿದ್ಧಾಶ್ಚ ಯೇ ದೇವೀವ್ರತಕಾರಿಣಃ ॥೬೪॥

ರೌಪ್ಯ ಸಾಲಮಯಾದಗ್ರೇ ಸಪ್ತಯೋಜನದೈರ್ಘ್ಯವಾನ್ ।
ಸೌವರ್ಣಸಾಲಃ ಸಂಪ್ರೋಕ್ತಸ್ತಪ್ತಹಾಟಕ ಕಲ್ಪಿತಃ ॥೬೫॥

ಮಧ್ಯೇ ಕದಂಬವಾಟೀ ತು ಪುಷ್ಪಪಲ್ಲವಶೋಭಿತಾ ।
ಕದಂಬಮದಿರಾಧಾರಾಃ ಪ್ರವರ್ತಂತೇ ಸಹಸ್ರಶಃ ॥೬೬॥

ಯಾಭಿರ್ನಿಪೀತಪೀತಾಭಿಃ ನಿಜಾನಂದೋಽನುಭೂಯತೇ ।
ತತ್ರಾಧಿನಾಥಃ ಸಂಪ್ರೋಕ್ತಃ ಶೈಶಿರರ್ತುರ್ಮಹೋದಯಃ ॥೬೭॥
ತಪಶ್ರೀಶ್ಚ ತಪಸ್ಯಶ್ರೀರ್ದ್ವೇ ಭಾರ್ಯೇ ತಸ್ಯ ಸಂಮತೇ ।

---

ಅಲ್ಲಿ ಮಹಾ ಪ್ರಕಾಶಮಾನನಾದ ಹೇಮಂತಋತುವೇ ಅಧಿಪತಿಯು ಅವನು ತನ್ನ ಆಯುಧಗಳಿಂದಲೂ, ಗಣಗಳಿಂದಲೂ ಕೂಡಿ ಕಾಮಿಗಳನ್ನು ಸಂತೋಷ ಪಡಿಸುತ್ತಿರುವನು. ಅವನಿಗೆ ಸಹಶ್ರೀ ಎಂದೂ ಸಹಸ್ಯಶ್ರೀ ಎಂದೂ ಇಬ್ಬರು ಪತ್ನಿಯರು. ದೇವಿಯ ವ್ರತವನ್ನು ಮಾಡಿದ ಸಿದ್ಧರು ಅಲ್ಲಿ ವಾಸವಾಗಿರುವರು. ॥೬೩-೬೪॥

ಬೆಳ್ಳಿಯ ಪ್ರಾಕಾರದಿಂದ ಮುಂದೆ ಏಳು ಗಾವುದ ವಿಸ್ತಾರವಾದ ಚಿನ್ನದ ಪ್ರಾಕಾರವು ಪುಟವಿಟ್ಟ ಚಿನ್ನದಿಂದ ಮಾಡಿದುದಾಗಿರುವುದು. ॥೬೫॥

ಆ ಎರಡು ಪ್ರಾಕಾರಗಳ ನಡುವೆ ಚಿಗುರು ಮತ್ತು ಹೂಗಳಿಂದ ಶೋಭಿಸುತ್ತಿರುವ ಕದಂಬವೃಕ್ಷಗಳ ತೋಟಗಳಿರುವುವು. ಆ ಮರದಲ್ಲಿ ಮದ್ಯಗಳು ವಿಶೇಷವಾಗಿ ಸುರಿಯುತ್ತಿರುವುವು. ಆ ಮದ್ಯವನ್ನು ವಿಶೇಷವಾಗಿ ಕುಡಿದರೆ ಸ್ವಸ್ವರೂಪಾನಂದದ ಅನುಭವವು ಉಂಟಾಗುವುದು. ॥೬೬॥

ಅಲ್ಲಿಗೆ ಮಹಾನುಹಿಮನಾದ ಶಿಶಿರ ಋತುವು ಅಧಿಪತಿಯಾಗಿರುವನು. ಅವನಿಗೆ ತಪಶ್ರೀ ಎಂದೂ ತಪಸ್ಯಶ್ರೀ ಎಂದೂ ಇಬ್ಬರು ಪತ್ನಿಯರು. ಇವರಿಬ್ಬ

ನೋದವಾನಃ ಸಹೈತಾಭ್ಯಾಂ ವರ್ತತೇ ಶಿಶಿರಾಕೃತಿಃ ॥೬೮॥

ನಾನಾ ವಿಲಾಸಸಂಯುಕ್ತೋ ನಾನಾಗಣಸಮಾವೃತಃ ।
ನಿವಸಂತಿ ಮಹಾಸಿದ್ಧಾ ಯೇ ದೇವೀ ದಾನಕಾರಿಣಃ ॥೬೯॥

ನಾನಾಭೋಗಸಮುತ್ಪನ್ನ ಮಹಾನಂದಸಮನ್ವಿತಾಃ ।
ಸಾಂಗನಾಃ ಪರಿವಾರೈಸ್ತು ಸಂಘಶಃ ಪರಿವಾರಿತಾಃ ॥೭೦॥

ಸ್ವರ್ಣಸಾಲಮಯಾದಗ್ರೇ ಮುನಿಯೋಜನದೈರ್ಘ್ಯವಾನ್ ।
ಪುಷ್ಯರಾಗಮಯಃ ಸಾಲಃ ಕುಂಕುಮಾರುಣವಿಗ್ರಹಃ ॥೭೧॥

ಪುಷ್ಯರಾಗಮಯೀ ಭೂಮಿಃ ವನಾನ್ಯುಪವನಾನಿ ಚ ।
ರತ್ನವೃಕ್ಷಾಲವಾಲಾಶ್ಚ ಪುಷ್ಯರಾಗಮಯಾಃ ಸ್ಮೃತಾಃ ॥೭೨॥

ಪ್ರಾಕಾರೋ ಯಸ್ಯ ರತ್ನಸ್ಯ ತದ್ರತ್ನರಚಿತಾ ದ್ರುಮಾಃ ।
ವನಭೂಃ ಪಕ್ಷಿಣಶ್ಚೈವ ರತ್ನವರ್ಣಜಲಾನಿ ಚ ॥೭೩॥
ಮಂಡಪಾ ಮಂಡಪಸ್ತಂಭಾಃ ಸರಾಂಸಿ ಕಮಲಾನಿ ಚ ।

---

ರಿಂದಲೂ ಕೂಡಿ ಬಗೆಬಗೆಯ ವಿಲಾಸಗಳಿಂದ ಅನೇಕ ದೇವತೆಗಳೊಡನೆ ಶಾಂತವಾದ ಆಕಾರವುಳ್ಳವನಾಗಿ ಶಿಶಿರಋತುವಿನ ಅಭಿಮಾನದೇವತೆಯು ಅಲ್ಲಿರುವಳು. ॥೬೭-೬೮॥

ಅಲ್ಲಿ ದೇವಿಯ ಪ್ರೀತ್ಯರ್ಥವಾಗಿ ಗೋದಾನವೇ ಮುಂತಾದ ದಾನಗಳನ್ನು ಮಾಡಿದವರು ಬಗೆಬಗೆಯ ಸುಖಾನುಭವಗಳಿಂದುಂಟಾದ ಆನಂದವನ್ನನುಭವಿಸುತ್ತ ಸ್ತ್ರೀಯರಿಂದಲೂ, ಪರಿವಾರಗಳಿಂದಲೂ, ಕೂಡಿದವರಾಗಿ ಗುಂಪುಗುಂಪಾಗಿ ಮಹಾ ಸಿದ್ಧಿಯನ್ನು ಪಡೆದವರಾಗಿ ವಾಸಮಾಡುತ್ತಿರುವರು. ॥೬೯-೭೦॥

ಚಿನ್ನದ ಪ್ರಾಕಾರದಿಂದ ಮುಂದೆ ಒಂಬತ್ತನೆಯದು ಪುಷ್ಯರಾಗವೆಂಬ ರತ್ನದ ಪ್ರಾಕಾರವು ಕುಂಕುಮದಂತೆ ಕೆಂಪಾದ ಬಣ್ಣದಿಂದ ಕೂಡಿರುವುದು. ನೆಲವೂ ವನಗಳೂ ರತ್ನಗಳ ಆಕಾರವಾದ ಮರಗಳೂ, ಆ ಮರಗಳ ಪಾತಿಗಳೂ ಪುಷ್ಯರಾಗ ರತ್ನಗಳಿಂದ ತುಂಬಿದುದಾಗಿರುವುದು. ॥೭೧-೭೨॥

ಎಲೈ ರಾಜನೇ, ಕೇಳು, ಯಾವ ರತ್ನದ ಪ್ರಾಕಾರವಿರುವುದೋ ಆ ರತ್ನದಿಂದ ಮಾಡಿದ ಮರಗಳೂ, ವನ, ಭೂಮಿ, ಪಕ್ಷಿಗಳು, ನೀರು, ಮಂಟಪಗಳು, ಕಂಭಗಳು,

ಪ್ರಾಕಾರೇ ತತ್ರ ಯದ್ಯತ್ಸ್ಯಾತ್ತತ್ಸರ್ವಂ ತತ್ಸಮಂ ಭವೇತ್ ॥೭೪॥

ಪರಿಭಾಷೇಯ ಮುದ್ದಿಷ್ಟಾ ರತ್ನಸಾಲಾದಿಷು ಪ್ರಭೋ ।
ತೇಜಸಾ ಸ್ಯಾಲ್ಲಕ್ಷಗುಣಃ ಪೂರ್ವಸಾಲಾತ್ಪರೋ ನೃಪ ॥೭೫॥

ದಿಕ್ಪಾಲಾ ನಿವಸಂತ್ಯತ್ರ ಪ್ರತಿಬ್ರಂಹ್ಮಾಂಡವರ್ತಿನಾಂ ।
ದಿಕ್ಪಾಲಾನಾಂ ಸಮಷ್ಟ್ಯಾತ್ಮರೂಪಾಃ ಸ್ಫೂರ್ಜದ್ವರಾಯುಧಾಃ॥೭೬॥

ಪೂರ್ವಾಶಾಯಾಂ ಸಮುತ್ತುಂಗ ಶೃಂಗಾ ಪೂರಮರಾವತೀ ।
ನಾನೋಪವನಸಂಯುಕ್ತಾ ಮಹೇಂದ್ರಸ್ತತ್ರ ರಾಜತೇ ॥೭೭॥

ಸ್ವರ್ಗಶೋಭಾ ಚ ಯಾ ಸ್ವರ್ಗೇ ಯಾವತೀ ಸ್ಯಾತ್ತತೋಽಧಿಕಾ ।
ಸಮಷ್ಟಿಶತನೇತ್ರಸ್ಯ ಸಹಸ್ರಗುಣತಃ ಸ್ಮೃತಾ ॥೭೮॥

---

ಸರೋವರಗಳು, ಕಮಲಗಳು ಇವೆಲ್ಲವೂ ಆ ರತ್ನದವುಗಳಾಗಿರುವುವು. ರತ್ನ ಪ್ರಾಕಾರಗಳಲ್ಲಿ ಇದು ಸಾಮಾನ್ಯ ನಿಯಮವಾಗಿರುವುದು. ||೭೩-೭೪||

ಎಲೈ ಜನಮೇಜಯರಾಜನೇ, ಪ್ರಾಕಾರಗಳಲ್ಲಿ ಒಂದಕ್ಕಿಂತ ಒಂದು ಲಕ್ಷಪಾಲು ಹೆಚ್ಚು ತೇಜಸ್ಸಿನಿಂದ ಕೂಡಿರುವುದು. ಅಲ್ಲಿ ಪ್ರತಿ ಬ್ರಹ್ಮಾಂಡದಲ್ಲಿರುವ ದಿಕ್ಪಾಲಕರೂ ವಾಸಮಾಡುತ್ತಿರುವರು. ಹೇಗೆಂದರೆ, ||೭೫||

ಪ್ರತಿ ಬ್ರಹ್ಮಾಂಡದಲ್ಲಿರುವ ದಿಕ್ಪಾಲಕರು ವ್ಯಷ್ಟಿರೂಪರಾದವರು. ಈ ವ್ಯಷ್ಟಿ ದಿಕ್ಪಾಲಕರಿಗೆ ಅಧಿಪತಿಗಳಾದವರು ಸಮಷ್ಟಿದಿಕ್ಪಾಲಕರು. ಈ ಸಮಷ್ಟಿದಿಕ್ಪಾಲಕರನ್ನೇ ಶ್ರೀಭುವನೇಶ್ವರೀ ಯಂತ್ರದಲ್ಲಿ ಭೂಪುರಕೋಣಗಳಲ್ಲಿ ಪೂಜಿಸುವರು. ಅವರೇ ಆ ಪ್ರದೇಶದಲ್ಲಿ ವಾಸಮಾಡುವರು. ಅವರು ಪ್ರಕಾಶಮಾನವಾದ, ಶ್ರೇಷ್ಠವಾದ ಆಯುಧಗಳನ್ನು ಧರಿಸಿರುವರು. ಇಲ್ಲಿಂದ ಮುಂದೆ ಶ್ರೀಭುವನೇಶ್ವರೀ ಯಂತ್ರದೇವತೆಗಳನ್ನೇ ಹೇಳಿರುವುದು. ||೭೬||

ಪೂರ್ವದಿಕ್ಕಿನಲ್ಲಿ ಎತ್ತರವಾದ ಶಿಖರಗಳುಳ್ಳ ಅಮರಾವತೀಪಟ್ಟಣವು ಅನೇಕ ಉಪವನಗಳಿಂದ ಕೂಡಿರುವುದು. ಅಲ್ಲಿ ದೇವೇಂದ್ರನು ಪ್ರಕಾಶಿಸುತ್ತಿರುವನು. ||೭೭||

ಸ್ವರ್ಗಲೋಕದಲ್ಲಿರುವ ಇಂದ್ರನಿಗೆ ಎಷ್ಟು ಕಾಂತಿಯು ಇರುವುದೋ ಅದಕ್ಕಿಂತ ಸಾವಿರಪಾಲು ಹೆಚ್ಚಾದ ಕಾಂತಿಯು ಸಮಷ್ಟಿರೂಪನಾದ ದೇವೇಂದ್ರನಿಗೆ ಇರುವುದು. ||೭೮||

ಐರಾವತಸಮಾರೂಢೋ ವಜ್ರಹಸ್ತಃ ಪ್ರತಾಪವಾನ್ ।
ದೇವಸೇನಾಪರಿವೃತೋ ರಾಜತೇಽತ್ರ ಶತಕ್ರತುಃ ॥೭೯॥

ದೇವಾಂಗನಾಗಣಯುತಾ ಶಚೀ ತತ್ರ ವಿರಾಜತೇ ।
ವಹ್ನಿಕೋಣೇ ವಹ್ನಿಪುರೀ ವಹ್ನಿಪೂಃ ಸದೃಶೀ ನೃಪ ॥೮೦॥

ಸ್ವಾಹಾಸ್ವಧಾಸಮಾಯುಕ್ತೋ ವಹ್ನಿಸ್ತತ್ರ ವಿರಾಜತೇ ।
ನಿಜವಾಹನಭೂಷಾಢ್ಯೋ ನಿಜದೇವಗಣೈರ್ವೃತಃ ॥೮೧॥

ಯಾಮ್ಯಾಶಾಯಾಂ ಯಮಪುರೀ ತತ್ರ ದಂಡಧರೋ ಮಹಾನ್ ।
ಸ್ವಭಟೈರ್ವೇಷ್ಟಿತೋ ರಾಜನ್ ಚಿತ್ರಗುಪ್ತಪುರೋಗಮೈಃ ॥೮೨॥

ನಿಜಶಕ್ತಿಯುತೋ ಭಾಸ್ವತ್ತನಯೋಽಸ್ತಿ ಯಮೋ ಮಹಾನ್ ।
ನೈರ್ಋತ್ಯಾಂ ದಿಶಿ ರಾಕ್ಷಸ್ಯಾಂ ರಾಕ್ಷಸೈಃ ಪರಿವಾರಿತಃ ॥೮೩॥
ಖಡ್ಗಧಾರೀ ಸ್ಫುರನ್ನಾಸ್ತೇ ನಿರ್ಋತಿರ್ನಿಜಶಕ್ತಿಯುಕ್ ।

---

ಅಲ್ಲಿ ದೇವೇಂದ್ರನು ಐರಾವತವೆಂಬ ಆನೆಯನ್ನೇರಿ ಕೈಯಲ್ಲಿ ವಜ್ರಾಯುಧವನ್ನು ಹಿಡಿದು ದೇವಸೇನೆಗಳಿಂದ ಕೂಡಿ ಪ್ರಕಾಶಿಸುತ್ತಿರುವನು. ಅಲ್ಲಿ ದೇವಸ್ತ್ರೀಯರ ಗುಂಪಿನಿಂದ ಕೂಡಿ ಶಚೀದೇವಿಯು ಶೋಭಿಸುತ್ತಿರುವಳು. ॥೭೯॥

ಆಗ್ನೇಯಕೋಣದಲ್ಲಿ ಅಗ್ನಿದೇವನ ಪಟ್ಟಣವು ವ್ಯಷ್ಟಿರೂಪನಾದ ಅಗ್ನಿಯ ಪಟ್ಟಣಕ್ಕೆ ಸಮಾನವಾಗಿರುವುದು. ಸ್ವಾಹಾ ಮತ್ತು ಸ್ವಧಾದೇವಿಯರಿಂದ ಕೂಡಿದ ಅಗ್ನಿದೇವನು ತನ್ನ ವಾಹನ ಮತ್ತು ಆಭರಣಗಳಿಂದಲೂ, ತನ್ನ ದೇವಗಣಗಳಿಂದಲೂ ಕೂಡಿ ಪ್ರಕಾಶಿಸುತ್ತಿರುವನು. ॥೮೦-೮೧॥

ದಕ್ಷಿಣದಿಕ್ಕಿನಲ್ಲಿ ಯಮನ ಪಟ್ಟಣವಿರುವುದು. ಅಲ್ಲಿ ಸೂರ್ಯಪುತ್ರನಾದ ದಂಡಾಯುಧವನ್ನು ಧರಿಸಿದ, ಮಹಾತ್ಮನಾದ ಯಮನು ತನ್ನ ಶಕ್ತಿಯಿಂದ ಕೂಡಿದವನಾಗಿ ಚಿತ್ರಗುಪ್ತರೇ ಮೊದಲಾದ ತನ್ನ ಭಟರುಗಳೊಡನೆ ಇರುವನು. ॥೮೨॥

ರಾಕ್ಷಸರ ದಿಕ್ಕಾದ ನೈಋತ್ಯದಲ್ಲಿ ರಾಕ್ಷಸರುಗಳ ಪರಿವಾರದಿಂದ ಕೂಡಿದ ಖಡ್ಗವನ್ನು ಧರಿಸಿದ ನಿರ್ಋತಿಯು ತನ್ನ ಶಕ್ತಿಯಿಂದ ಕೂಡಿ ಪ್ರಕಾಶಿಸುತ್ತಿರುವನು. ॥೮೩॥

ವಾರುಣ್ಯಾಂ ವರುಣೋ ರಾಜಾ ಪಾಶಧಾರೀ ಪ್ರತಾಪವಾನ್ ॥೮೪॥

ಮಹಾಝುಷಸಮಾರೂಢೋ ವಾರುಣೀ ಮಧುವಿಹ್ವಲಃ ।
ನಿಜಶಕ್ತಿಸಮಾಯುಕ್ತೋ ನಿಜಯಾದೋ ಗಣಾನ್ವಿತಃ ॥೮೫॥

ಸಮಾಸ್ತೇ ವಾರುಣೇ ಲೋಕೇ ವರುಣಾನೀರತಾಕುಲಃ ।
ವಾಯುಕೋಣೇ ವಾಯುಲೋಕೇ ವಾಯುಸ್ತತ್ರಾಧಿತಿಷ್ಠತಿ ॥೮೬॥

ವಾಯುಸಾಧನಸಂಸಿದ್ಧ ಯೋಗಿಭಿಃ ಪರಿವಾರಿತಃ ।
ಧ್ವಜಹಸ್ತೋ ವಿಶಾಲಾಕ್ಷೋ ಮೃಗವಾಹನ ಸಂಸ್ಥಿತಃ ॥೮೭॥

ಮರುದ್ಗಣೈಃ ಪರಿವೃತೋ ನಿಜಶಕ್ತಿ ಸಮನ್ವಿತಃ ।
ಉತ್ತರಸ್ಯಾಂ ದಿಶಿ ಮಹಾನ್ಯಕ್ಷಲೋಕೋಽಸ್ತಿ ಭೂಮಿಪ ॥೮೮॥

ಯಕ್ಷಾಧಿರಾಜಸ್ತತ್ರಾಸ್ತೇ ವೃದ್ಧಿಋದ್ಧ್ಯಾದಿ ಶಕ್ತಿಭಿಃ ।
ನವಭಿರ್ನಿಧಿಭಿರ್ಯುಕ್ತಃ ತುಂದಿಲೋ ಧನನಾಯಕಃ ॥೮೯॥

---

ಪಶ್ಚಿಮದಿಕ್ಕಿನಲ್ಲಿ ಪಾಶಾಯುಧವನ್ನು ಧರಿಸಿದ ಪರಾಕ್ರಮಿಯಾದ ವರುಣನು ರಾಜನಾಗಿರುವನು. ಅವನು ದೊಡ್ಡ ಮೀನಿನ ಮೇಲೆ ಕುಳಿತು, ವಾರುಣೀ ಎಂಬ ಮದ್ಯಪಾನದಿಂದ ಮದಿಸಿದವನಾಗಿ, ತನ್ನ ಶಕ್ತಿಯಿಂದಲೂ, ಜಲಜಂತುಗಳಿಂದಲೂ, ಕೂಡಿದವನಾಗಿ ವರುಣಾನೀ ಎಂಬ ತನ್ನ ಪತ್ನಿಯೊಡನೆ ಕ್ರೀಡಿಸುತ್ತ ಆ ವರುಣ ಲೋಕದಲ್ಲಿರುವನು. ॥೮೪-೮೫॥

ವಾಯುವ್ಯದಿಕ್ಕಿನ ಮೂಲೆಯಲ್ಲಿ ಧ್ವಜಾಯುಧವನ್ನು ಕೈಯಲ್ಲಿ ಹಿಡಿದು ಜಿಂಕೆಯ ಮೇಲೆ ಕುಳಿತಿರುವ ವಾಯುದೇವನು ಪ್ರಾಣಾಯಾಮದಿಂದ ವಾಯುವನ್ನು ನಿಗ್ರಹಮಾಡಿದ ಯೋಗಿಗಳಿಂದ ಕೂಡಿದವನಾಗಿ ಆ ವಾಯುಲೋಕದಲ್ಲಿ ನಲವತ್ತೊಂಬತ್ತು ಬಗೆಯ ವಾಯುಗುಣಗಳಿಂದಲೂ ತನ್ನ ಶಕ್ತಿಯಿಂದಲೂ ಕೂಡಿದವನಾಗಿರುವನು. ॥೮೬-೮೭॥

ಜನಮೇಜಯರಾಜನೇ, ಉತ್ತರದಿಕ್ಕಿನಲ್ಲಿ ದೊಡ್ಡದಾದ ಯಕ್ಷಲೋಕವಿರುವುದು. ಅಲ್ಲಿ ಯಕ್ಷಾಧಿಪತಿಯಾದ ಕುಬೇರನು ವೃದ್ಧಿ, ಋದ್ಧಿ ಮುಂತಾದ ಶಕ್ತಿಗಳಿಂದಲೂ, ನವನಿಧಿಗಳಿಂದಲೂ, ಕೂಡಿದವನಾಗಿ ಸ್ಥೂಲಶರೀರಿಯಾಗಿ ಪ್ರಕಾಶಿಸುತ್ತಿರುವನು. ಅವನು ಮಣಿಭದ್ರ, ಪೂರ್ಣಭದ್ರ, ಮಣಿಮಂತ, ಮಣಿಭೂಷ,

ಮಣಿಭದ್ರಃ ಪೂರ್ಣಭದ್ರೋ ಮಣಿಮಾನ್ಮಣಿಕಂಧರಃ ।
ಮಣಿಭೂಷೋ ಮಣಿಸ್ರಗ್ವೀ ಮಣಿಕಾರ್ಮುಕಧಾರಕಃ ॥೯೦॥

ಇತ್ಯಾದಿ ಯಕ್ಷಸೇನಾನೀಸಹಿತೋ ನಿಜಶಕ್ತಿಯುಕ್ ।
ಈಶಾನ ಕೋಣೇ ಸಂಪ್ರೋಕ್ತೋ ರುದ್ರಲೋಕೋ ಮಹತ್ತರಃ ॥೯೧॥

ಅನರ್ಘ್ಯರತ್ನ ಖಚಿತೋ ಯತ್ರ ರುದ್ರೋಽಧಿದೈವತಂ ।
ಮನ್ಯುಮಾನ್ ದೀಪ್ತನಯನೋ ಬದ್ಧಪೃಷ್ಠ ಮಹೇಷುಧಿಃ ॥೯೨॥

ಸ್ಫೂರ್ಜದ್ಧನು ರ್ವಾಮಹಸ್ತೋಽಧಿಜ್ಯ ಧನ್ವಭಿರಾವೃತಃ ।
ಸ್ವಸಮಾನೈರಸಂಖ್ಯಾತರುದ್ರೈಃ ಶೂಲವರಾಯುಧೈಃ ॥೯೩॥

ವಿಕೃತಾಸ್ಯೈಃ ಕರಾಳಾಸ್ಯೈಃ ವಮದ್ವಹ್ನಿಭಿರಾಸ್ಯತಃ ।
ದಶಹಸ್ತೈಃ ಶತಕರೈಃ ಸಹಸ್ರಭುಜಸಂಯುತೈಃ ॥೯೪॥

ದಶಪಾದೈರ್ದಶಗ್ರೀವೈಸ್ತ್ರಿನೇತ್ರೈರುಗ್ರಮೂರ್ತಿಭಿಃ ।
ಅಂತರಿಕ್ಷ ಚರಾ ಯೇ ಚ ಯೇ ಚ ಭೂಮಿ ಚರಾಃ ಸ್ಮೃತಾಃ ॥೯೫॥

---

ಮಣಿಗ್ರೀವ, ಮಣಿಸ್ರಗ್ವೀ, ಮಣಿಕಾರ್ಮುಕಧಾರಕ ಎಂಬ ಹೆಸರಿನ ಸೇನಾಪತಿಗಳಿಂದಲೂ, ತನ್ನ ಸ್ವಾಭಾವಿಕವಾದ ಶಕ್ತಿಯಿಂದಲೂ ಕೂಡಿರುವನು. ॥೮೮-೮೯-೯೦॥

ಈಶಾನ್ಯ ಮೂಲೆಯಲ್ಲಿ ದೊಡ್ಡದಾದ ರುದ್ರಲೋಕವಿರುವುದು. ಅದು ಹೆಚ್ಚಾದ ಬೆಲೆಯುಳ್ಳ ರತ್ನಗಳ ಕೆತ್ತನೆಯ ಕೆಲಸಗಳಿಂದ ಮಾಡಿದುದಾಗಿರುವುದು. ಅಲ್ಲಿಗೆ ಮಹಾಕೋಪವುಳ್ಳವನೂ, ಪ್ರಕಾಶಮಾನವಾದ ಕಣ್ಣುಗಳುಳ್ಳವನೂ ಬೆನ್ನಿಗೆ ದೊಡ್ಡ ಬತ್ತಳಿಕೆಯನ್ನು ಕಟ್ಟಿಕೊಂಡು ಎಡಗೈಯಲ್ಲಿ ಧನುಸ್ಸನ್ನು ಹಿಡಿದು ಹೆದೆ ಏರಿಸಿದ ಬಿಲ್ಲನ್ನು ಹಿಡಿದ ಗಣಗಳಿಂದ ಕೂಡಿದ ರುದ್ರನು ಅಧಿಪತಿಯಾಗಿರುವನು. ॥೯೧-೯೨॥

ಆ ರುದ್ರನು ತನಗೆ ಸಮಾನರಾದ ಅನೇಕ ರುದ್ರರು ಶೂಲಾಯುಧವನ್ನು ಹಿಡಿದುಕೊಂಡು ವಿಕಾರವಾದ ಮತ್ತು ಭಯಂಕರವಾದ ಬಾಯಿಗಳಿಂದ ಉರಿಯನ್ನು ಉಗುಳುತ್ತ ಹತ್ತು, ನೂರು, ಸಾವಿರ ತೋಳುಳ್ಳವರಾಗಿ, ಹತ್ತು ಕಾಲುಗಳು, ಹತ್ತು ಕೈಗಳು, ಹತ್ತು ಕುತ್ತಿಗೆಗಳು, ಮೂರು ಕಣ್ಣುಗಳು ಇವುಗಳಿಂದ ಕ್ರೂರವಾಗಿ ಕಾಣುತ್ತಿರುವ ಆಕಾರದಿಂದ ಕೂಡಿ, ಆಕಾಶದಲ್ಲಿಯೂ, ಭೂಮಿಯಲ್ಲಿಯೂ, ಸಂಚ

ರುದ್ರಾಧ್ಯಾಯೇ ಸ್ಮೃತಾ ರುದ್ರಾಸ್ತೈಃ ಸರ್ವೈಶ್ಚ ಸಮಾವೃತಃ ।
ರುದ್ರಾಣೀ ಕೋಟಿಸಹಿತೋ ಭದ್ರಕಾಲ್ಯಾದಿ ಮಾತೃಭಿಃ ॥೯೬॥

ನಾನಾಶಕ್ತಿ ಸಮಾವಿಷ್ಟ ಡಾಮರ್ಯಾದಿ ಗಣಾವೃತಃ ।
ವೀರಭದ್ರಾದಿಸಹಿತೋ ರುದ್ರೋ ರಾಜನ್ ವಿರಾಜತೇ ॥೯೭॥

ಮುಂಡಮಾಲಾಧರೋ ನಾಗವಲಯೋ ನಾಗಕಂಧರಃ ।
ವ್ಯಾಘ್ರಚರ್ಮಪರೀಧಾನೋ ಗಜಚರ್ಮೋತ್ತರೀಯಕಃ ॥೯೮॥

ಚಿತಾಭಸ್ಮಾಂಗ ಲಿಪ್ತಾಂಗಃ ಪ್ರಮಥಾದಿ ಗಣಾವೃತಃ ।
ನಿನದಡ್ಡಮರುಧ್ವಾನೈರ್ಬಧಿರೀಕೃತ ದಿಙ್ಮುಖಃ ॥೯೯॥

ಅಟ್ಟಹಾಸಾ ಸ್ಫೋಟಶಬ್ದೈಃ ಸಂತ್ರಾಸಿತ ನಭಸ್ಥಲಃ ।
ಭೂತಸಂಘಸಮಾವಿಷ್ಟೋ ಭೂತಾವಾಸೋ ಮಹೇಶ್ವರಃ ॥೧೦೦॥
ಈಶಾನದಿಕ್ಪತಿಃಸೋಽಯಂ ನಾಮ್ನಾ ಚೇಶಾನ ಏವ ಚ ।

---

ರಿಸುತ್ತ ವೇದದಲ್ಲಿ ರುದ್ರಾಧ್ಯಾಯದಲ್ಲಿ ಹೇಳಿರುವ ರುದ್ರಮೂರ್ತಿಗಳಿಂದ ಕೂಡಿದ ವನಾಗಿರುವನು. ॥೯೩-೯೪-೯೫॥

ಜನಮೇಜಯರಾಜನೇ, ರುದ್ರನು ಅನೇಕ ರುದ್ರಾಣಿ ಎಂಬ ಶಕ್ತಿದೇವಿಯ ರಿಂದಲೂ, ಭದ್ರಕಾಲಿಯೇ ಮುಂತಾದ ಮಾತೃಕೆಯರಿಂದಲೂ, ಬಗೆಬಗೆಯ ಶಕ್ತಿಗಳಿಂದ ಕೂಡಿದ ಡಾಮರೀ ಮುಂತಾದ ಗಣಗಳಿಂದಲೂ, ವೀರಭದ್ರನೇ ಮೊದಲಾದ ವೀರರಿಂದಲೂ ಕೂಡಿ ಪ್ರಕಾಶಿಸುತ್ತಿರುವನು. ॥೯೬-೯೭॥

ಆ ರುದ್ರನು ತಲೆಯ ಬುರುಡೆಗಳನ್ನು ಹಾರವಾಗಿ ಧರಿಸಿರುವನು. ಹಾವು ಗಳನ್ನೇ ಕೈಗಳಿಗೂ, ಕುತ್ತಿಗೆಗೂ ಸುತ್ತಿಕೊಂಡಿರುವನು. ಹುಲಿಯ ಚರ್ಮವನ್ನುಟ್ಟು, ಆನೆಯ ಚರ್ಮವನ್ನು ಹೊದೆದಿರುವನು. ಚಿತೆಯ ಬೂದಿಯನ್ನು ಮೈಗೆಲ್ಲಕ್ಕೂ ಬಳಿದು ಕೊಂಡಿರುವನು. ಪ್ರಮಥಾದಿಗಣಗಳು ಅವನ ಸುತ್ತಲೂ ಸುತ್ತಿಕೊಂಡಿರುವುವು. ಕೈಯಲ್ಲಿರುವ ಡಮರುಗವನ್ನು (ಬುಡುಬುಡುಕೆ) ಬಾರಿಸುವುದರಿಂದ ದಿಕ್ಕುಗಳೆಲ್ಲ ಕಿವುಡಾದಂತೆ ಇರುವುದು. ॥೯೮-೯೯॥

ಗಟ್ಟಿಯಾಗಿ ನಕ್ಕು ಚಪ್ಪಾಳೆ ತಟ್ಟುವುದರಿಂದ ಆಕಾಶದಲ್ಲಿರುವವರನ್ನೆಲ್ಲರನ್ನೂ ಹೆದರಿಸುತ್ತ, ಅನೇಕ ಭೂತಗಳಿಂದ ಕೂಡಿ, ಈಶಾನನೆಂಬ ಹೆಸರಿನಿಂದ ಈಶಾನ್ಯ

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ**
**ದಶಮೋಽಧ್ಯಾಯಃ**

---

ದಿಕ್ಕಿಗೆ ಅಧಿಪತಿಯಾಗಿರುವನು. ಆ ದಿಕ್ಪತಿಯಾದ ಇವನು ಬ್ರಹ್ಮನ ಹಣೆಯಲ್ಲಿ ಹುಟ್ಟಿದ ರುದ್ರನು. ತ್ರಿಮೂರ್ತಿಗಳೊಳಗಿನ ಕಾರಣಭೂತ ರುದ್ರನಲ್ಲಿ ಅವನು ಸರ್ವೇಶ್ವರನಾಗಿ ಕೈಲಾಸವಾಸಿಯಾಗಿರುವನು. ||೧೦೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

### || ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಪುಷ್ಕರಾಗಮಯಾದಗ್ರೇ ಕುಂಕುಮಾರುಣವಿಗ್ರಹಃ ।**
**ಪದ್ಮರಾಗಮಯಃ ಸಾಲೋ ಮಧ್ಯೇ ಭೂಶ್ಚೈವ ತಾದೃಶೀ ॥೧॥**

**ದಶಯೋಜನವಾನ್ ದೈರ್ಘ್ಯೇ ಗೋಪುರದ್ವಾರಸಂಯುತಃ ।**
**ತನ್ಮಣಿಸ್ತಂಭಸಂಯುಕ್ತಾ ಮಂಡಪಾಃ ಶತಶೋ ನೃಪ ॥೨॥**

---

ವ್ಯಾಸರು ಹೇಳಿದರು---ಈ ಅಧ್ಯಾಯದಲ್ಲಿ ನೂರಹತ್ತು ಶ್ಲೋಕಗಳಿಂದ ದೇವಿಯ ಚಿಂತಾಮಣಿ ಗೃಹದ ಸಮೀಪದಲ್ಲಿರುವ ಪದ್ಮರಾಗವೇ ಮುಂತಾದ ಮಣಿಗಳಿಂದ ರಚಿತವಾದ ಪ್ರಾಕಾರಗಳನ್ನು ವರ್ಣನೆಮಾಡುವರು. ಹತ್ತನೆಯದಾದ ಪುಷ್ಯರಾಗ ಪ್ರಾಕಾರದಿಂದ ಮುಂದಿನ ಕುಂಕುಮದಂತೆ ಕೆಂಪಾದ ಬಣ್ಣದಿಂದ ಕೂಡಿದ ಪದ್ಮರಾಗವೆಂಬ ರತ್ನದ ಪ್ರಾಕಾರವೂ, ಆ ಎರಡು ಪ್ರಾಕಾರಗಳ ನಡುವೆ ಅದೇ ರತ್ನದ ಭೂಮಿಯೂ ಇರುವುದು. ||೧||

ಜನಮೇಜಯರಾಜನೇ, ಆ ಪದ್ಮರಾಗಮಣಿಯ ಪ್ರಾಕಾರವು ಎತ್ತರದಲ್ಲಿ ಹತ್ತು ಗಾವುದ ವುಳ್ಳದಾಗಿಯೂ, ಅನೇಕ ಗೋಪುರಗಳ ಬಾಗಿಲುಗಳಿಂದಲೂ ರತ್ನಗಳ ಕಂಭಗಳಿಂದಲೂ ನೂರಾರು ಮಂಟಪಗಳಿಂದಲೂ ಕೂಡಿದುದಾಗಿರುವುದು. ||೨||

ಮಧ್ಯೇ ಭುವಿ ಸಮಾಸೀನಾಶ್ಚತುಃ ಷಷ್ಟಿಮಿತಾಃ ಕಲಾಃ ।
ನಾನಾಯುಧಧರಾ ವೀರಾ ರತ್ನಭೂಷಣಭೂಷಿತಾಃ ॥೩॥

ಪ್ರತ್ಯೇಕ ಲೋಕಸ್ತಾಸಾಂ ತು ತತ್ತಲ್ಲೋಕಸ್ಯ ನಾಯಕಾಃ ।
ಸಮಂತಾತ್ಪದ್ಮರಾಗಸ್ಯ ಪರಿವಾರ್ಯ ಸ್ಥಿತಾಃ ಸದಾ ॥೪॥

ಸ್ವಸ್ವಲೋಕಜನೈರ್ಜುಷ್ಟಾಃ ಸ್ವಸ್ವವಾಹನಹೇತಿಭಿಃ ।
ತಾಸಾಂ ನಾಮಾನಿ ವಕ್ಷ್ಯಾಮಿ ಶೃಣು ತ್ವಂ ಜನಮೇಜಯ ॥೫॥

ಪಿಂಗಲಾಕ್ಷೀ ವಿಶಾಲಾಕ್ಷೀ ಸಮೃದ್ಧಿರ್ವೃದ್ಧಿರೇವ ಚ ।
ಶ್ರದ್ಧಾ ಸ್ವಾಹಾ ಸ್ವಧಾಭಿಖ್ಯಾ ಮಾಯಾ ಸಂಜ್ಞಾ ವಸುಂಧರಾ ॥೬॥

ತ್ರಿಲೋಕಧಾತ್ರೀ ಸಾವಿತ್ರೀ ಗಾಯತ್ರೀ ತ್ರಿದಶೇಶ್ವರೀ ।
ಸುರೂಪಾ ಬಹುರೂಪಾ ಚ ಸ್ಕಂದಮಾತಾಽಚ್ಯುತಪ್ರಿಯಾ ॥೭॥

---

ಈ ಪ್ರದೇಶದಲ್ಲಿ ಪ್ರಪಂಚಸಾರವೇ ಮುಂತಾದ ತಂತ್ರಶಾಸ್ತ್ರಗಳಲ್ಲಿ ಹೇಳಿರುವಂತೆ ಆ ಭುವನೇಶ್ವರೀ ಯಂತ್ರದಲ್ಲಿ ಹೇಳಿರುವ ಮೇರೆಗೆ ಬಗೆಬಗೆಯ ಆಯುಧಗಳನ್ನು ಧರಿಸಿ ಶೂರರಾದ, ರತ್ನಾಭರಣಗಳನ್ನು ಧರಿಸಿದ ಅರವತ್ತುನಾಲ್ಕು ಶಕ್ತಿದೇವಿಯರು ಇರುವರು. ॥೩॥

ಮಧ್ಯದಲ್ಲಿರುವ ಚಿಂತಾಮಣಿ ಗೃಹದ ಸುತ್ತಲೂ ಹತ್ತು ದಿಕ್ಪಾಲಕರ ಲೋಕಗಳಿರುವಂತೆ ಅದೇ ಚಿಂತಾಮಣಿ ಗೃಹದ ಸುತ್ತಲೂ ಪದ್ಮರಾಗ ಪ್ರಾಕಾರವನ್ನಾಶ್ರಯಿಸಿ ಬೇರೆ ಬೇರೆಯಾಗಿ ಅರವತ್ತುನಾಲ್ಕು ಶಕ್ತಿದೇವಿಯರ ಲೋಕಗಳು ಇವೆ. ಆ ದೇವಿಯರ ವಾಹನಗಳು, ಆಯುಧಗಳು, ಆ ಲೋಕವಾಸಿಗಳು ಇವರುಗಳಿಂದ ಕೂಡಿರುವುವು. ಎಲೈ ಜನಮೇಜಯನೇ, ಆ ದೇವಿಯರ ಹೆಸರುಗಳನ್ನು ಹೇಳುವೆನು ಕೇಳು. ॥೪-೫॥

೧ ಪಿಂಗಳಾಕ್ಷೀ ೨ ವಿಶಾಲಾಕ್ಷೀ ೩ ಸಮೃದ್ಧಿ ೪ ವೃದ್ಧಿ ೫ ಶ್ರದ್ಧಾ ೬ ಸ್ವಾಹಾ ೭ ಸ್ವಧಾ ೮ ಮಾಯಾ ೯ ಸಂಜ್ಞಾ ೧೦ ವಸುಂಧರಾ ೧೧ ತ್ರಿಲೋಕಧಾತ್ರೀ ೧೨ ಸಾವಿತ್ರೀ ೧೩ ಗಾಯತ್ರೀ ೧೪ ತ್ರಿದಶೇಶ್ವರೀ ೧೫ ಸುರೂಪಾ ೧೬ ಬಹುರೂಪಾ ೧೭ ಸ್ಕಂದಮಾತಾ ೧೮ ಅಚ್ಯುತಪ್ರಿಯಾ ೧೯ ವಿಮಲಾ

ವಿಮಲಾ ಚಾಮಲಾ ತದ್ವದರುಣೀ ಪುನರಾರುಣೀ ।
ಪ್ರಕೃತಿರ್ವಿಕೃತಿಃ ಸೃಷ್ಟಿಃ ಸ್ಥಿತಿಃ ಸಂಹೃತಿರೇವ ಚ ॥೮॥

ಸಂಧ್ಯಾ ಮಾತಾ ಸತೀ ಹಂಸೀ ಮರ್ದಿಕಾ ವಜ್ರಿಕಾ ಪರಾ ।
ದೇವಮಾತಾ ಭಗವತೀ ದೇವಕೀ ಕಮಲಾಸನಾ ॥೯॥

ತ್ರಿಮುಖೀ ಸಪ್ತಮುಖ್ಯನ್ಯಾಸುರಾಸುರವಿಮರ್ದಿನೀ ।
ಲಂಬೋಷ್ಠೀ ಚೋರ್ಧ್ವಕೇಶೀ ಚ ಬಹುಶೀರ್ಷಾ ವೃಕೋದರೀ ॥೧೦॥

ರಥರೇಖಾಹ್ವಯಾ ಪಶ್ಚಾಚ್ಛಶಿರೇಖಾ ತಥಾಪರಾ ।
ಗಗನವೇಗಾ ಪವನವೇಗಾ ಚೈವ ತತಃ ಪರಂ ॥೧೧॥

ಅಗ್ರೇ ಭುವನಪಾಲಾ ಸ್ಯಾತ್ತತ್ಪಶ್ಚಾನ್ಮದನಾತುರಾ ।
ಅನಂಗಾನಂಗ ಮಥನಾ ತಥೈವಾನಂಗಮೇಖಲಾ ॥೧೨॥

ಅನಂಗಕುಸುಮಾ ಪಶ್ಚಾದ್ವಿಶ್ವರೂಪಾ ಸುರಾಧಿಕಾ ।
ಕ್ಷಯಂ ಕರೀ ಭವೇಚ್ಛಕ್ತಿ ರಕ್ಷೋಭ್ಯಾ ಚ ತತಃ ಪರಂ ॥೧೩॥

ಸತ್ಯವಾದಿನ್ಯಥಪ್ರೋಕ್ತಾ ಬಹುರೂಪಾ ಶುಚಿವ್ರತಾ ।
ಉದಾರಾಖ್ಯಾ ಚ ವಾಗೀಶೀ ಚತುಷ್ಷಷ್ಟಿಮಿತಾಃ ಸ್ಮೃತಾಃ ॥೧೪॥

---

೨೦ ಅಮಲಾ ೨೧ ಅರುಣೀ ೨೨ ಆರುಣೀ ೨೩ ಪ್ರಕೃತಿ ೨೪ ವಿಕೃತಿ ೨೫ ಸೃಷ್ಟಿ ೨೬ ಸ್ಥಿತಿ ೨೭ ಸಂಹೃತಿ ೨೮ ಸಂಧ್ಯಾ ೨೯ ಮಾತಾ ೩೦ ಸತೀ ೩೧ ಹಂಸೀ ೩೨ ಮರ್ದಿಕಾ ೩೩ ವಜ್ರಿಕಾ ೩೪ ಪರಾ ೩೫ ದೇವಮಾತಾ ೩೬ ಭಗವತೀ ೩೭ ದೇವಕೀ ೩೮ ಕಮಲಾಸನಾ ೩೯ ತ್ರಿಮುಖೀ ೪೦ ಸಪ್ತಮುಖೀ ೪೧ ಸುರಾಸುರವಿಮರ್ದಿನೀ ೪೨ ಲಂಬೋಷ್ಠೀ ೪೩ ಊರ್ಧ್ವಕೇಶೀ ೪೪ ಬಹುಶೀರ್ಷಾ ೪೫ ವೃಕೋದರೀ ೪೬ ರಥರೇಖಾ ೪೭ ಶಶಿರೇಖಾ ೪೮ ಗಗನವೇಗಾ ೪೯ ಪವನವೇಗಾ ೫೦ ಭುವನಪಾಲಾ ೫೧ ಮದನಾತುರಾ ೫೨ ಅನಂಗಾ ೫೩ ಅನಂಗಮಥನಾ ೫೪ ಅನಂಗಮೇಖಲಾ ೫೫ ಅನಂಗಕುಸುಮಾ ೫೬ ವಿಶ್ವರೂಪಾ ೫೭ ಸುರಾದಿಕಾ ೫೮ ಕ್ಷಯಂಕರೀ ೫೯ ಅಕ್ಷೋಭ್ಯಾ ೬೦ ಸತ್ಯವಾದಿನೀ ೬೧ ಬಹುರೂಪಾ ೬೨ ಶುಚಿವ್ರತಾ ೬೩ ಉದಾರಾ ೬೪ ವಾಗೀಶೀ ಇವರೇ ಅರವತ್ತುನಾಲ್ಕು ಶಕ್ತಿದೇವಿಯರು. ||೬-೭-೮-೯-೧೦-೧೧-೧೨-೧೩-೧೪||

ಜ್ವಲಜ್ಜಿಹ್ವಾನನಾಃ ಸರ್ವಾ ವಮಂತ್ಯೋ ವಹ್ನಿಮುಲ್ಬಣಂ ।
ಜಲಂ ಪಿಬಾಮಃ ಸಕಲಂ ಸಂಹರಾಮೋ ವಿಭಾವಸುಂ ॥೧೫॥

ಪವನಂ ಸ್ತಂಭಯಾಮೋಽದ್ಯ ಭಕ್ಷಯಾಮೋಽಖಿಲಂ ಜಗತ್ ।
ಇತಿ ವಾಚಂ ಸಂಗಿರಂತೋ ಕ್ರೋಧಸಂರಕ್ತಲೋಚನಾಃ ॥೧೬॥

ಚಾಪಬಾಣಧರಾಃ ಸರ್ವಾಃ ಯುದ್ಧಾಯೈವೋತ್ಸುಕಾಃ ಸದಾ ।
ದಂಷ್ಟ್ರಾ ಕಟಕಟಾರಾವೈರ್ಬಧಿರೀಕೃತದಿಙ್ಮುಖಾಃ ॥೧೭॥

ಪಿಂಗೋರ್ಧ್ವಕೇಶ್ಯಃ ಸಂಪ್ರೋಕ್ತಾಶ್ಚಾಪಬಾಣಧರಾಃ ಸದಾ ।
ಶತಾಕ್ಷೌಹಿಣಿಕಾ ಸೇನಾಽಪ್ಯೇಕೈಕಸ್ಯಾಃ ಪ್ರಕೀರ್ತಿತಾ ॥೧೮॥

ಏಕೈಕಶಕ್ತೇಃ ಸಾಮರ್ಥ್ಯಂ ಲಕ್ಷಬ್ರಹ್ಮಾಂಡನಾಶನೇ ।
ಶತಾಕ್ಷೌಹಿಣಿಕಾ ಸೇನಾ ತಾದೃಶೀ ನೃಪಸತ್ತಮ ॥೧೯॥

ಕಿಂ ನ ಕುರ್ಯಾಜ್ಜಗತ್ಯಸ್ಮಿನ್ನಶಕ್ಯಂ ವಕ್ತುಮೇವ ತತ್ ।
ಸರ್ವಾಽಪಿ ಯುದ್ಧಸಾಮಗ್ರೀ ತಸ್ಮಿನ್ಸಾಲೇ ಸ್ಥಿತಾ ಮುನೇ ॥೨೦॥

---

ಈ ಅರವತ್ತುನಾಲ್ಕು ಶಕ್ತಿದೇವಿಯರೂ ಉರಿಯುತ್ತಿರುವ ನಾಲಿಗೆ ಮತ್ತು ಬಾಯಿಯುಳ್ಳವರಾಗಿ ವಿಶೇಷವಾದ ಬೆಂಕಿಯ ಕೆಂಡಗಳನ್ನು ಕಾರುತ್ತ, ಸಮಸ್ತ ನೀರನ್ನೂ ಕುಡಿಯೋಣವೋ, ಸೂರ್ಯನನ್ನು ಸಂಹಾರಮಾಡೋಣವೋ, ವಾಯುವನ್ನು ತಡೆದು ಚಲಿಸದಂತೆ ನಿಲ್ಲಿಸೋಣವೋ, ಸಮಸ್ತ ಜಗತ್ತನ್ನೂ ತಿಂದುಬಿಡೋಣವೋ, ಎಂದು ಹೇಳುತ್ತ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡಿರುವರು. ॥೧೫-೧೬॥

ಎಲ್ಲರೂ ಬಿಲ್ಲು ಬಾಣಗಳನ್ನು ಹಿಡಿದು ಯಾವಾಗಲೂ ಯುದ್ಧಾಸಕ್ತರಾಗಿರುವರು. ಅವರು ಹಲ್ಲುಗಳನ್ನು ಕಡಿವುದರಿಂದ ದಿಕ್ಕುಗಳೆಲ್ಲ ಕಿವುಡಾಗುತ್ತಿರುವುದು. ಅವರ ತಲೆಯ ಕೂದಲುಗಳು ಪಿಂಗಳವರ್ಣವಾಗಿ ಮೇಲಕ್ಕೆ ಎದ್ದು ನಿಂತಿರುವುವು. ಒಬ್ಬೊಬ್ಬರಿಗೂ ನೂರು ಅಕ್ಷೌಹಿಣೀ ಸೇನೆಯು ಇರುವುದು. ॥೧೭-೧೮॥

ಎಲೈ ರಾಜಶ್ರೇಷ್ಠನೇ, ಕೇಳು. ಒಬ್ಬೊಬ್ಬ ಶಕ್ತಿದೇವಿಗೂ ಒಂದು ಲಕ್ಷ ಬ್ರಹ್ಮಾಂಡಗಳನ್ನು ನಾಶಮಾಡುವ ಸಾಮರ್ಥ್ಯವಿರುವುದು. ಅವರ ಸೇನೆಗೂ ಅಷ್ಟೇ ಶಕ್ತಿಯಿರುವುದು. ಈ ಪ್ರಪಂಚದಲ್ಲಿ ಅವರು ಇನ್ನಾವ ಕೆಲಸವನ್ನು ಮಾಡಲಾರರು?

ರಥಾನಾಂ ಗಣನಾ ನಾಸ್ತಿ ಹಯಾನಾಂ ಕರಿಣಾಂ ತಥಾ ।
ಶಸ್ತ್ರಾಣಾಂ ಗಣನಾ ತದ್ವದ್ಗಣಾನಾಂ ಗಣನಾ ತಥಾ ॥೨೧॥

ಪದ್ಮರಾಗ ಮಯಾದಗ್ರೇ ಗೋಮೇಧಮಣಿನಿರ್ಮಿತಃ ।
ದಶಯೋಜನದೈರ್ಘ್ಯೇಣ ಪ್ರಾಕಾರೋ ವರ್ತತೇ ಮಹಾನ್ ॥೨೨॥

ಭಾಸ್ವಜ್ಜಪಾಪ್ರಸೂನಾಭೋ ಮಧ್ಯಭೂಸ್ತಸ್ಯ ತಾದೃಶೀ ।
ಗೋಮೇದಕಲ್ಪಿತಾನ್ಯೇವ ತದ್ವಾಸಿ ಸದನಾನಿ ಚ ॥೨೩॥

ಪಕ್ಷಿಣಃ ಸ್ತಂಭವರ್ಯಾಶ್ಚ ವೃಕ್ಷಾ ವಾಪ್ಯಃ ಸರಾಂಸಿ ಚ ।
ಗೋಮೇದಕಲ್ಪಿತಾ ಏವ ಕುಂಕುಮಾರುಣವಿಗ್ರಹಾಃ ॥೨೪॥

ತನ್ಮಧ್ಯಸ್ಥಾ ಮಹಾದೇವ್ಯೋ ದ್ವಾತ್ರಿಂಶಚ್ಛಕ್ತಯಃ ಸ್ಮೃತಾಃ ।
ನಾನಾ ಶಸ್ತ್ರಪ್ರಹರಣಾ ಗೋಮೇದಮಣಿಭೂಷಿತಾಃ ॥೨೫॥

---

ಅವರ ಪರಾಕ್ರಮವನ್ನು ವರ್ಣಿಸಲು ಅಸಾಧ್ಯವು. ಆ ಭಗವತಿಯ ಸೇನಾಸ್ಥಾನದಲ್ಲಿ ಸಕಲ ಯುದ್ಧ ಸಾಮಗ್ರಿಗಳೂ ಸಿದ್ಧವಾಗಿರುವುವು. ||೧೯-೨೦||

ಅಲ್ಲಿ ರಥಗಳೂ, ಕುದುರೆಗಳೂ, ಆನೆಗಳೂ, ಆಯುಧಗಳೂ, ಯುದ್ಧ ವೀರರೂ ಲೆಕ್ಕವಿಲ್ಲದಷ್ಟು ಇರುವರು. ||೨೧||

ಪದ್ಮರಾಗಮಣಿಯ ಪ್ರಾಕಾರದಿಂದ ಮುಂದೆ ಹತ್ತು ಗಾವುದ ವಿಸ್ತಾರವಾದ ಗೋಮೇದರತ್ನದ ಪ್ರಾಕಾರವು ಪ್ರಕಾಶಮಾನವಾದ ದಾಸವಾಳದ ಹೂವಿನ ಕಾಂತಿಯಂತೆ ಹೊಳೆಯುತ್ತಿರುವುದು. ಆ ಎರಡು ಪ್ರಾಕಾರಗಳ ನಡುವೆ ಇರುವ ನೆಲವು ಹಾಗೆಯೇ ದಾಸವಾಳದ ಹೂ ಕಾಂತಿಯಂತೆ ಪ್ರಕಾಶಿಸುತ್ತಲಿರುವುದು. ಅಲ್ಲಿರುವ ಮನೆಗಳೆಲ್ಲ ಗೋಮೇದರತ್ನಗಳಿಂದಲೇ ಮಾಡಿದುವು. ||೨೨-೨೩||

ಅಲ್ಲಿ ಪಕ್ಷಿಗಳು, ಕಂಭಗಳು, ಮರಗಳು, ಬಾವಿಗಳು, ಸರೋವರಗಳು ಇವೆಲ್ಲವೂ ಕುಂಕುಮದಂತೆ ಕೆಂಪು ಬಣ್ಣದಿಂದ ಕೂಡಿ ಗೋಮೇದರತ್ನಗಳಿಂದ ಮಾಡಿದುದಾಗಿರುವುವು. ಆ ಪ್ರಾಕಾರಗಳ ನಡುವೆ ಗೋಮೇದರತ್ನವನ್ನು ಅಲಂಕರಿಸಿಕೊಂಡು ಬಗೆಬಗೆಯ ಆಯುಧಗಳನ್ನು ಧರಿಸಿದ ಮೂವತ್ತೆರಡು ಶಕ್ತಿದೇವಿಯರಿರುವರು. ||೨೪-೨೫||

ಪ್ರತ್ಯೇಕಲೋಕವಾಸಿನ್ಯಃ ಪರಿವಾರ್ಯ ಸಮಂತತಃ ।
ಗೋಮೇದಸಾಲೇ ಸನ್ನದ್ಧಾಃ ಪಿಶಾಚವದನಾ ನೃಪ ॥೨೬॥

ಸ್ವಲೋಕವಾಸಿಭಿರ್ನಿತ್ಯಂ ಪೂಜಿತಾಶ್ಚಕ್ರಬಾಹವಃ ।
ಕ್ರೋಧರಕ್ತೇಕ್ಷಣಾ ಭಿಂಧಿ ಪಚ ಚ್ಛಿಂಧಿ ದಹೇತಿ ಚ ॥೨೭॥

ವದಂತಿ ಸತತಂ ವಾಚಂ ಯುದ್ಧೋತ್ಸುಕ ಹೃದಂತರಾಃ ।
ಏಕೈಕಸ್ಯಾ ಮಹಾಶಕ್ತೇರ್ದಶಾಕ್ಷೌಹಿಣಿಕಾ ಮತಾ ॥೨೮॥

ಸೇನಾ ತತ್ರಾಪ್ಯೇಕ ಶಕ್ತಿರ್ಲಕ್ಷಬ್ರಹ್ಮಾಂಡ ನಾಶಿನೀ ।
ತಾದೃಶೀನಾಂ ಮಹಾಸೇನಾ ವರ್ಣನೀಯಾ ಕಥಂ ನೃಪ ॥೨೯॥

ರಥಾನಾಂ ನೈವ ಗಣನಾ ವಾಹನಾನಾಂ ತಥೈವ ಚ ।
ಸರ್ವಯುದ್ಧಸಮಾರಂಭಸ್ತತ್ರ ದೇವ್ಯಾ ವಿರಾಜತೇ ॥೩೦॥

---

ಆ ಗೋಮೇದ ಪ್ರಾಕಾರದಲ್ಲಿ ಸುತ್ತಲೂ ಮೂವತ್ತೆರಡು ಶಕ್ತಿದೇವಿಯರಿಗೂ ಬೇರೆ ಬೇರೆ ಲೋಕಗಳಿರುವುವು. ಆ ದೇವಿಯರು ಭಯಂಕರವಾದ ಮುಖವುಳ್ಳವರಾಗಿ ಚಕ್ರಾಯುಧವನ್ನು ತೋಳಿನಲ್ಲಿ ಧರಿಸಿ, ತಮ್ಮ ಲೋಕವಾಸಿಗಳಿಂದ ಪೂಜೆಯನ್ನು ಪಡೆಯುತ್ತ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಯಾವಾಗಲೂ ಶೀಳು, ಕಡಿ, ಬೇಯಿಸು, ಸುಡು ಎಂಬ ಮಾತುಗಳನ್ನಾಡುತ್ತ ಯುದ್ಧದಲ್ಲಿ ಪ್ರೀತಿಯುಳ್ಳವರಾಗಿರುವರು. ||೨೬-೨೭||

ಒಬ್ಬೊಬ್ಬ ಶಕ್ತಿದೇವಿಯರಿಗೂ ಹತ್ತು ಅಕ್ಷೋಹಿಣೀ ಸೇನೆ ಇರುವುದು. ಒಬ್ಬ ಶಕ್ತಿದೇವಿಗೆ ಲಕ್ಷ ಬ್ರಹ್ಮಾಂಡಗಳನ್ನು ನಾಶಮಾಡುವ ಶಕ್ತಿಯಿರುವುದು. ಎಲೈ ರಾಜನೇ, ಅವರ ಮಹಾ ಸೇನೆಯನ್ನು ವರ್ಣಿಸಲಸಾಧ್ಯವಾಗಿರುವುದು. ರಥಗಳು, ವಾಹನಗಳು ಇವುಗಳು ಲೆಕ್ಕವಿಲ್ಲದಷ್ಟಿರುವುವು. ಭುವನೇಶ್ವರೀ ದೇವಿಯ ಸಮಸ್ತ ಯುದ್ಧ ಸಾಮಗ್ರಿಗಳೂ ಇಲ್ಲಿ ಪ್ರಕಾಶಿಸುತ್ತಿರುವುವು. ಈ ಸೇನೆಯು ಜಗದಂಬೆಗೆ ಅಂತರಂಗಸೇನೆಯಾಗಿರುವುದು. ||೨೮-೨೯-೩೦||

ತಾಸಾಂ ನಾಮಾನಿ ವಕ್ಷ್ಯಾಮಿ ಪಾಪನಾಶಕರಾಣಿ ಚ ।
ವಿದ್ಯಾ ಹ್ರೀ ಪುಷ್ಟಯಃ ಪ್ರಜ್ಞಾ ಸಿನೀವಾಲೀ ಕುಹೂಸ್ತಥಾ ॥೩೧॥

ರುದ್ರಾ ವೀರ್ಯಾಪ್ರಭಾ ನಂದಾ ಪೋಷಿಣೀ ಋದ್ಧಿದಾ ಶುಭಾ ।
ಕಾಲರಾತ್ರಿರ್ಮಹಾರಾತ್ರಿರ್ಭದ್ರಕಾಲೀ ಕಪರ್ದಿನೀ ॥೩೨॥

ವಿಕೃತಿರ್ದಂಡಿ ಮುಂಡಿನ್ಯೌ ಸೇಂದು ಖಂಡಾ ಶಿಖಂಡಿನೀ ।
ನಿಶುಂಭ ಶುಂಭಮಥಿನೀ ಮಹಿಷಾಸುರ ಮರ್ದಿನೀ ॥೩೩॥

ಇಂದ್ರಾಣೀ ಚೈವ ರುದ್ರಾಣೀ ಶಂಕರಾರ್ಧಶರೀರಿಣೀ ।
ನಾರೀ ನಾರಾಯಣೀ ಚೈವ ತ್ರಿಶೂಲಿನ್ಯಪಿ ಪಾಲಿನೀ ॥೩೪॥

ಅಂಬಿಕಾ ಹ್ಲಾದಿನೀ ಪಶ್ಚಾದಿತ್ಯೇವಂ ಶಕ್ತಯಃ ಸ್ಮೃತಾಃ ।
ಯದ್ಯೇತಾಃ ಕುಪಿತಾ ದೇವ್ಯಸ್ತದಾ ಬ್ರಹ್ಮಾಂಡನಾಶನಂ ॥೩೫॥

ಪರಾಜಯೋ ನ ಚೈತಾಸಾಂ ಕದಾಚಿತ್ಕ್ವಚಿದಸ್ತಿ ಹಿ ।
ಗೋಮೇದಿಕಮಯಾದಗ್ರೇ ಸದ್ವಜ್ರಮಣಿ ನಿರ್ಮಿತಃ ॥೩೬॥
ದಶಯೋಜನ ತುಂಗೋಽಸೌ ಗೋಪುರದ್ವಾರಸಂಯುತಃ ।

---

ಪಾಪನಾಶಕರವಾದ ಆ ಮೂವತ್ತೆರಡು ಶಕ್ತಿದೇವಿಯರ ಹೆಸರನ್ನು ಹೇಳು ವೆನು ಕೇಳು. ೧ ವಿದ್ಯಾ, ೨ ಹ್ರೀ, ೩ ಪುಷ್ಟಿ, ೪ ಪ್ರಜ್ಞಾ, ೫ ಸಿನೀವಾಲೀ, ೬ ಕುಹೂ, ೭ ರುದ್ರಾ, ೮ ವೀರ್ಯಾ, ೯ ಪ್ರಭಾ, ೧೦ ನಂದಾ, ೧೧ ಪೋಷಿಣೀ, ೧೨ ಋದ್ಧಿದಾ, ೧೩ ಶುಭಾ, ೧೪ ಕಾಳರಾತ್ರಿ, ೧೫ ಮಹಾರಾತ್ರಿ, ೧೬ ಭದ್ರ ಕಾಲೀ, ೧೭ ಕಪರ್ದಿನೀ, ೧೮ ವಿಕೃತಿ, ೧೯ ದಂಡಿ, ೨೦ ಮುಂಡಿನೀ, ೨೧ ಸೇಂದುಖಂಡಾ, ೨೨ ಶಿಖಂಡಿನೀ, ೨೩ ನಿಶುಂಭ ಶುಂಭಮಥನೀ, ೨೪ ಮಹಿಷಾ ಸುರ ಮರ್ದಿನೀ, ೨೫ ಇಂದ್ರಾಣೀ, ೨೬ ರುದ್ರಾಣೀ, ೨೭ ಶಂಕರಾರ್ಧಶರೀರಿಣೀ, ೨೮ ನಾರಾಯಣೀ, ೨೯ ತ್ರಿಶೂಲಿನೀ, ೩೦ ಪಾಲಿನೀ, ೩೧ ಅಂಬಿಕಾ, ೩೨ ಹ್ಲಾದಿನೀ, ಇವರೇ ಆ ಶಕ್ತಿದೇವಿಯರು. ॥೩೧-೩೨-೩೩-೩೪॥

ಈ ದೇವಿಯರು ಕೋಪಗೊಂಡಾಗ ಬ್ರಹ್ಮಾಂಡವು ನಾಶವಾಗುವುದು. ಇವರಿಗೆ ಯಾವಾಗಲೂ, ಎಲ್ಲಿಯೂ ಅಪಜಯವೆಂಬುದಿಲ್ಲ. ॥೩೫॥

ಗೋಮೇದರತ್ನ ಪ್ರಾಕಾರದಿಂದ ಒಳಗೆ ಹತ್ತುಗಾವುದ ವಿಸ್ತಾರದಲ್ಲಿ ಒಳ್ಳೆಯ ವಜ್ರದಿಂದ ಮಾಡಿದ ಪ್ರಾಕಾರವಿರುವುದು. ಆ ಪ್ರಾಕಾರದಲ್ಲಿ ಗೋಪುರಗಳು, ಬಾಗಿಲು

ಕಪಾಟಶೃಂಖಲಾಬದ್ಧೋ ನವವೃಕ್ಷಸಮುಜ್ಜ್ವಲಃ ॥೩೭॥

ಸಾಲಸ್ತನ್ಮಧ್ಯ ಭೂಮ್ಯಾದಿ ಸರ್ವಂ ಹೀರಮಯಂ ಸ್ಮೃತಂ ।
ಗೃಹಾಣಿ ವೀಥಯೋ ರಥ್ಯಾ ಮಹಾಮಾರ್ಗಾಂಗಣಾನಿ ಚ ॥೩೮॥

ವೃಕ್ಷಾಲವಾಲತರವಃ ಸಾರಂಗಾ ಅಪಿ ತಾದೃಶಾಃ ।
ದೀರ್ಘಿಕಾಶ್ರೇಣಯೋ ವಾಪ್ಯಸ್ತಡಾಗಾಃ ಕೂಪಸಂಯುತಾಃ ॥೩೯॥

ತತ್ರ ಶ್ರೀಭುವನೇಶ್ವರ್ಯಾ ವಸಂತಿ ಪರಿಚಾರಿಕಾಃ ।
ಏಕೈಕಾ ಲಕ್ಷದಾಸೀಭಿಃ ಸೇವಿತಾ ಮದಗರ್ವಿತಾ ॥೪೦॥

ತಾಲವೃಂತಧರಾಃ ಕಾಶ್ಚಿಚ್ಚ ಷಕಾಢ್ಯಕರಾಂಬುಜಾಃ ।
ಕಾಶ್ಚಿತ್ತಾಂಬೂಲಪಾತ್ರಾಣಿ ಧಾರಯಂತ್ಯೋsತಿ ಗರ್ವಿತಾಃ ॥೪೧॥

ಕಾಶ್ಚಿತ್ತು ಛತ್ರಧಾರಿಣ್ಯಶ್ಚಾಮರಾಣಾಂ ವಿಧಾರಿಕಾಃ ।
ನಾನಾವಸ್ತ್ರಧರಾಃ ಕಾಶ್ಚಿತ್ಕಾಶ್ಚಿತ್ಪುಷ್ಪಕರಾಂಬುಜಾಃ ॥೪೨॥

---

ಗಳು, ಸರಪಣಿಗಳಿಂದ ಕಟ್ಟಿದ ಕದಗಳು ಪ್ರಕಾಶಿಸುತ್ತಿರುವುವು. ನವೀನವಾದ ವೃಕ್ಷಗಳು ಪ್ರಕಾಶಿಸುತ್ತಿರುವುವು. ಪ್ರಾಕಾರಗಳ ನಡುವೆ ಇರುವ ನೆಲಗಳೂ ಮನೆಗಳೂ ಬೀದಿಗಳೂ, ದೊಡ್ಡ ರಾಜಮಾರ್ಗಗಳೂ, ಅಂಗಳಗಳೂ ಎಲ್ಲವೂ ಹೀರನೆಂಬ ರತ್ನದಿಂದ ಮಾಡಿದುದಾಗಿರುವುವು. ||೩೬-೩೭-೩೮||

ಮರಗಳ ಪಾತಿಗಳು, ಮರಗಳು, ಜಿಂಕೆಗಳು, ಇಳಿಯುವ ಬಾವಿಗಳು, ಕೆರೆಗಳು, ಸೇದುವ ಬಾವಿಗಳು ಇವುಗಳೆಲ್ಲವೂ ಹೀರವೆಂಬ ರತ್ನದಿಂದ ಮಾಡಿದುವು. ||೩೯||

ಆ ಪ್ರದೇಶದಲ್ಲಿ ಶ್ರೀ ಭುವನೇಶ್ವರೀ ದೇವಿಯ ಪರಿಚಾರಿಕೆಯರು ವಾಸವಾಗಿರುವರು. ಒಬ್ಬೊಬ್ಬ ಪರಿಚಾರಿಕೆಗೂ ಲಕ್ಷಸಂಖ್ಯೆಯ ದಾಸಿಯರಿರುವರು. ಇವರ ಸೇವೆಯಿಂದ ಆ ಪರಿಚಾರಿಕೆಯರು ಗರ್ವಿತರಾಗಿರುವರು. ಕೆಲವರು ಬೀಸಣಿಗೆಯನ್ನೂ ಕೆಲವರು ಬಗೆಬಗೆಯ ಪಾನಕಗಳಿಂದ ಕೂಡಿದ ಪಾತ್ರೆಗಳನ್ನೂ ಕೆಲವರು ತಾಂಬೂಲದ ತಟ್ಟೆಗಳನ್ನೂ ಹಿಡಿದಿರುವರು. ||೪೦-೪೧||

ಕೊಡೆಯೇ ಛತ್ರಿಯನ್ನು ಹಿಡಿದಿರುವವರು, ಚಾಮರ ಬೀಸುವವರು, ಬಗೆಬಗೆಯ ವಸ್ತ್ರಗಳನ್ನು ಹಿಡಿದಿರುವರು, ಹೂಗಳನ್ನು ಹಿಡಿದಿರುವರು, ಬಗೆಬಗೆಯ

ನಾನಾದರ್ಶಕರಾಃ ಕಾಶ್ಚಿತ್ಕಾಶ್ಚಿತ್ಕುಂಕುಮಲೇಪನಂ ।
ಧಾರಯಂತ್ಯಃ ಕಜ್ಜಲಂ ಚ ಸಿಂದೂರ ಚಷಕಂ ಪರಾಃ ॥೪೩॥

ಕಾಶ್ಚಿಚ್ಚಿತ್ರಕ ನಿರ್ಮಾತ್ರ್ಯಃ ಪಾದಸಂವಾಹನೇ ರತಾಃ ।
ಕಾಶ್ಚಿತ್ತುಭೂಷಾಕಾರಿಣ್ಯೋ ನಾನಾಭೂಷಾಧರಾಃ ಪರಾಃ ॥೪೪॥

ಪುಷ್ಪಭೂಷಣನಿರ್ಮಾತ್ರ್ಯಃ ಪುಷ್ಪಶೃಂಗಾರಕಾರಿಕಾಃ ।
ನಾನಾವಿಲಾಸಚತುರಾ ಬಹ್ವ್ಯಏವಂ ವಿಧಾಃ ಪರಾಃ ॥೪೫॥

ನಿಬದ್ಧಪರಿಧಾನೀಯಾ ಯುವತ್ಯಃ ಸಕಲಾ ಅಪಿ ।
ದೇವೀಕೃಪಾ ಲೇಶವಶಾತ್ತುಚ್ಛೀಕೃತ ಜಗತ್ರಯಾಃ ॥೪೬॥

ಏತಾ ದೂತ್ಯಃ ಸ್ಮೃತಾ ದೇವ್ಯಃ ಶೃಂಗಾರ ಮದಗರ್ವಿತಾಃ ।
ತಾಸಾಂ ನಾಮಾನಿ ವಕ್ಷ್ಯಾಮಿ ಶೃಣು ಮೇ ನೃಪಸತ್ತಮ ॥೪೭॥

ಅನಂಗರೂಪಾ ಪ್ರಥಮಾಪ್ಯನಂಗ ಮದನಾ ಪರಾ ।
ತೃತೀಯಾ ತು ತತಃ ಪ್ರೋಕ್ತಾ ಸುಂದರೀ ಮದನಾತುರಾ ॥೪೮॥

---

ಕನ್ನಡಿಗಳನ್ನು, ಕುಂಕುಮಕೇಸರಿಯ ಗಂಧವನ್ನೂ, ಕಾಡಿಗೆಯ ಭರಣಿಯನ್ನೂ, ಸಿಂದೂರದ ಬಟ್ಟಲನ್ನೂ ಹಿಡಿದಿರುವರು. ಕೆಲವರು ಗುಂಪುಗುಂಪಾಗಿರುವರು; ಕೆಲವರು ದೇವಿಯ ಹಣೆಯಲ್ಲಿ ಚಿತ್ರಗಳನ್ನು ಬರೆಯುವವರು, ಪಾದವನ್ನೊತ್ತುವವರು, ಆಭರಣದ ಪೆಟ್ಟಿಗೆಗಳನ್ನು ಹಿಡಿದಿರುವವರು, ಆಭರಣಗಳನ್ನು ಇಡುತ್ತಿರುವವರು, ಇರುವರು. ೪೩-೪೩-೪೪

ಹೂವಿನ ಆಭರಣಗಳನ್ನು ಮಾಡುವವರು, ಹೂವಿನ ಅಲಂಕಾರವನ್ನು ಮಾಡುವವರು, ಬಗೆಬಗೆಯ ಆಟಗಳಲ್ಲಿ ಚತುರೆಯರೂ ಆದ ಅನೇಕರಿರುವರು. ಆ ಎಲ್ಲಾ ಪರಿಚಾರಿಕೆಯರೂ ಸೊಂಟವನ್ನು ಕಟ್ಟಿಕೊಂಡು ದೇವಿಯ ಕೃಪೆಯಿಂದ ಮೂರುಲೋಕವನ್ನೂ ಅಲ್ಪವೆಂದೆಣಿಸುತ್ತ ಶೃಂಗಾರ ಮದದಿಂದ ಗರ್ವಿತರಾಗಿರುವರು. ಎಲೈ ಜನಮೇಜಯನೇ, ಅವರ ಹೆಸರುಗಳನ್ನು ಹೇಳುವೆನು ಕೇಳು. ॥೪೫-೪೬-೪೭॥

೧ ಅನಂಗರೂಪಾ, ೨ ಅನಂಗಮದನಾ, ೩ ಮದನಾತುರಾ, ೪ ಭುವನ

ತತೋ ಭುವನವೇಗಾ ಸ್ಯಾತ್ತಥಾ ಭುವನಪಾಲಿಕಾ ।
ಸ್ಯಾತ್ಸರ್ವ ಶಿಶಿರಾನಂಗವೇದನಾನಂಗಮೇಖಲಾ ॥೪೯॥

ವಿದ್ಯುದ್ದಾಮಸಮಾನಾಂಗ್ಯಃ ಕ್ವಣತ್ಕಾಂಚೀಗುಣಾನ್ವಿತಾಃ ।
ರಣನ್ಮಂಜೀರ ಚರಣಾ ಬಹಿರಂತರಿತಸ್ತತಃ ॥೫೦॥

ಧಾವಮಾನಾಸ್ತು ಶೋಭಂತೇ ಸರ್ವಾ ವಿದ್ಯುಲ್ಲತೋಪಮಾಃ ।
ಕುಶಲಾಃ ಸರ್ವಕಾರ್ಯೇಷು ವೇತ್ರಹಸ್ತಾಃ ಸಮಂತತಃ ॥೫೧॥

ಅಷ್ಟದಿಕ್ಷು ತಥೈತಾಸಾಂ ಪ್ರಾಕಾರಾದ್ಬಹಿರೇವ ಚ ।
ಸದನಾನಿ ವಿರಾಜಂತೇ ನಾನಾ ವಾಹನಹೇತಿಭಿಃ ॥೫೨॥

ವಜ್ರಸಾಲಾದಗ್ರಭಾಗೇ ಸಾಲೋ ವೈಡೂರ್ಯನಿರ್ಮಿತಃ ।
ದಶಯೋಜನತುಂಗೋಽಸೌ ಗೋಪುರದ್ವಾರಭೂಷಿತಃ ॥೫೩॥

---

ವೇಗಾ, ೫ ಭುವನಪಾಲಿಕಾ, ೬ ಸರ್ವಶಿಶಿರಾ, ೭ ಅನಂಗವೇದನಾ, ೮ ಅನಂಗ ಮೇಖಲಾ. ॥೪೮-೪೯॥

ಈ ಎಂಟು ಜನ ಪರಿಚಾರಿಕೆಯರೂ ಮಿಂಚಿನ ಸಮಾನವಾದ ಕಾಂತಿಯಿಂದ ಕೂಡಿದ ಅವಯವಗಳುಳ್ಳವರು. ಧ್ವನಿಮಾಡುತ್ತಿರುವ ಗೆಜ್ಜೆಯ ಡಾಬನ್ನು ಧರಿಸಿರುವರು. ಕಾಲಿನ ಗೆಜ್ಜೆಗಳು ಧ್ವನಿಮಾಡುತ್ತಿರಲು ಒಳಕ್ಕೂ ಹೊರಕ್ಕೂ ಓಡಿಯಾಡುತ್ತ ಮಿಂಚಿನ ಬಳ್ಳಿಯಂತೆ ಕಾಣುವರು. ಎಲ್ಲ ಕೆಲಸಗಳಲ್ಲಿಯೂ ಚತುರೆಯರಾಗಿ ಕೈಯಲ್ಲಿ ಬೆತ್ತವನ್ನು ಹಿಡಿದು ಎಲ್ಲಕಡೆಯಲ್ಲಿಯೂ ತಿರುಗುವರು. ವೈಡೂರ್ಯ ಪ್ರಾಕಾರದಿಂದ ಹೊರಗೆ ಎಂಟು ದಿಕ್ಕುಗಳಲ್ಲಿಯೂ ಬಗೆ ಬಗೆಯ ವಾಹನಗಳಿಂದಲೂ, ಆಯುಧಗಳಿಂದಲೂ ಕೂಡಿದ ಇವರ ಮನೆಗಳು ಪ್ರಕಾಶಿಸುತ್ತಿರುವುವು. ಶಾರದಾ ತಿಲಕವೇ ಮುಂತಾದ ತಂತ್ರಶಾಸ್ತ್ರಗಳಲ್ಲಿ ಭುವನೇಶ್ವರೀದೇವಿಯ ಆವರಣದಲ್ಲಿ ಈ ದೂತಿಯರ ಹೆಸರುಗಳು ಪ್ರಸಿದ್ಧವಾಗಿರುವುವು. "ಪದ್ಮಾದ್ಬಹಿಃ ಸಮಭ್ಯರ್ಚ್ಯಾಃ ಶಕ್ತಯಃ ಪರಿಚಾರಿಕಾಃ" । ಎಂದು ಹೇಳಿರುವುದು. ॥೫೦-೫೧-೫೨॥

ವಜ್ರದ ಪ್ರಾಕಾರದಿಂದ ಒಳಗಡೆಯಲ್ಲಿ ಮುಂದೆ ವೈಡೂರ್ಯಪ್ರಾಕಾರವು ಹತ್ತುಗಾವುದ ವಿಸ್ತಾರವಾದುದಾಗಿ ಗೋಪುರಗಳಿಂದಲೂ, ಬಾಗಿಲುಗಳಿಂದಲೂ ಕೂಡಿರುವುದು. ಆ ಪ್ರಾಕಾರಗಳ ನಡುವೆ ಇರುವ ನೆಲವೂ, ಮನೆಗಳೂ ಸಣ್ಣ ದೊಡ್ಡ

ವೈಡೂರ್ಯಭೂಮಿಃ ಸರ್ವಾऽಪಿ ಗೃಹಾಣಿ ವಿವಿಧಾನಿ ಚ ।
ವೀಥ್ಯೋ ರಥ್ಯಾ ಮಹಾಮಾರ್ಗಾಃ ಸರ್ವೇ ವೈಡೂರ್ಯ ನಿರ್ಮಿತಾಃ॥೫೪॥

ವಾಪೀಕೂಪತಡಾಗಾಶ್ಚ ಸ್ರವಂತೀನಾಂ ತಟಾನಿ ಚ ।
ವಾಲುಕಾ ಚೈವ ಸರ್ವಾऽಪಿ ವೈಡೂರ್ಯಮಣಿನಿರ್ಮಿತಾ ॥೫೫॥

ತತ್ರಾಷ್ಟದಿಕ್ಷು ಪರಿತೋ ಬ್ರಾಹ್ಮ್ಯಾದೀನಾಂ ಚ ಮಂಡಲಂ ।
ನಿಜೈರ್ಗಣೈಃ ಪರಿವೃತಂ ಭ್ರಾಜತೇ ನೃಪಸತ್ತಮ ॥೫೬॥

ಪ್ರತಿಬ್ರಹ್ಮಾಂಡಮಾತೄಣಾಂ ತಾಃ ಸಮಷ್ಟಯ ಈರಿತಾಃ ।
ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ॥೫೭॥

ವಾರಾಹೀ ಚ ತಥೇಂದ್ರಾಣೀ ಚಾಮುಂಡಾಃ ಸಪ್ತಮಾತರಃ ।
ಅಷ್ಟಮೀ ತು ಮಹಾಲಕ್ಷ್ಮೀರ್ನಾಮ್ನಾ ಪ್ರೋಕ್ತಾಸ್ತು ಮಾತರಃ ॥೫೮॥

ಬ್ರಹ್ಮರುದ್ರಾದಿದೇವಾನಾಂ ಸಮಾಕಾರಾಸ್ತು ತಾಃ ಸ್ಮೃತಾಃ ।
ಜಗತ್ಕಲ್ಯಾಣಕಾರಿಣ್ಯಃ ಸ್ವಸ್ವಸೇನಾ ಸಮಾವೃತಾಃ ॥೫೯॥

---

ಬೀದಿಗಳೂ ರಾಜಮಾರ್ಗಗಳೂ ವೈಡೂರ್ಯ ರತ್ನಗಳಿಂದ ಮಾಡಿದುದಾಗಿರುವುವು. ಇಳಿಯುವ ಬಾವಿಗಳು, ಸೇದುವ ಬಾವಿಗಳು, ಕೆರೆಗಳು ಹೊಳೆಗಳ ದಡಗಳೂ, ಮರಳುಗಳು ಎಲ್ಲವೂ ವೈಡೂರ್ಯರತ್ನಗಳಿಂದ ಮಾಡಿದುವು. ॥೫೪-೫೫॥

ಅಲ್ಲಿ ಸುತ್ತಲೂ ಎಂಟು ದಿಕ್ಕುಗಳಲ್ಲಿ ಬ್ರಾಹ್ಮ್ಯಾದಿ ಅಷ್ಟಮಾತೃಗಳು ತಮ್ಮ ಗಣಗಳಿಂದ ಕೂಡಿ ಪ್ರಕಾಶಿಸುತ್ತಿರುವರು. ಇವರು ಪ್ರತಿಯೊಂದು ಬ್ರಹ್ಮಾಂಡದಲ್ಲಿರುವ ಮಾತೃಕೆಯರ ಸಮಷ್ಟಿಮಾತೃಕೆಯರು. ಇವರ ಹೆಸರುಗಳು—೧ ಬ್ರಾಹ್ಮೀ ೨ ಮಾಹೇಶ್ವರೀ ೩ ಕೌಮಾರೀ ೪ ವೈಷ್ಣವೀ ೫ ವಾರಾಹೀ ೬ ಇಂದ್ರಾಣೀ ೭ ಚಾಮುಂಡಾ ೮ ಮಹಾಲಕ್ಷ್ಮೀ ಎಂದಿರುವುವು. ॥೫೬-೫೭-೫೮॥

ಈ ಸಮಷ್ಟಿ ಮಾತೃಕೆಯರು ಬ್ರಹ್ಮರುದ್ರಾದಿ ದೇವತೆಗಳ ಸಮಾನಾಕಾರವುಳ್ಳವರಾಗಿ ಲೋಕಕ್ಕೆ ಮಂಗಳವನ್ನುಂಟುಮಾಡುತ್ತ ತಮ್ಮ ತಮ್ಮ ಸೇನೆಗಳಿಂದ ಕೂಡಿರುವರು. ॥೫೯॥

ತತ್ಸಾಲಸ್ಯ ಚತುರ್ದ್ವಾರ್ಷು ವಾಹನಾನಿ ಮಹೇಶಿತುಃ ।
ಸಜ್ಜಾನಿ ನೃಪತೇ ಸಂತಿ ಸಾಲಂಕಾರಾಣಿ ನಿತ್ಯಶಃ ॥೬೦॥

ದಂತಿನಃ ಕೋಟಿಶೋ ವಾಹಾಃ ಕೋಟಿಶಃ ಶಿಬಿಕಾಸ್ತಥಾ ।
ಹಂಸಾಃ ಸಿಂಹಾಶ್ಚ ಗರುಡಾ ಮಯೂರಾ ವೃಷಭಾಸ್ತಥಾ ॥೬೧॥

ತೈರ್ಯುಕ್ತಾಃ ಸ್ಯಂದನಾಸ್ತದ್ವತ್ಕೋಟಿಶೋ ನೃಪನಂದನ ।
ಪಾರ್ಷ್ಣಿಗ್ರಾಹ ಸಮಾಯುಕ್ತಾ ಧ್ವಜೈರಾಕಾಶಚುಂಬಿನಃ ॥೬೨॥

ಕೋಟಿಶಸ್ತು ವಿಮಾನಾನಿ ನಾನಾಚಿಹ್ನಾನ್ವಿತಾನಿ ಚ ।
ನಾನಾವಾದಿತ್ರಯುಕ್ತಾನಿ ಮಹಾಧ್ವಜಯುತಾನಿ ಚ ॥೬೩॥

ವೈಡೂರ್ಯಮಣಿಸಾಲಸ್ಯಾಪ್ಯಗ್ರೇ ಸಾಲಃ ಪರಃ ಸ್ಮೃತಃ ।
ದಶಯೋಜನ ತುಂಗೋಽಸಾ ವಿಂದ್ರನೀಲಾಶ್ಮನಿರ್ಮಿತಃ ॥೬೪॥

ತನ್ಮಧ್ಯಭೂಸ್ತಥಾ ವೀಥ್ಯೋ ಮಹಾಮಾರ್ಗಾ ಗೃಹಾಣಿ ಚ ।
ವಾಪೀಕೂಪತಡಾಗಾಶ್ಚ ಸರ್ವೇ ತನ್ಮಣಿ ನಿರ್ಮಿತಾಃ ॥೬೫॥

---

ಆ ವೈಡೂರ್ಯಪ್ರಾಕಾರದ ನಾಲ್ಕು ದಿಕ್ಕಿನ ಬಾಗಿಲುಗಳಲ್ಲಿಯೂ ಆ ಮಹಾದೇವಿಯ ವಾಹನಗಳು ಯಾವಾಗಲೂ ಅಲಂಕಾರಮಾಡಿ ಸಿದ್ಧವಾಗಿರುವುವು. ॥೬೦॥

ಆನೆಗಳು, ಕುದುರೆಗಳು, ಪಲ್ಲಕ್ಕಿಗಳು, ಹಂಸಗಳು, ಸಿಂಹಗಳು, ಗರುಡಗಳು, ನವಿಲುಗಳು, ಎತ್ತುಗಳು ಇವುಗಳನ್ನು ಕಟ್ಟಿದ ರಥಗಳು ಲೆಕ್ಕವಿಲ್ಲದಷ್ಟು ಇರುವುವು. ಇವುಗಳ ಹಿಂದೆ ಆಕಾಶವನ್ನು ಮುಟ್ಟುವ ಬಾವುಟಗಳನ್ನು ಹಿಡಿದ ಆಳುಗಳಿರುವರು. ಬಗೆಬಗೆಯ ಗುರುತುಗಳಿಂದ ಕೂಡಿದ ವಿಮಾನಗಳು ಅನೇಕ ವಾದ್ಯಗಳಿಂದಲೂ ದೊಡ್ಡ ದೊಡ್ಡ ಬಾವುಟಗಳಿಂದಲೂ ಕೂಡಿ ಲೆಕ್ಕವಿಲ್ಲದಷ್ಟು ಇರುವುವು. ॥೬೧-೬೨-೬೩॥

ವೈಡೂರ್ಯ ಪ್ರಾಕಾರದಿಂದ ಒಳಗೆ ಮುಂದೆ ಹತ್ತು ಗಾವುದ ವಿಸ್ತಾರವಾದ ಇಂದ್ರನೀಲಮಣಿಯ ಪ್ರಾಕಾರವಿರುವುದು. ಆ ಪ್ರಾಕಾರಗಳ ನಡುವೆ ಇರುವ ನೆಲ ಬೀದಿಗಳು, ರಾಜಮಾರ್ಗಗಳು, ಮನೆಗಳು, ಬಾವಿಗಳು, ಕೆರೆಗಳು ಎಲ್ಲವೂ ಇಂದ್ರನೀಲಮಣಿಯಿಂದ ಮಾಡಿದವುಗಳಾಗಿರುವುವು. ॥೬೪-೬೫॥

ತತ್ರ ಪದ್ಮಂ ತು ಸಂಪ್ರೋಕ್ತಂ ಬಹುಯೋಜನ ವಿಸ್ತೃತಂ ।
ಷೋಡಶಾರಂ ದೀಪ್ಯಮಾನಂ ಸುದರ್ಶನಮಿವಾಪರಂ ॥೬೬॥

ತತ್ರ ಷೋಡಶಶಕ್ತೀನಾಂ ಸ್ಥಾನಾನಿ ವಿವಿಧಾನಿ ಚ ।
ಸರ್ವೋಪಸ್ಕರಯುಕ್ತಾನಿ ಸಮೃದ್ಧಾನಿ ವಸಂತಿ ಹಿ ॥೬೭॥

ತಾಸಾಂ ನಾಮಾನಿ ವಕ್ಷ್ಯಾಮಿ ಶೃಣು ಮೇ ನೃಪಸತ್ತಮ ।
ಕರಾಲೀ ವಿಕರಾಲೀ ಚ ತಥೋಮಾ ಚ ಸರಸ್ವತೀ ॥೬೮॥

ಶ್ರೀ ದುರ್ಗೋಷಾ ತಥಾ ಲಕ್ಷ್ಮೀಃ ಶ್ರುತಿಶ್ಚೈವ ಸ್ಮೃತಿರ್ಧೃತಿಃ ।
ಶ್ರದ್ಧಾ ಮೇಧಾ ಮತಿಃ ಕಾಂತಿರಾರ್ಯಾ ಷೋಡಶ ಶಕ್ತಯಃ ॥೬೯॥

ನೀಲಜೀಮೂತಸಂಕಾಶಾಃ ಕರವಾಲಕರಾಂಬುಜಾಃ ।
ಸಮಾಃ ಖೇಟಕಧಾರಿಣ್ಯೋ ಯುದ್ಧೋಪಕ್ರಾಂತ ಮಾನಸಾಃ ॥೭೦॥

---

ಅಲ್ಲಿ ಅನೇಕ ಯೋಜನ ವಿಸ್ತಾರವಾದ ಹದಿನಾರು ದಳಗಳುಳ್ಳ ಚಕ್ರದಂತಿರುವ ಒಂದು ಪ್ರಕಾಶಮಾನವಾದ ಕಮಲವಿರುವುದು. ಅಲ್ಲಿ ಹದಿನಾರು ಶಕ್ತಿದೇವಿಯರ ವಾಸಸ್ಥಾನಗಳು ಬಗೆಬಗೆಯಾಗಿರುವುವು. ಆ ಸ್ಥಳಗಳಲ್ಲಿ ಸಮಸ್ತ ಉಪಯುಕ್ತ ಪದಾರ್ಥಗಳೂ ತುಂಬಿರುವುವು. ಎಲೈ ಜನಮೇಜಯರಾಜನೇ, ಆ ಹದಿನಾರು ಶಕ್ತಿದೇವಿಯರ ಹೆಸರುಗಳನ್ನು ಹೇಳುವೆನು ಕೇಳು. ॥೬೬-೬೭॥

೧ ಕರಾಲೀ ೨ ವಿಕರಾಲೀ ೩ ಉಮಾ ೪ ಸರಸ್ವತೀ ೫ ಶ್ರೀ ೬ ದುರ್ಗಾ ೭ ಉಷಾ ೮ ಲಕ್ಷ್ಮೀ ೯ ಶ್ರುತಿ ೧೦ ಸ್ಮೃತಿ ೧೧ ಧೃತಿ ೧೨ ಶ್ರದ್ಧಾ ೧೩ ಮೇಧಾ ೧೪ ಮತಿ ೧೫ ಕಾಂತಿ ೧೬ ಆರ್ಯಾ ಇವರೇ ಹದಿನಾರು ಶಕ್ತಿದೇವಿಯರು. ॥೬೮-೬೯॥

ಈ ಶಕ್ತಿದೇವಿಯರೆಲ್ಲರೂ ನೀಲವಾದ ಮೇಘದ ಬಣ್ಣವುಳ್ಳವರು. ಕೈಯಲ್ಲಿ ಕತ್ತಿಯನ್ನು ಹಿಡಿದಿರುವರು. ಗುರಾಣಿಯನ್ನು ಹಿಡಿದು ಯುದ್ಧಾಸಕ್ತವಾದ ಮನಸ್ಸಿನಿಂದ ಕೂಡಿರುವರು. ಇವರು ಭುವನೇಶ್ವರೀ ದೇವಿಯ ಯಂತ್ರಪೂಜೆಯಲ್ಲಿ ಶಾರದಾತಿಲಕವೇ ಮುಂತಾದ ಗ್ರಂಥಗಳಲ್ಲಿ ಪ್ರಸಿದ್ಧರು. ॥೭೦॥

ಸೇನಾನ್ಯಃ ಸಕಲಾ ಏತಾಃ ಶ್ರೀದೇವ್ಯಾ ಜಗದೀಶಿತುಃ ।
ಪ್ರತಿಬ್ರಹ್ಮಾಂಡಸಂಸ್ಥಾನಾಂ ಶಕ್ತೀನಾಂ ನಾಯಕಾಃ ಸ್ಮೃತಾಃ ॥೭೦॥

ಬ್ರಹ್ಮಾಂಡಕ್ಷೋಭಕಾರಿಣ್ಯೋ ದೇವೀ ಶಕ್ತ್ಯುಪಬೃಂಹಿಕಾಃ ।
ನಾನಾರಥಸಮಾರೂಢಾಃ ನಾನಾಶಕ್ತಿಭಿರನ್ವಿತಾಃ ॥೭೨॥

ಏತತ್ಪರಾಕ್ರಮಂ ವಕ್ತುಂ ಸಹಸ್ರಾಸ್ಯೋಽಪಿ ನ ಕ್ಷಮಃ ।
ಇಂದ್ರನೀಲಮಹಾಸಾಲಾದಗ್ರೇ ತು ಬಹುವಿಸ್ತೃತಃ ॥೭೩॥

ಮುಕ್ತಾಪ್ರಾಕಾರ ಉದಿತೋ ದಶಯೋಜನ ದೈರ್ಘ್ಯವಾನ್ ।
ಮಧ್ಯಭೂಃ ಪೂರ್ವವತ್ಪ್ರೋಕ್ತಾ ತನ್ಮಧ್ಯೇಽಷ್ಟ ದಲಾಂಬುಜಂ ॥೭೪॥

ಮುಕ್ತಾಮಣಿಗಣಾಕೀರ್ಣಂ ವಿಸ್ತೃತಂ ತು ಸ ಕೇಸರಂ ।
ತತ್ರ ದೇವೀ ಸಮಾಕಾರಾ ದಿವ್ಯಾಯುಧಧರಾಃ ಸದಾ ॥೭೫॥

---

ಈ ಹದಿನಾರು ಶಕ್ತಿದೇವಿಯರೂ ಶ್ರೀ ಭುವನೇಶ್ವರೀ ದೇವಿಯ ಸೇನಾಪತಿಗಳು. ಪ್ರತಿಯೊಂದು ಬ್ರಹ್ಮಾಂಡದಲ್ಲಿರುವ ಶಕ್ತಿದೇವಿಯರ ಸಮಷ್ಟಿರೂಪರು. ದೇವೀಶಕ್ತಿಯಿಂದ ಕೂಡಿದವರಾಗಿ (ಪ್ರೇರಿತರಾಗಿ) ಬ್ರಹ್ಮಾಂಡದಲ್ಲಿ ಭಯಕಂಪಾದಿಗಳನ್ನುಂಟುಮಾಡತಕ್ಕವರು. ಬಗೆಬಗೆಯ ರಥಗಳನ್ನೇರಿ ಬಗೆಬಗೆಯ ಶಕ್ತಿಗಳಿಂದ ಕೂಡಿದವರು. ॥೭೧-೭೨॥

ಇವರ ಪರಾಕ್ರಮವನ್ನು ಹೇಳಲು ಸಾವಿರ ಬಾಯುಳ್ಳ ಆದಿಶೇಷನೂ ಶಕ್ತನಾಗಲಾರನು.

ಇಂದ್ರನೀಲ ರತ್ನಪ್ರಾಕಾರದ ಮುಂದೆ ಹತ್ತುಗಾವುದ ದೂರದಲ್ಲಿ ಹದಿನೈದನೆಯದಾದ ಮುತ್ತಿನ ಪ್ರಾಕಾರವಿರುವುದು. ಈ ಎರಡು ಪ್ರಾಕಾರಗಳಿಗೂ ನಡುವೆ ಇರುವ ಭೂಮಿ ಮುಂತಾದುವು ಹಿಂದೆ ಹೇಳಿದಂತೆಯೇ ಮುತ್ತಿನಿಂದ ಮಾಡಿದುದಾಗಿರುವುದು. ಆ ಎರಡು ಪ್ರಾಕಾರಗಳ ನಡುವೆ ಎಂಟು ದಳಗಳುಳ್ಳ ಕಮಲವಿರುವುದು. ಭುವನೇಶ್ವರೀಯಂತ್ರದಲ್ಲಿರುವ ಅಷ್ಟದಳಗಳಪದ್ಮವೇ ಇದು. ॥೭೩-೭೪॥

ಈ ಅಷ್ಟದಳಗಳ ಪದ್ಮವು ಮುತ್ತು ರತ್ನಗಳಿಂದಲೂ ಕೇಸರಗಳಿಂದಲೂ ಕೂಡಿದುದಾಗಿ ವಿಸ್ತಾರವಾಗಿರುವುದು. ಅಲ್ಲಿ ಭುವನೇಶ್ವರೀ ದೇವಿಯ ಸಮಾನವಾದ ಆಕಾರವುಳ್ಳ, ದೇವಿಯ ಆಯುಧಗಳನ್ನೇ ಧರಿಸಿದ, ಪ್ರಪಂಚದ ವರ್ತಮಾನಗಳನ್ನು

ಸಂಪ್ರೋಕ್ತಾ ಅಷ್ಟಮಂತ್ರಿಣ್ಯೋ ಜಗದ್ವಾರ್ತಾ ಪ್ರಬೋಧಕಾಃ ।
ದೇವೀಸಮಾನಭೋಗಾಸ್ತಾ ಇಂಗಿತಜ್ಞಾಸ್ತು ಪಂಡಿತಾಃ ॥೨೬॥

ಕುಶಲಾಃ ಸರ್ವಕಾರ್ಯೇಷು ಸ್ವಾಮಿಕಾರ್ಯಪರಾಯಣಾಃ ।
ದೇವ್ಯಭಿಪ್ರಾಯಬೋಧ್ಯಸ್ತಾಶ್ಚತುರಾ ಅತಿಸುಂದರಾಃ ॥೨೭॥

ನಾನಾಶಕ್ತಿ ಸಮಾಯುಕ್ತಾಃ ಪ್ರತಿಬ್ರಹ್ಮಾಂಡವರ್ತಿನಾಂ ।
ಪ್ರಾಣಿನಾಂ ತಾಃ ಸಮಾಚಾರಂ ಜ್ಞಾನಶಕ್ತ್ಯಾ ವಿದಂತಿ ಚ ॥೨೮॥

ತಾಸಾಂ ನಾಮಾನಿ ವಕ್ಷ್ಯಾಮಿ ಮತ್ತಃ ಶೃಣು ನೃಪೋತ್ತಮ ।
ಅನಂಗ ಕುಸುಮಾ ಪ್ರೋಕ್ತಾಽಪ್ಯನಂಗ ಕುಸುಮಾತುರಾ ॥೨೯॥

ಅನಂಗ ಮದನಾ ತದ್ವದನಂಗ ಮದನಾತುರಾ ।
ಭುವನಪಾಲಾ ಗಗನವೇಗಾ ಚೈವ ತತಃ ಪರಂ ॥೩೦॥

ಶಶಿರೇಖಾ ಚ ಗಗನರೇಖಾ ಚೈವ ತತಃ ಪರಂ ।
ಪಾಶಾಂಕುಶವರಾ ಭೀತಿಧರಾ ಅರುಣವಿಗ್ರಹಾಃ ॥೩೧॥

---

ದೇವಿಗೆ ತಿಳಿಸುವ, ದೇವಿಯ ಸಮಾನವಾದ ಭೋಗವನ್ನು ಅನುಭವಿಸುವ ಹೊರಗಿನ ಆಕಾರದಿಂದ ಜನರ ಮನಸ್ಸನ್ನು ತಿಳಿಯುವ ಜ್ಞಾನಿಗಳಾದ ಎಂಟು ಮಂದಿ ಮಂತ್ರಿಣೀದೇವಿಯರು ಇರುವರು. ॥೨೫-೨೬॥

ಆ ಮಂತ್ರಿಗಳು ಸಕಲ ಕಾರ್ಯಗಳಲ್ಲಿಯೂ ಬುದ್ಧಿವಂತರು. ಸ್ವಾಮಿನಿಯಾದ ದೇವಿಯ ಕಾರ್ಯವನ್ನು ಮಾಡುವುದರಲ್ಲಿ ಆಸಕ್ತರು. ದೇವಿಯ ಮನದ ಅಭಿಪ್ರಾಯವನ್ನು ತಿಳಿಯತಕ್ಕವರು. ಅತ್ಯಂತ ಸುಂದರಿಯರು, ಕೆಲಸದಲ್ಲಿ ಚತುರೆಯರು, ಅನೇಕ ಶಕ್ತಿಗಳಿಂದ ಕೂಡಿದವರು, ಪ್ರತಿಯೊಂದು ಬ್ರಹ್ಮಾಂಡದಲ್ಲಿಯೂ ಇರುವ ಪ್ರಾಣಿಗಳ ಸಮಾಚಾರವನ್ನು ಜ್ಞಾನಶಕ್ತಿಯಿಂದ ತಿಳಿಯತಕ್ಕವರು. ॥೨೭-೨೮॥

ರಾಜಶ್ರೇಷ್ಠನೇ, ಆ ಮಂತ್ರಿಣಿಗಳ ಹೆಸರುಗಳನ್ನು ಹೇಳುವೆನು ಕೇಳು. ೧ ಅನಂಗಕುಸುಮಾ, ೨ ಅನಂಗಕುಸುಮಾತುರಾ, ೩ ಅನಂಗಮದನಾ, ೪ ಅನಂಗಮದನಾತುರಾ, ೫ ಭುವನಪಾಲಾ, ೬ ಗಗನವೇಗಾ, ೭ ಶಶಿರೇಖಾ, ೮ ಗಗನರೇಖಾ. ಇವರೆಲ್ಲರೂ ದೇವಿಯಂತೆ ಕೆಂಪಾದ ಶರೀರವುಳ್ಳವರಾಗಿ ಪಾಶಾಂಕುಶವರಾಭಯಹಸ್ತ

ವಿಶ್ವಸಂಬಂಧಿನೀಂ ವಾರ್ತಾಂ ಭೋಧಯಂತಿ ಪ್ರತಿಕ್ಷಣಂ ।
ಮುಕ್ತಾಸಾಲಾದಗ್ರಭಾಗೇ ಮಹಾಮಾರಕತೋಽಪರಃ ॥೬೨॥

ಸಾಲೋತ್ತಮಃ ಸಮುದ್ದಿಷ್ಟೋ ದಶಯೋಜನದೈರ್ಘ್ಯವಾನ್ ।
ನಾನಾಸೌಭಾಗ್ಯಸಂಯುಕ್ತೋ ನಾನಾಭೋಗ ಸಮನ್ವಿತಃ ॥೬೩॥

ಮಧ್ಯಭೂಸ್ತ್ವಾದೃಶೀ ಪ್ರೋಕ್ತಾ ಸದನಾನಿ ತಥೈವ ಚ ।
ಷಟ್ಕೋಣಮಂತ್ರ ವಿಸ್ತೀರ್ಣಂ ಕೋಣಸ್ಥಾಃ ದೇವತಾಃ ಶೃಣು॥೬೪॥

ಪೂರ್ವಕೋಣೇ ಚತುರ್ವಕ್ತ್ರೋ ಗಾಯತ್ರೀಸಹಿತೋ ವಿಧಿಃ ।
ಕುಂಡಿಕಾಕ್ಷ ಗುಣಾಭೀತಿ ದಂಡಾಯುಧಧರಃ ಪರಃ ॥೬೫॥

ತದಾಯುಧಧರಾದೇವೀ ಗಾಯತ್ರೀ ಪರದೇವತಾ ।
ವೇದಾಃ ಸರ್ವೇ ಮೂರ್ತಿಮಂತಃ ಶಾಸ್ತ್ರಾಣಿ ವಿವಿಧಾನಿ ಚ ॥೬೬॥

ಸ್ಮೃತಯಶ್ಚ ಪುರಾಣಾನಿ ಮೂರ್ತಿಮಂತಿ ವಸಂತಿ ಹಿ ।
ಯೇ ಬ್ರಹ್ಮವಿಗ್ರಹಾಃ ಸಂತಿ ಗಾಯತ್ರೀವಿಗ್ರಹಾಶ್ಚ ಯೇ ॥೬೭॥
ವ್ಯಾಹೃತೀನಾಂ ವಿಗ್ರಹಾಶ್ಚ ತೇ ನಿತ್ಯಂ ತತ್ರ ಸಂತಿ ಹಿ ।

---

ಗಳನ್ನು ಧರಿಸಿರುವರು. ಪ್ರತಿಯೊಂದು ಕ್ಷಣದಲ್ಲಿಯೂ ಪ್ರಪಂಚದ ಸಂಬಂಧವಾದ ವರ್ತಮಾನಗಳನ್ನು ದೇವಿಗೆ ತಿಳಿಸುತ್ತಿರುವರು. ||೭೯-೮೦-೮೧||

ಮುತ್ತಿನ ಪ್ರಾಕಾರದಿಂದ ಮುಂದೆ ಹತ್ತುಗಾವುದ ದೂರದಲ್ಲಿ ಮಹಾಮರಕತ ರತ್ನಗಳಿಂದ ಮಾಡಿದ ಪದಿನಾರನೆಯ ಉತ್ತಮವಾದ ಪ್ರಾಕಾರವಿರುವುದು. ಆ ಪ್ರಾಕಾರವು ಸಕಲ ಸೌಭಾಗ್ಯಗಳಿಂದ ಕೂಡಿ, ಸಮಸ್ತ ಸುಖಾನುಭವಗಳಿಗೆ ಆಶ್ರಯ ವಾಗಿರುವುದು. ಆ ಎರಡು ಪ್ರಾಕಾರಗಳ ನಡುವೆ ಇರುವ ಭೂಮಿಯೂ ಮನೆಗಳೂ ಹಿಂದೆ ಹೇಳಿದಂತೆ ಮಹಾಮರಕತ ರತ್ನಗಳಿಂದ ಮಾಡಿದವುಗಳಾಗಿರುವುವು. ಈ ಪ್ರಾಕಾರದಲ್ಲಿ ಭುವನೇಶ್ವರೀ ಯಂತ್ರಾವಯವವಾದ ವಿಸ್ತಾರವಾದ ಷಟ್ಕೋಣವಿರುವುದು. ಆ ಷಟ್ಕೋಣದಲ್ಲಿರುವ ದೇವತೆಗಳನ್ನು ಹೇಳುವೆನು ಕೇಳು, ||೮೨-೮೩||

ಪೂರ್ವದಿಕ್ಕಿನ ಕೋಣದಲ್ಲಿ ಕಮಂಡಲು, ಜಪಸರ, ಅಭಯಮುದ್ರೆ, ದಂಡಾಯುಧ ಇವುಗಳನ್ನು ಧರಿಸಿದವರಾದ ಗಾಯತ್ರೀದೇವಿಯೂ, ಚತುರ್ಮುಖಬ್ರಹ್ಮನೂ ಇರುವರು. ಇವರ ಸಮೀಪದಲ್ಲಿ ಸಕಲ ವೇದಗಳೂ, ಶಾಸ್ತ್ರಗಳೂ, ಸ್ಮೃತಿಗಳೂ,

ರಕ್ಷಃ ಕೋಣೇ ಶಂಖಚಕ್ರಗದಾಂಬುಜ ಕರಾಂಬುಜಾ ॥೬೬॥

ಸಾವಿತ್ರೀ ವರ್ತತೇ ತತ್ರ ಮಹಾವಿಷ್ಣುಶ್ಚ ತಾದೃಶಃ ।
ಯೇ ವಿಷ್ಣು ವಿಗ್ರಹಾಃ ಸಂತಿ ಮತ್ಸ್ಯಕೂರ್ಮಾದಯೋಽಖಿಲಾಃ ॥೬೯॥

ಸಾವಿತ್ರೀ-ವಿಗ್ರಹಾ ಯೇ ಚ ತೇಽಸರ್ವೇ ತತ್ರ ಸಂತಿ ಹಿ ।
ವಾಯುಕೋಣೇ ಪರಶ್ವಕ್ಷಮಾಲಾ ಭಯವರಾನ್ವಿತಃ ॥೯೦॥

ಮಹಾರುದ್ರೋ ವರ್ತತೇಽತ್ರ ಸರಸ್ವತ್ಯಪಿ ತಾದೃಶೀ ।
ಯೇ ಯೇ ತು ರುದ್ರಭೇದಾಃ ಸ್ಯುರ್ದಕ್ಷಿಣಾಸ್ಯಾದಯೋ ನೃಪ ॥೯೧॥

ಗೌರೀಭೇದಾಶ್ಚ ಯೇ ಸರ್ವೇ ತೇ ತತ್ರ ನಿವಸಂತಿ ಹಿ ।
ಚತುಃ ಷಷ್ಟ್ಯಾಗಮಾ ಯೇ ಚ ಯೇ ಚಾನ್ಯೇಽಪ್ಯಾಗಮಾಃಸ್ಮೃತಾಃ ॥೯೨॥

ತೇ ಸರ್ವೇ ಮೂರ್ತಿಮಂತಶ್ಚ ತತ್ರನ್ಯೈ ನಿವಸಂತಿ ಹಿ ।
ಅಗ್ನಿಕೋಣೇ ರತ್ನಕುಂಭಂ ತಥಾ ಮಣಿಕರಂಡಕಂ ॥೯೩॥

---

ಪುರಾಣಗಳೂ ಆಕಾರವನ್ನು ಧರಿಸಿರುವುವು. ಬ್ರಹ್ಮಾಗಾಯತ್ರೀ ವ್ಯಾಹೃತಿ ಇವರ ಅವತಾರಗಳೂ ಕೂಡ ಅಲ್ಲಿ ಯಾವಾಗಲೂ ವಾಸಮಾಡುತ್ತಿರುವುವು. ॥೮೬-೮೭॥

ನೈಋತ್ಯ ಕೋಣದಲ್ಲಿ ಶಂಖ, ಚಕ್ರ, ಗದೆ, ಕಮಲ ಇವುಗಳನ್ನು ಧರಿಸಿದ ಸಾವಿತ್ರಿಯೂ ಮಹಾವಿಷ್ಣುವೂ ಇರುವರು. ವಿಷ್ಣುವಿನ ಅವತಾರಗಳಾದ ಮತ್ಸ್ಯ ಕೂರ್ಮಾದಿಗಳೂ, ಸಾವಿತ್ರಿಯ ಅವತಾರಗಳೂ ಕೂಡ ಅಲ್ಲಿ ಇರುವುವು. ॥೮೮-೮೯॥

ವಾಯವ್ಯ ದಿಕ್ಕಿನ ಕೋಣದಲ್ಲಿ, ಕೊಡಲಿ, ಜಪಮಾಲೆ, ಅಭಯ ವರದ ಹಸ್ತಗಳನ್ನು ಧರಿಸಿದ ಮಹಾ ರುದ್ರನೂ ಸರಸ್ವತೀ ದೇವಿಯೂ ಇರುವರು. ದಕ್ಷಿಣಾ ಮೂರ್ತಿಯೇ ಮುಂತಾದ ರುದ್ರನ ಅವತಾರಗಳೂ ಪಾರ್ವತಿಯ ಅವತಾರಗಳೂ ಅಲ್ಲಿರುವುವು. ಅರವತ್ತನಾಲ್ಕು ಆಗಮಗಳೂ ಇತರ ಶಾಸ್ತ್ರಗಳೂ ಎಲ್ಲವೂ ಆಕಾರ ವನ್ನು ಧರಿಸಿ ಅಲ್ಲಿ ವಾಸಮಾಡುವುವು. ೯೦-೯೧-೯೨॥

ಆಗ್ನೇಯ ದಿಕ್ಕಿನ ಕೋಣದಲ್ಲಿ ರತ್ನದ ಕಲಶವನ್ನೂ ರತ್ನ ಖಚಿತವಾದ ಪೆಟ್ಟಿಗೆಯನ್ನೂ ಕೈಗಳಲ್ಲಿ ಹಿಡಿದಿರುವ ಎಲ್ಲರಿಗೂ ಧನವನ್ನು ಕೊಡುವ ನವನಿಧಿ

ದಧಾನೋ ನಿಜಹಸ್ತಾಭ್ಯಾಂ ಕುಬೇರೋ ಧನದಾಯಕಃ ।
ನಾನಾವೀಥೀಸಮಾಯುಕ್ತೋ ಮಹಾಲಕ್ಷ್ಮೀಸಮನ್ವಿತಃ ॥೯೪॥

ದೇವ್ಯಾ ನಿಧಿಪತಿಸ್ತ್ವಾಸ್ತೇ ಸ್ವಗಣೈಃ ಪರಿವೇಷ್ಟಿತಃ ।
ವಾರುಣೇ ತು ಮಹಾಕೋಣೇ ಮದನೋ ರತಿಸಂಯುತಃ ॥೯೫॥

ಪಾಶಾಂಕುಶಧನುರ್ಬಾಣಧರೋ ನಿತ್ಯಂ ವಿರಾಜತೇ ।
ಶೃಂಗಾರಾ ಮೂರ್ತಿಮಂತಸ್ತು ತತ್ರಸನ್ನಿಹಿತಾಃ ಸದಾ ॥೯೬॥

ಈಶಾನಕೋಣೇ ವಿಘ್ನೇಶೋ ನಿತ್ಯಂ ಪುಷ್ಟಿಸಮನ್ವಿತಃ ।
ಪಾಶಾಂಕುಶಧರೋ ವೀರೋ ವಿಘ್ನಹರ್ತಾ ವಿರಾಜತೇ ॥೯೭॥

ವಿಭೂತಯೋ ಗಣೇಶಸ್ಯ ಯಾಯಾಃ ಸಂತಿ ನೃಪೋತ್ತಮ ।
ತಾಃ ಸರ್ವಾ ನಿವಸಂತ್ಯತ್ರ ಮಹೈಶ್ವರ್ಯಸಮನ್ವಿತಾಃ ॥೯೮॥

ಪ್ರತಿಬ್ರಹ್ಮಾಂಡಸಂಸ್ಥಾನಾಂ ಬ್ರಹ್ಮಾದೀನಾಂ ಸಮಷ್ಟಯಃ ।
ಏತೇ ಬ್ರಹ್ಮಾದಯಃ ಪ್ರೋಕ್ತಾಃ ಸೇವಂತೇ ಜಗದೀಶ್ವರೀಂ ॥೯೯॥

---

ಗಳಿಗೆ ಅಧಿಪತಿಯಾದ ಕುಬೇರನು ಮಹಾಲಕ್ಷ್ಮೀ ಸಮೇತನಾಗಿ ತನ್ನ ಗಣಗಳಾದ ಯಕ್ಷರಿಂದ ಕೂಡಿದವನಾಗಿ ಇರುವನು. ||೯೩-೯೪||

ಪಶ್ಚಿಮದ ದಿಕ್ಕಿನ ಕೋಣದಲ್ಲಿ ಪಾಶ, ಅಂಕುಶ ಬಿಲ್ಲು ಬಾಣಗಳನ್ನು ಧರಿಸಿದ ಮನ್ಮಥನು ತನ್ನ ಶಕ್ತಿದೇವಿಯಾದ ರತಿಯೊಡನೆ ಯಾವಾಗಲೂ ಪ್ರಕಾಶಿಸುತ್ತಿರುವನು. ಶೃಂಗಾರ ರಸಬೋಧಗಳು ಆಕಾರವನ್ನು ಧರಿಸಿ ಅಲ್ಲಿ ಯಾವಾಗಲೂ ವಾಸವಾಗಿರುವುವು. ||೯೫-೯೬||

ಈಶಾನ್ಯ ದಿಕ್ಕಿನ ಕೋಣದಲ್ಲಿ ವಿಘ್ನೇಶ್ವರನು ಪುಷ್ಟಿ ಎಂಬ ತನ್ನ ಶಕ್ತಿದೇವಿಯೊಡನೆ ಪಾಶವನ್ನೂ ಅಂಕುಶವನ್ನೂ ಕೈಗಳಲ್ಲಿ ಧರಿಸಿ ಪ್ರಕಾಶಿಸುತ್ತಿರುವನು. ಗಣೇಶನ ಸಮಸ್ತ ವಿಭೂತಿಗಳೂ ಸಮಸ್ತ ಐಶ್ವರ್ಯಗಳಿಂದ ಕೂಡಿ ಅಲ್ಲಿ ವಾಸವಾಗಿರುವುವು. ||೯೭-೯೮||

ಪ್ರತಿಯೊಂದು ಬ್ರಹ್ಮಾಂಡದಲ್ಲಿರುವ ಬ್ರಹ್ಮಾದಿಗಳ ಸಮಷ್ಟಿರೂಪರಾದ ಈ ಷಟ್ಕೋಣಮಂಡಲದಲ್ಲಿರುವ ಬ್ರಹ್ಮಾದಿಗಳು ಭುವನೇಶ್ವರೀ ದೇವಿಯನ್ನು ಸೇವಿಸುತ್ತಿರುವರು. ||೯೯||

ಮಹಾಮಾರಕತಸ್ಯಾಗ್ರೇ ಶತಯೋಜನದೈರ್ಘ್ಯವಾನ್ ।
ಪ್ರವಾಲಸಾಲೋಽಸ್ತ್ಯಪರಃ ಕುಂಕುಮಾರುಣವಿಗ್ರಹಃ ॥೧೦೦॥

ಮಧ್ಯಭೂಸ್ತಾದೃಶೀ ಪ್ರೋಕ್ತಾ ಸದನಾನಿ ಚ ಪೂರ್ವವತ್ ।
ತನ್ಮಧ್ಯೇ ಪಂಚಭೂತಾನಾಂ ಸ್ವಾಮಿನ್ಯಃ ಪಂಚ ಸಂತಿ ಚ ॥೧೦೧॥

ಹೃಲ್ಲೇಖಾ ಗಗನಾ ರಕ್ತಾ ಚತುರ್ಥೀ ತು ಕರಾಲಿಕಾ ।
ಮಹೋಚ್ಛುಷ್ಮಾ ಪಂಚಮೀ ಚ ಪಂಚಭೂತ ಸಮಪ್ರಭಾಃ ॥೧೦೨॥

ಪಾಶಾಂಕುಶವರಾಭೀತಿಧಾರಿಣ್ಯೋ ಮಿತಭೂಷಣಾಃ ।
ದೇವೀಸಮಾನವೇಷಾಢ್ಯಾ ನವಯೌವನಗರ್ವಿತಾಃ ॥೧೦೩॥

ಪ್ರವಾಲಸಾಲಾದಗ್ರೇ ತು ನವರತ್ನವಿನಿರ್ಮಿತಃ ।
ಬಹುಯೋಜನವಿಸ್ತೀರ್ಣೋ ಮಹಾಸಾಲೋಽಸ್ತಿ ಭೂಮಿಪ ॥೧೦೪॥

---

ಮಹಾ ಮರಕತರತ್ನದ ಪ್ರಾಕಾರದಿಂದ ಮುಂದೆ ನೂರು ಗಾವುದ ದೂರದಲ್ಲಿ ಹವಳದ ಪ್ರಾಕಾರವು ಕುಂಕುಮದಂತೆ ಕೆಂಪಾಗಿ ಪ್ರಕಾಶಿಸುತ್ತಿರುವುದು. ಆ ಎರಡು ಪ್ರಾಕಾರಗಳ ನಡುವೆ ಇರುವ ನೆಲವೂ, ಮನೆ ಮುಂತಾದುವುಗಳೂ, ಹಿಂದೆ ಹೇಳಿದಂತೆ ಹವಳದಿಂದ ಮಾಡಿದುದಾಗಿರುವುವು. ॥೧೦೦॥

ಆ ಎರಡು ಪ್ರಾಕಾರಗಳ ನಡುವೆ ಪಂಚಭೂತಗಳಿಗೆ ಅಧಿದೇವಿಯರಾದ, ಹೃಲ್ಲೇಖಾ, ಗಗನಾ, ರಕ್ತಾ, ಕರಾಲಿಕಾ, ಮಹೋಚ್ಛುಷ್ಮಾ ಎಂಬ, ಪಂಚಭೂತಗಳ ಸಮಾನಕಾಂತಿಯಿಂದ ಕೂಡಿದ, ದೇವಿಯರಿರುವರು. ॥೧೦೧-೧೦೨॥

ಆ ದೇವಿಯರು ಪಾಶ, ಅಂಕುಶ, ಅಭಯ ವರದ ಹಸ್ತಗಳನ್ನು ಧರಿಸಿದವರಾಗಿ ಅನೇಕ ಆಭರಣಗಳನ್ನಿಟ್ಟುಕೊಂಡು ದೇವಿಯ ಸಮಾನವಾದ ವೇಷದಿಂದ ಪ್ರಕಾಶಿಸುತ್ತ ಹೊಸದಾದ ಪ್ರಾಯದಿಂದ ಗರ್ವಪಡುತ್ತಿರುವರು. ॥೧೦೩॥

ಎಲೈ ಜನಮೇಜಯರಾಜನೇ, ಹವಳದ ಪ್ರಾಕಾರದಿಂದ ಮುಂದೆ ಅನೇಕ ಗಾವುದ ವಿಸ್ತಾರವಾದ ನವರತ್ನಗಳಿಂದ ಮಾಡಿದ ದೊಡ್ಡ ಪ್ರಾಕಾರವಿರುವುದು. ಇದು ಹದಿನೆಂಟನೆಯ ಪ್ರಾಕಾರವು. ॥೧೦೪॥

ತತ್ರ ಚಾಮ್ನಾಯ ದೇವೀನಾಂ ಸದನಾನಿ ಬಹೂನ್ಯಪಿ ।
ನವರತ್ನಮಯಾನ್ಯೇವ ತಡಾಗಾಶ್ಚ ಸರಾಂಸಿ ಚ ॥೧೦೫॥

ಶ್ರೀದೇವ್ಯಾಃಯೇಽವತಾರಾಸ್ಯುಃ ತೇ ತತ್ರ ನಿವಸಂತಿ ಹಿ ।
ಮಹಾವಿದ್ಯಾ ಮಹಾಭೇದಾಃ ಸಂತಿ ತತ್ರೈವ ಭೂಮಿಪ ॥೧೦೬॥

ನಿಜಾವರಣದೇವೀಭಿರ್ನಿಜಭೂಷಣವಾಹನೈಃ ।
ಸರ್ವದೇವ್ಯೋ ವಿರಾಜಂತೇ ಕೋಟಿಸೂರ್ಯಸಮಪ್ರಭಾಃ ॥೧೦೭॥

ಸಪ್ತಕೋಟಿಮಹಾಮಂತ್ರದೇವತಾಃ ಸಂತಿ ತತ್ರ ಹಿ ।
ನವರತ್ನಮಯಾದಗ್ರೇ ಚಿಂತಾಮಣಿಗೃಹಂ ಮಹತ್ ॥೧೦೮॥

---

ಅಲ್ಲಿ ಆಗಮಶಾಸ್ತ್ರಪ್ರಸಿದ್ಧರಾದ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ ಆಮ್ನಾಯ ದೇವಿಯರ ಮನೆಗಳು ನವರತ್ನಮಯಗಳಾಗಿಯೂ ಪ್ರಕಾಶಿಸುತ್ತಿರುವುವು. ॥೧೦೫॥

ಶ್ರೀ ಭುವನೇಶ್ವರೀ ದೇವಿಯು ದೈತ್ಯನಾಶಾರ್ಥವಾಗಿಯೂ, ಭಕ್ತಾನುಗ್ರಹಾರ್ಥವಾಗಿಯೂ, ಯಾವ ಯಾವ ಅವತಾರಗಳನ್ನು ಮಾಡಿದಳೋ, ಭುವನೇಶ್ವರೀ ಸಂಹಿತೆಯಲ್ಲಿ ಪ್ರಸಿದ್ಧವಾದ, ಪಾಶಾಂಕುಶೇಶ್ವರೀ, ಭುವನೇಶ್ವರೀ, ಭೈರವೀ, ಅಂಕುಶಭುವನೇಶ್ವರೀ, ಪ್ರಸಾದಭುವನೇಶ್ವರೀ ಶ್ರೀಕ್ರೋಧಭುವನೇಶ್ವರೀ, ತ್ರಿಪುಟಾ ಶ್ವಾರೂಢಾ, ನಿತ್ಯಕ್ಲಿನ್ನಾ ಅನ್ನಪೂರ್ಣಾ, ತ್ವರಿತಾ ಮುಂತಾದ ಭುವನೇಶ್ವರಿಯ ಅವತಾರಗಳು ಅಲ್ಲಿ ವಾಸವಾಗಿರುವುವು. ಎಲೈ ಜನಮೇಜಯರಾಜನೇ, ಅಲ್ಲಿಯೇ ಮಹಾವಿದ್ಯೆಯ ಭೇದವಾದ, ಕಾಲೀ, ತಾರಾ, ಮಹಾವಿದ್ಯಾ, ಷೋಡಶೀ, ಮುಂತಾದ ಹತ್ತು ಮಹಾವಿದ್ಯೆಗಳೂ ಮಹಾ ವಿದ್ಯಾವತಾರಗಳೂ ಆ ಪ್ರಾಕಾರದಲ್ಲಿರುವುವು. ॥೧೦೬॥

ಅಲ್ಲಿರುವ ಸಮಸ್ತ ದೇವಿಯರೂ ತಂತಮ್ಮ ಆವರಣದೇವಿಯರಿಂದಲೂ ತಂತಮ್ಮ ಆಭರಣ ಮತ್ತು ವಾಹನಗಳಿಂದಲೂ ಕೂಡಿ ಕೋಟಿ ಸೂರ್ಯರಂತೆ ಕಾಂತಿಯುಕ್ತರಾಗಿ ಪ್ರಕಾಶಿಸುತ್ತಿರುವರು. ಅಲ್ಲಿಯೇ ಸಪ್ತಕೋಟಿಮಹಾಮಂತ್ರಗಳ ದೇವಿಯರೂ ವಾಸಮಾಡುತ್ತಿರುವರು. ॥೧೦೭॥

ನವರತ್ನಮಯವಾದ ಪ್ರಾಕಾರದಿಂದ ಮುಂದೆ ಒಳಗೆ ದೊಡ್ಡದಾದ ಚಿಂತಾಮಣಿ ಗೃಹವಿರುವುದು. ಅಲ್ಲಿರುವ ಸಮಸ್ತ ವಸ್ತುಗಳೂ ಚಿಂತಾಮಣಿಯಿಂದಲೇ

ತತ್ರತ್ಯಂ ವಸ್ತುಮಾತ್ರಂ ತು ಚಿಂತಾಮಣಿ ವಿನಿರ್ಮಿತಂ ।
ಸೂರ್ಯೋದ್ಗಾರೋಪಲೈಸ್ತದ್ವಚ್ಚಂದ್ರೋದ್ಗಾರೋಪಲೈಸ್ತಥಾ ॥೧೦೯॥

ವಿದ್ಯುತ್ಪ್ರಭೋಪಲೈಃ ಸ್ತಂಭಾಃ ಕಲ್ಪಿತಾಸ್ತು ಸಹಸ್ರಶಃ ।
ಯೇಷಾಂ ಪ್ರಭಾಭಿರಂತಸ್ಥಂ ವಸ್ತು ಕಿಂಚಿನ್ನದೃಶ್ಯತೇ ॥೧೧೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಏಕಾದಶೋಽಧ್ಯಾಯಃ

---

ಮಾಡಿದುವುಗಳು ಮತ್ತು ಸೂರ್ಯಕಾಂತಿಯನ್ನೂ, ಚಂದ್ರಕಾಂತಿಯನ್ನೂ ಹೊರ ಹೊಮ್ಮಿಸುವ ಕಲ್ಲುಗಳಿಂದಲೂ ಮಾಡಿದವುಗಳಾಗಿರುವುವು. ॥೧೦೮-೧೦೯॥

ಆ ಚಿಂತಾಮಣಿ ಗೃಹದಲ್ಲಿರುವ ಕಂಭಗಳು ಮಿಂಚಿನ ಕಾಂತಿಯನ್ನು ಹರಡುವ ಕಲ್ಲುಗಳಿಂದ ಮಾಡಿದುವು. ಇಂತಹ ಕಂಭಗಳು ಸಾವಿರಾರು ಇರುವುದರಿಂದ ಅವುಗಳ ಕಾಂತಿಯಿಂದ ಮನೆಯೊಳಗಿರುವ ವಸ್ತುಗಳೊಂದೂ ಕಾಣಿಸುವುದಿಲ್ಲ. ಒಂದು ಮಿಂಚನ್ನು ನೋಡಿದರೇ ಕಣ್ಣು ಕತ್ತಲೆ ಕವಿದುಕೊಳ್ಳುವುದು. ಹೀಗಿರುವಲ್ಲಿ ಮಿಂಚಿನ ಕಾಂತಿಯ ಸಾವಿರಾರು ಕಂಭಗಳನ್ನು ನೋಡಿದಮೇಲೆ ಹೇಳಬೇಕಾದುದೇನು? ॥೧೧೦॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

|| ದ್ವಾದಶೋಽಧ್ಯಾಯಃ ||

### ಹನ್ನೆರಡನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತದೇವ ದೇವೀಸದನಂ ಮಧ್ಯಭಾಗೇ ವಿರಾಜತೇ ।**
**ಸಹಸ್ರಸ್ತಂಭಸಂಯುಕ್ತಾಶ್ಚತ್ವಾರಸ್ತೇಷು ಮಂಟಪಾಃ ॥೧॥**

**ಶೃಂಗಾರಮಂಡಪಶ್ಚೈಕೋ ಮುಕ್ತಿಮಂಡಪ ಏವ ಚ ।**
**ಜ್ಞಾನಮಂಡಪಸಂಜ್ಞಸ್ತು ತೃತೀಯಃ ಪರಿಕೀರ್ತಿತಃ ॥೨॥**

**ಏಕಾಂತಮಂಡಪಶ್ಚೈವ ಚತುರ್ಥಃ ಪರಿಕೀರ್ತಿತಃ ।**
**ನಾನಾವಿತಾನಸಂಯುಕ್ತಾ ನಾನಾಧೂಪೈಸ್ತು ಧೂಪಿತಾಃ ॥೩॥**

---

ಈ ಅಧ್ಯಾಯದಲ್ಲಿ ಚಿಂತಾಮಣಿಗೃಹದ ವರ್ಣನೆಯೂ ದೇವಿಯ ಧ್ಯಾನವೂ ಹೇಳಲ್ಪಡುವುದು—

ವ್ಯಾಸನು ಹೇಳಿದನು—ಷೋಡಶದಳ, ಅಷ್ಟದಳ, ಷಟ್ಕೋಣ ಇವುಗಳ ನಡುವೆ ಇರುವ ಪ್ರಕಾಶಮಾನವಾದ ಚಿಂತಾಮಣಿಗೃಹವೇ ಬಿಂದು ಸ್ಥಾನವು. ಅದೇ ಮೂಲಪ್ರಕೃತಿ ದೇವಿಯ ವಾಸಸ್ಥಾನವು. ಅಲ್ಲಿ ಸಾವಿರ ಕಂಭಗಳಿಂದ ಕೂಡಿದ ನಾಲ್ಕು ಮಂಟಪಗಳು ಇರುವುವು. ||೧||

೧ ಶೃಂಗಾರಮಂಟಪ, ೨ ಮುಕ್ತಿಮಂಟಪ, ೩ ಜ್ಞಾನಮಂಟಪ, ೪ ಏಕಾಂತ ಮಂಟಪ ಎಂದು ನಾಲ್ಕು ದಿಕ್ಕಿನಲ್ಲಿಯೂ ನಾಲ್ಕು ಮಂಟಪಗಳಿರುವುವು. ಪ್ರತಿ ಮಂಟಪವೂ ವಿಸ್ತಾರವಾದುದರಿಂದ ಅದರಲ್ಲಿ ಅನೇಕ ಕಂಭಗಳಿರುವುವು. ||೨||

ಪ್ರತಿಯೊಂದು ಮಂಟಪವೂ ಬಗೆಬಗೆಯ ಮೇಲುಕಟ್ಟುಗಳನ್ನು ಉಳ್ಳುದಾಗಿಯೂ, ಅನೇಕ ಬಗೆಯ ಧೂಪಗಳಿಂದ ಕೂಡಿದುವಾಗಿಯೂ, ಕಾಂತಿಯಿಂದ ಕೋಟಿ

**ಕೋಟಿಸೂರ್ಯಸಮಾಃ ಕಾಂತ್ಯಾ ಭ್ರಾಜಂತೇ ಮಂಡಪಾಃ ಶುಭಾಃ ।**
**ತನ್ಮಂಡಪಾನಾಂ ಪರಿತಃ ಕಾಶ್ಮೀರವನಿಕಾ ಸ್ಮೃತಾ ॥೪॥**

**ಮಲ್ಲಿಕಾಕುಂದವನಿಕಾ ಯತ್ರ ಪುಷ್ಕಲಾಃ ಸ್ಥಿತಾಃ ।**
**ಅಸಂಖ್ಯಾತಾ ಮೃಗಮದೈಃ ಪೂರಿತಾಸ್ತತ್ಸ್ರವಾ ನೃಪ ॥೫॥**

**ಮಹಾಪದ್ಮಾಟವೀ ತದ್ವದ್ರತ್ನಸೋಪಾನನಿರ್ಮಿತಾ ।**
**ಸುಧಾರಸೇನ ಸಂಪೂರ್ಣಾ ಗುಂಜನ್ಮತ್ತಮಧುವ್ರತಾ ॥೬॥**

**ಹಂಸಕಾರಂಡವಾಕೀರ್ಣಾ ಗಂಧಪೂರಿತದಿಕ್ತಟಾ ।**
**ವನಿಕಾನಾಂ ಸುಗಂಧೈಸ್ತು ಮಣಿದ್ವೀಪಂ ಸುವಾಸಿತಂ ॥೭॥**

**ಶೃಂಗಾರಮಂಡಪೇ ದೇವ್ಯೋ ಗಾಯಂತಿ ವಿವಿಧೈಃ ಸ್ವರೈಃ ।**
**ಸಭಾಸದೋ ದೇವವರಾ ಮಧ್ಯೇ ಶ್ರೀಜಗದಂಬಿಕಾ ॥೮॥**

---

ಸೂರ್ಯರಿಗೆ ಸಮಾನವಾದುದಾಗಿಯೂ, ಮಂಗಳಕರವಾಗಿ ಪ್ರಕಾಶಿಸುತ್ತಿರುವುದು. ಆ ಮಂಟಪಗಳ ಸುತ್ತಲೂ ಎಂದರೆ ಎರಡು ಪಕ್ಕಗಳಲ್ಲಿಯೂ ಕುಂಕುಮಕೇಸರಿಯ ವನವೂ, ಮಲ್ಲಿಗೆಯ ವನವೂ, ಇರುವುವು. ಅಲ್ಲಿ ಲೆಕ್ಕವಿಲ್ಲದಷ್ಟು ಕಸ್ತೂರಿಯ ಮೃಗಗಳು ಕಸ್ತೂರಿಯಿಂದ ತುಂಬಿ ಆ ಕಸ್ತೂರಿಯ ರಸವನ್ನು ತಮ್ಮ ಶರೀರದಿಂದ ಸುರಿಸುತ್ತಿರುವುವು. ॥೩-೪-೫॥

ಆ ಮಂಟಪಗಳ ಎರಡು ಪಕ್ಕಗಳಲ್ಲಿಯೂ ರತ್ನಗಳ ಸೋಪಾನವನ್ನು ಕಟ್ಟಿದ ಅಮೃತರಸದಿಂದ ತುಂಬಿದ, ಧ್ವನಿಮಾಡುತ್ತಿರುವ ಮದಿಸಿದ ಭ್ರಮರಗಳಿಂದ ಕೂಡಿದ, ಮಹಾಪದ್ಮಾಟವಿಯು ಇರುವುದು. ॥೬॥

ಆ ಮಹಾಪದ್ಮಾಟವಿಯು ಹಂಸಪಕ್ಷಿಗಳಿಂದಲೂ, ನೀರುಕೋಳಿಗಳಿಂದಲೂ ಹಕ್ಕಿಗಳಿಂದಲೂ ತುಂಬಿದ್ದಿತು. ಅದರ ಸುವಾಸನೆಯಿಂದ ದಿಕ್ಕುಗಳೆಲ್ಲವೂ ತುಂಬಿದ್ದಿತು. ಹೂತೋಟಗಳ ಸುಗಂಧದಿಂದ ಆ ಮಣಿದ್ವೀಪವೆಲ್ಲವೂ ಸುವಾಸನೆಯಾಗಿದ್ದಿತು.॥೭॥

ಶೃಂಗಾರಮಂಟಪದ ಮಧ್ಯದಲ್ಲಿ ಜಗದಂಬೆಯಾದ ಭುವನೇಶ್ವರೀದೇವಿಯು ಸಿಂಹಾಸನದಲ್ಲಿ ಚಿತ್ತಯಿಸಿರುವಳು. ಮಣಿದ್ವೀಪವಾಸಿಗಳಾದ ಹಿಂದೆ ಹೇಳಿದ ದೇವಶ್ರೇಷ್ಠರು ಎಲ್ಲರೂ ಸಭೆಯಲ್ಲಿರುವರು. ವಶಿನ್ಯಾದಿದೇವಿಯರೂ ಸಕಲ ಅಪ್ಸರಸ್ತ್ರೀಯರೂ ಬಗೆಬಗೆಯ ಸ್ವರಗಳಿಂದ ದೇವಿಯ ಎದುರಿಗೆ ಗಾನಮಾಡುತ್ತಿರುವರು. ॥೮॥

ಮುಕ್ತಿಮಂಟಪಮಧ್ಯೇ ತು ಮೋಚಯತ್ಯನಿಶಂ ಶಿವಾ ।
ಜ್ಞಾನೋಪದೇಶಂ ಕುರುತೇ ತೃತೀಯೈನೈವ ಮಂಟಪೇ ॥೯॥

ಚತುರ್ಥಮಂಡಪೇ ಚೈವ ಜಗದ್ರಕ್ಷಾವಿಚಿಂತನಂ ।
ಮಂತ್ರಿಣೀಸಹಿತಾ ನಿತ್ಯಂ ಕರೋತಿ ಜಗದಂಬಿಕಾ ॥೧೦॥

ಚಿಂತಾಮಣಿಗೃಹೇ ರಾಜನ್ ಶಕ್ತಿತತ್ವಾತ್ಮಕೈಃ ಪರೈಃ ।
ಸೋಪಾನೈರ್ದಶಭಿರ್ಯುಕ್ತೋ ಮಂಚಕೋಽಪ್ಯಧಿರಾಜತೇ ॥೧೧॥

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ ।
ಏತೇ ಮಂಚಖುರಾಃ ಪ್ರೋಕ್ತಾಃ ಫಲಕಸ್ತು ಸದಾಶಿವಃ ॥೧೨॥

---

ದೇವಿಯು ಮುಕ್ತಿಮಂಟಪದಲ್ಲಿ ಪ್ರತಿಯೊಂದು ಬ್ರಹ್ಮಾಂಡದಲ್ಲಿರುವ ಭಕ್ತರಿಗೂ ಅವರವರ ಯೋಗ್ಯತಾನುಸಾರವಾಗಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ಚತುರ್ವಿಧ ಮುಕ್ತಿಯನ್ನು ಕೊಡುವಳು. ಎಲೈ ರಾಜನೇ, ಮೂರನೆಯದಾದ ಜ್ಞಾನಮಂಟಪದಲ್ಲಿ ಭಕ್ತರಿಗೆ ತನ್ನ ಎಂದರೆ ಪರಬ್ರಹ್ಮಸ್ವರೂಪ ವಿಷಯವಾದ ಜ್ಞಾನೋಪದೇಶವನ್ನು ಮಾಡುವಳು. ನಾಲ್ಕನೆಯದಾದ ಏಕಾಂತ ಮಂಟಪದಲ್ಲಿ ಹಿಂದೆ ಹೇಳಿದ ಅನಂಗಕುಸುಮಾ ಮುಂತಾದ ಎಂಟು ಜನ ಶಕ್ತಿದೇವಿಯರಿಂದ ಕೂಡಿ ಪ್ರತಿದಿನವೂ ಪ್ರಪಂಚ ರಕ್ಷಣೆಯ ಆಲೋಚನೆಯನ್ನು ಮಾಡುವಳು. ॥೯-೧೦॥

ಜನಮೇಜಯರಾಜನೇ, ಚಿಂತಾಮಣಿ ಗೃಹದಲ್ಲಿ ಶ್ರೇಷ್ಠವಾದ ಮೂಲಪ್ರಕೃತಿ ರೂಪಳಾದ ಶ್ರೀ ಭುವನೇಶ್ವರೀ ದೇವಿಯು ಹತ್ತು ತತ್ವಸ್ವರೂಪವಾದ ಹತ್ತು ಮೆಟ್ಟಲುಗಳಿಂದ ಕೂಡಿದ, ಮಂಚವು ವಿಶೇಷವಾಗಿ ಪ್ರಕಾಶಿಸುತ್ತಿರುವುದು. ಶಾರದಾತಿಲಕ ಗ್ರಂಥದಲ್ಲಿ ನಿವೃತ್ತ್ಯಾದಿ ಪಂಚಕಲೆಗಳೂ ಬಿಂದು, ಕಲಾ, ನಾದ, ಶಕ್ತಿ, ಸದಾಶಿವ ಈ ಐದು ತತ್ವಗಳೂ ಸೇರಿ ಹತ್ತು ಶಕ್ತಿತತ್ವಗಳು. ಇವುಗಳೇ ಮೆಟ್ಟಲುಗಳು. ಮಂಚವು ಅತ್ಯಂತ ಎತ್ತರವಾದುದರಿಂದ ಅದರ ಮೇಲೆ ಹತ್ತುವುದಕ್ಕಾಗಿ ಈ ಹತ್ತು ಸೋಪಾನಗಳಿರುವುವು. ಎಂದು ಹೇಳಿರುವುದು. ॥೧೧॥

ಆ ಮಂಚಕ್ಕೆ ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಈ ನಾಲ್ವರೂ ನಾಲ್ಕು ಕಾಲುಗಳು. ಸದಾಶಿವನು ಹಲಗೆಯು. ॥೧೨॥

ತಸ್ಯೋಪರಿ ಮಹಾದೇವೋ ಭುವನೇಶೋ ವಿರಾಜತೇ ।
ಯಾ ದೇವೀ ನಿಜಲೀಲಾರ್ಥಂ ದ್ವಿಧಾಭೂತಾ ಬಭೂವ ಹ ॥೧೩॥

ಸೃಷ್ಟ್ಯಾದೌ ತು ಸ ಏವಾಯಂ ತದರ್ಧಾಂಗೋ ಮಹೇಶ್ವರಃ ।
ಕಂದರ್ಪದರ್ಪನಾಶೋದ್ಯತ್ಕೋಟಿಕಂದರ್ಪಸುಂದರಃ ॥೧೪॥

ಪಂಚವಕ್ತ್ರಸ್ತ್ರಿನೇತ್ರಶ್ಚ ಮಣಿಭೂಷಣಭೂಷಿತಃ ।
ಹರಿಣಾಭೀತಿಪರಶೂನ್ವರಂ ಚ ನಿಜಬಾಹುಭಿಃ ॥೧೫॥

ದಧಾನಃ ಷೋಡಶಾಬ್ದೋಽಸೌ ದೇವಃ ಸರ್ವೇಶ್ವರೋ ಮಹಾನ್ ।
ಕೋಟಿಸೂರ್ಯಪ್ರತೀಕಾಶಶ್ಚಂದ್ರಕೋಟಿಸುಶೀತಲಃ ॥೧೬॥
ಶುದ್ಧಸ್ಫಟಿಕಸಂಕಾಶಸ್ತ್ರಿನೇತ್ರಃ ಶೀತಲದ್ಯುತಿಃ ।

---

ಆ ಮಂಚದ ಮೇಲೆ ಭುವನೇಶ್ವರನಾದ ಮಹಾದೇವನು ಪ್ರಕಾಶಿಸುತ್ತಿರುವನು. ಮೂಲಪ್ರಕೃತಿಯಾದ ಭುವನೇಶ್ವರೀದೇವಿಯು ಸೃಷ್ಟಿಯ ಮೊದಲಿನಲ್ಲಿ ಯೋಗ್ಯವಾದ ತನ್ನ ವಿಲಾಸಕ್ಕೆ ಅನುರೂಪವಾದ ಕ್ರೀಡೆಗೋಸ್ಕರವಾಗಿ ತಾನೇ ಎರಡು ಭಾಗವಾದಳು. ಆ ಎರಡು ಭಾಗದಲ್ಲಿ ಬಲಭಾಗದ ಅರ್ಧವೇ ಈ ಭುವನೇಶ್ವರನು. ಸತ್ವರಜಸ್ತಮೋ ಗುಣಗಳ ಸಾಮ್ಯಾವಸ್ಥಾ ಸ್ವರೂಪವಾದ ಮಾಯಾಶಬಲ ಬ್ರಹ್ಮ ಸ್ವರೂಪಿಣಿಯಾದ ಭುವನೇಶ್ವರಿಯೇ ಭುವನೇಶ್ವರ ಸ್ವರೂಪದಿಂದ ವ್ಯಕ್ತವಾದಳೆಂದು ಅಭಿಪ್ರಾಯವು. ॥೧೩॥

ಆ ಮಾಯಾಶಬಲ ಬ್ರಹ್ಮಸ್ವರೂಪಿಣಿಯಾದ ಭುವನೇಶ್ವರೀದೇವಿಯ ಅರ್ಧಾಂಗನಾದ ಮಹೇಶ್ವರನು ಮನ್ಮಥನ ಸೌಂದರ್ಯದರ್ಪವನ್ನು ನಾಶಮಾಡುವುದಕ್ಕೆಂಬಂತೆ ಅನೇಕ ಮನ್ಮಥರಷ್ಟು ಸೌಂದರ್ಯವುಳ್ಳವನಾಗಿ ಉತ್ಪನ್ನನಾದನು. ಐದು ಮುಖವುಳ್ಳವನೂ, ಪ್ರತಿಯೊಂದು ಮುಖದಲ್ಲಿಯೂ ಮೂರು ಕಣ್ಣುಗಳುಳ್ಳವನೂ, ರತ್ನಾಭರಣವನ್ನು ಧರಿಸಿ ತನ್ನ ನಾಲ್ಕು ಕೈಗಳಲ್ಲಿಯೂ ಜಿಂಕೆ, ಪರಶು, ಅಭಯ, ವರದ, ಮುದ್ರೆಗಳನ್ನು ಧರಿಸಿ ಹದಿನಾರು ವರುಷದ ವಯಸ್ಸಿನವನಂತೆ ಕಾಣುತ್ತಿರುವನು. ಕೋಟಿ ಸೂರ್ಯರ ತೇಜಸ್ಸಿನಂತೆ ಹೊಳೆಯುತ್ತ ಕೋಟಿ ಚಂದ್ರರಂತೆ ತಂಪಾದ ಕಿರಣಗಳನ್ನು ಬೀರುತ್ತ ಪರಿಶುದ್ಧವಾದ ಸ್ಫಟಿಕ ಮಣಿಯಂತೆ ಪ್ರಕಾಶಮಾನನಾಗಿರುವನು. ॥೧೪-೧೫-೧೬॥

ವಾಮಾಂಕೇ ಸನ್ನಿಷಣ್ಣಾಸ್ಯ ದೇವೀ ಶ್ರೀಭುವನೇಶ್ವರೀ ॥೧೭॥

ನವರತ್ನಗಣಾಕೀರ್ಣಕಾಂಚೀದಾಮವಿರಾಜಿತಾ ।
ತಪ್ತಕಾಂಚನಸನ್ನದ್ಧವೈಡೂರ್ಯಾಂಗದಭೂಷಣಾ ॥೧೮॥

ಕನಚ್ಛ್ರೀಚಕ್ರತಾಟಂಕವಿಟಂಕವದನಾಂಬುಜಾ ।
ಲಲಾಟಕಾಂತಿವಿಭವವಿಜಿತಾರ್ಧಸುಧಾಕರಾ ॥೧೯॥

ಬಿಂಬಕಾಂತಿತಿರಸ್ಕಾರಿರದಚ್ಛದವಿರಾಜಿತಾ ।
ಲಸತ್ಕುಂಕುಮಕಸ್ತೂರೀತಿಲಕೋದ್ಭಾಸಿತಾನನಾ ॥೨೦॥

ದಿವ್ಯಚೂಡಾಮಣಿಸ್ಫಾರಚಂಚಚ್ಚಂದ್ರಕಸೂರ್ಯಕಾ ।
ಉದ್ಯತ್ಕವಿಸಮಸ್ವಚ್ಛನಾಸಾಭರಣಭಾಸುರಾ ॥೨೧॥

ಚಿಂತಾಕಲಂಬಿತಸ್ವಚ್ಛಮುಕ್ತಾಗುಚ್ಛವಿರಾಜಿತಾ ।
ಪ(ಪಾ)ಟೀರಪಂಕಕರ್ಪೂರಕುಂಕುಮಾಲಂಕೃತಸ್ತನೀ ॥೨೨॥

---

ಆ ಮಹೇಶ್ವರನ ಎಡಭಾಗದ ತೊಡೆಯ ಮೇಲೆ ಶ್ರೀಭುವನೇಶ್ವರೀದೇವಿಯು ಮಂಡಿಸಿರುವಳು. ಆ ದೇವಿಯು ನವರತ್ನ ಖಚಿತವಾದ ನಡುವಿನ ಪಟ್ಟಿಯನ್ನೂ ಪುಟವಿಟ್ಟ ಚಿನ್ನದಲ್ಲಿ ಕೆತ್ತಿದ ವೈಡೂರ್ಯ ರತ್ನದ ಭುಜಕೀರ್ತಿ ಎಂಬ ಆಭರಣವನ್ನೂ ಧರಿಸಿ ಶ್ರೀಚಕ್ರದಂತೆ ಹೊಳೆಯುತ್ತಿರುವ ಕಿವಿಯ ಓಲೆಗಳಿಂದ ಪ್ರಕಾಶಮಾನವಾದ ಸುಂದರವಾದ ಮುಖಕಮಲವುಳ್ಳವಳಾಗಿ ತನ್ನ ಹಣೆಯ ಕಾಂತಿಯಿಂದ ಅರ್ಧ ಚಂದ್ರನನ್ನು ಜಯಿಸುತ್ತಿರುವಳು. ॥೧೭-೧೮-೧೯॥

ತೊಂಡೆಯಹಣ್ಣಿನ ಕಾಂತಿಯನ್ನು ತಿರಸ್ಕರಿಸುವ ತುಟಿಗಳಿಂದ ಪ್ರಕಾಶಿಸುತ್ತಿರುವಳು. ಪ್ರಕಾಶಮಾನವಾದ ಕುಂಕುಮಕೇಸರೀ ಮತ್ತು ಕಸ್ತೂರಿಯ ತಿಲಕವನ್ನಿಟ್ಟಿರುವಳು. ರತ್ನಗಳಿಂದ ಮಾಡಿರುವ ಚಂದ್ರಸೂರ್ಯರಂತೆ ಹೊಳೆಯುತ್ತಿರುವ ಚೂಡಾಮಣಿಯನ್ನು ಧರಿಸಿರುವಳು. ಆಗತಾನೇ ಹುಟ್ಟುತ್ತಿರುವ ಶುಕ್ರನಕ್ಷತ್ರದಂತೆ ಶುದ್ಧವಾದ ಮೂಗುಬಟ್ಟಿನಿಂದ ಪ್ರಕಾಶಿಸುತ್ತಿರುವಳು. ॥೨೦-೨೧॥

ಚಿಂತಾಕವೆಂಬ ಕಂಠಾಭರಣದಲ್ಲಿ ಜೋಲಾಡುತ್ತಿರುವ ಮುತ್ತಿನ ಕುಚ್ಚುಗಳಿಂದ ಶೋಭಿಸುತ್ತಿರುವಳು. ಶ್ರೀಗಂಧ, ಪಚ್ಚಕರ್ಪೂರ, ಕುಂಕುಮಕೇಸರಿ, ಇವುಗಳಿಂದ ಅಲಂಕಾರವಮಾಡಿಕೊಂಡ ಸ್ತನಗಳುಳ್ಳವಳು. ವಿಚಿತ್ರವಾದ ಬಗೆ ಬಗೆಯ

ವಿಚಿತ್ರವಿವಿಧಾಕಲ್ಪಕಂಬುಸಂಕಾಶಕಂಧರಾ ।
ದಾಡಿಮೀಫಲಬೀಜಾಭದಂತಪಙ್ಕ್ತಿವಿರಾಜಿತಾ ॥೨೩॥

ಅನರ್ಘ್ಯರತ್ನಘಟಿತಮುಕುಟಾಂಚಿತಮಸ್ತಕಾ ।
ಮತ್ತಾಲಿಮಾಲಾವಿಲಸದಲಕಾಢ್ಯಮುಖಾಂಬುಜಾ ॥೨೪॥

ಕಲಂಕಕಾರ್ಶ್ಯನಿರ್ಮುಕ್ತಶರಚ್ಚಂದ್ರನಿಭಾನನಾ ।
ಜಾಹ್ನವೀಸಲಿಲಾವರ್ತಶೋಭಿನಾಭಿವಿಭೂಷಿತಾ ॥೨೫॥

ಮಾಣಿಕ್ಯಶಕಲಾಬದ್ಧಮುದ್ರಿಕಾಂಗುಲಿಭೂಷಿತಾ ।
ಪುಂಡರೀಕದಲಾಕಾರನಯನತ್ರಯಸುಂದರೀ ॥೨೬॥

ಕಲ್ಪಿತಾಚ್ಛಮಹಾರಾಗಪದ್ಮರಾಗೋಜ್ಜ್ವಲಪ್ರಭಾ ।
ರತ್ನಕಿಂಕಿಣಿಕಾಯುಕ್ತರತ್ನಕಂಕಣಶೋಭಿತಾ ॥೨೭॥

ಮಣಿಮುಕ್ತಾಸರಾಪಾರಲಸತ್ಪದಕಸಂತತಿಃ ।
ರತ್ನಾಂಗುಲಿಪ್ರವಿತತಪ್ರಭಾಜಾಲಲಸತ್ಕರಾ ॥೨೮॥

---

ಅಲಂಕಾರಗಳಿಂದ ಕೂಡಿದ ಶಂಖಕ್ಕೆ ಸಮಾನವಾದ ಕುತ್ತಿಗೆಯುಳ್ಳವಳು. ದಾಳಿಂಬೆಯ ಬೀಜಕ್ಕೆ ಸಮಾನವಾದ ಹಲ್ಲಿನ ಸಾಲಿನಿಂದ ಶೋಭಿಸುತ್ತಿರುವಳು. ಬಹಳ ಬೆಲೆಯಾದ ರತ್ನಗಳನ್ನು ಕೆತ್ತಿದ ಕಿರೀಟವನ್ನು ತಲೆಯಲ್ಲಿ ಧರಿಸಿರುವಳು. ಮದಿಸಿದ ದುಂಬಿಗಳ ಸಮೂಹದಂತೆ ಪ್ರಕಾಶಿಸುತ್ತಿರುವ ಮುಂಗುರುಳುಗಳಿಂದ ಕೂಡಿದ ಮುಖಕಮಲವುಳ್ಳವಳು. ||೨೨-೨೩-೨೪||

ಕಲಂಕವೂ, ಕ್ಷಯವೂ ಇಲ್ಲದ ಶರದೃತುವಿನ ಚಂದ್ರನಂತೆ ಮುಖವುಳ್ಳವಳು. ಗಂಗಾನದಿಯಲ್ಲಿರುವ ಸುಳಿಯಂತಿರುವ ಹೊಕ್ಕುಳಿನಿಂದ ಅಲಂಕೃತಳು. ರತ್ನಗಳನ್ನು ಕೆತ್ತಿದ ಮುದ್ರೆಯುಂಗುರವನ್ನು ಬೆರಲುಗಳಲ್ಲಿ ಧರಿಸಿರುವಳು. ಕಮಲದ ಎಸಳಿನಂತಿರುವ ಮೂರು ಕಣ್ಣುಗಳಿಂದ ಸುಂದರವಾಗಿರುವಳು. ಸಾಣೇಹಿಡಿದ ಪದ್ಮರಾಗಮಣಿಯ ಕಾಂತಿಯಂತೆ ಪ್ರಕಾಶಮಾನವಾದ ಕಾಂತಿಯುಳ್ಳವಳು. ರತ್ನದ ಕಿರುಗಂಟೆಗಳಿಂದ ಕೂಡಿದ ರತ್ನದ ಕೈಕನ್ನಡಿಯನ್ನು ಧರಿಸಿರುವಳು. ||೨೫-೨೬-೨೭||

ರತ್ನದ ಮತ್ತು ಮುತ್ತಿನ ಹಾರದಲ್ಲಿರುವ ಬಹಳ ಬೆಲೆಯಾದ ಪದಕಗಳನ್ನು ಧರಿಸಿರುವಳು. ರತ್ನದುಂಗುರಗಳ ಕಾಂತಿಯಿಂದ ಶೋಭಿಸುತ್ತಿರುವ ಕೈಗಳುಳ್ಳವಳು.

ಕಂಚುಕೀಗುಂಫಿತಾಪಾರನಾನಾರತ್ನ ತತಿದ್ಯುತಿಃ ।
ಮಲ್ಲಿಕಾಮೋದಿಧಮ್ಮಿಲ್ಲ ಮಲ್ಲಿಕಾಲಿಸರಾವೃತಾ ॥೨೯॥

ಸುವೃತ್ತನಿಬಿಡೋತ್ತುಂಗಕುಚಭಾರಾಲಸಾ ಶಿವಾ ।
ವರಪಾಶಾಂಕುಶಾಭೀತಿಲಸದ್ಬಾಹುಚತುಷ್ಟಯಾ ॥೩೦॥

ಸರ್ವಶೃಂಗಾರವೇಷಾಢ್ಯಾ ಸುಕುಮಾರಾಂಗ ವಲ್ಲರೀ ।
ಸೌಂದರ್ಯಧಾರಾಸರ್ವಸ್ವಾ ನಿರ್ವ್ಯಾಜಕರುಣಾಮಯೀ ॥೩೧॥

ನಿಜಸಲ್ಲಾಪಮಾಧುರ್ಯವಿನಿರ್ಭರ್ತ್ಸಿತಕಚ್ಛಪೀ ।
ಕೋಟಿಕೋಟಿರವೀಂದೂನಾಂ ಕಾಂತಿಂ ಯಾ ಬಿಭ್ರತೀ ಪರಾ ॥೩೨॥

ನಾನಾಸಖೀಭಿರ್ದಾಸೀಭಿಸ್ತಥಾ ದೇವಾಂಗನಾದಿಭಿಃ ।
ಸರ್ವಾಭಿರ್ದೇವತಾಭಿಸ್ತು ಸಮಂತಾತ್ಪರಿವೇಷ್ಟಿತಾ ॥೩೩॥

---

ಕಂಚುಕದಂತಿರುವ ಒಟ್ಟಿಗೇ ಸೇರಿದ ಅನೇಕ ರತ್ನಗಳ ಕಾಂತಿಯಿಂದ ಕೂಡಿದವಳು. ||೨೮||

ಮಲ್ಲಿಗೆಯ ಸುವಾಸನೆಯಿಂದ ಕೂಡಿದ ಜಡೆಯಲ್ಲಿ ಮಲ್ಲಿಗೆಯ ಸರವನ್ನು ಮುಡಿದಿರುವಳು. ಗುಂಡಾಗಿಯೂ, ಒತ್ತಾಗಿಯೂ, ವಿಸ್ತಾರವಾಗಿಯೂ ಇರುವ ಸ್ತನಗಳಿಂದ ಮಂಗಳಕರಳಾಗಿರುವಳು. ನಾಲ್ಕು ಕೈಗಳಲ್ಲಿಯೂ ಪಾಶ, ಅಂಕುಶ, ವರದ, ಅಭಯ ಮುದ್ರೆಗಳನ್ನು ಧರಿಸಿರುವಳು. ||೨೯-೩೦||

ಸಮಸ್ತ ಶೃಂಗಾರರಸಾಶ್ರಯವಾದ ವೇಷಗಳಿಂದ ಕೂಡಿ ಮೃದುವಾದ ಬಳ್ಳಿಯಂತಿರುವ ಶರೀರವುಳ್ಳವಳಾಗಿ ಸಮಸ್ತ ಸೌಂದರ್ಯಗಳಿಗೂ ಆಶ್ರಯಸ್ವರೂಪಳಾಗಿ, ಯಾವ ಕಾರಣವೂ ಇಲ್ಲದೇ ಸಕಲ ಪ್ರಾಣಿಗಳಲ್ಲಿಯೂ ದಯೆಯನ್ನು ತೋರಿಸತಕ್ಕವಳಾಗಿರುವಳು. ||೩೧||

ತನ್ನ ಮಾತಿನ ಇಂಪಾದ ಧ್ವನಿಯಿಂದ ಕಚ್ಛಪೀ ಎಂಬ ವೀಣೆಯ (ಹೆಣ್ಣು ಆಮೆಯ) ಧ್ವನಿಯನ್ನು ತಿರಸ್ಕರಿಸುತ್ತಿರುವಳು. ಅನೇಕ ಸೂರ್ಯಚಂದ್ರರ ಕಾಂತಿಯನ್ನು ಧರಿಸಿದವಳಾಗಿರುವಳು. ||೩೨||

ಅನೇಕ ಸಖಿಯರಿಂದಲೂ, ದಾಸಿಯರಿಂದಲೂ, ದೇವಸ್ತ್ರೀಯರಿಂದಲೂ ಸಮಸ್ತದೇವತೆಗಳಿಂದಲೂ, ಸುತ್ತಲೂ ಸುತ್ತುವರಿಯಲ್ಪಟ್ಟಿರುವಳು. ||೩೩||

ಇಚ್ಛಾಶಕ್ತ್ಯಾ ಜ್ಞಾನಶಕ್ತ್ಯಾ ಕ್ರಿಯಾಶಕ್ತ್ಯಾ ಸಮನ್ವಿತಾ ।
ಲಜ್ಜಾ ತುಷ್ಟಿಸ್ತಥಾ ಪುಷ್ಟಿಃ ಕೀರ್ತಿಃ ಕಾಂತಿಃ ಕ್ಷಮಾ ದಯಾ ॥೩೪॥

ಬುದ್ಧಿರ್ಮೇಧಾ ಸ್ಮೃತಿರ್ಲಕ್ಷ್ಮೀಃ ಮೂರ್ತಿಮತ್ಯೋಽಂಗನಾಃ ಸ್ಮೃತಾಃ ।
ಜಯಾ ಚ ವಿಜಯಾಚೈವಾಪ್ಯಜಿತಾ ಚಾಪರಾಜಿತಾ ॥೩೫॥

ನಿತ್ಯಾ ವಿಲಾಸಿನೀ ದೋಗ್ಧ್ರೀ ತ್ವಘೋರಾ ಮಂಗಲಾ ನವಾ ।
ಪೀಠಶಕ್ತಯ ಏತಾಸ್ತು ಸೇವಂತೇ ಯಾಂ ಪರಾಂಬಿಕಾಂ ೩೬॥

ಯಸ್ಯಾಸ್ತು ಪಾರ್ಶ್ವಭಾಗೇ ಸ್ತೋ ನಿಧೀಶೌ ಶಂಖಪದ್ಮಕೌ ।
ನವರತ್ನವಹಾ ನದ್ಯಸ್ತಥಾ ವೈ ಕಾಂಚನಸ್ರವಾಃ ॥೩೭॥

ಸಪ್ತಧಾತುವಹಾ ನದ್ಯೋ ನಿಧಿಭ್ಯಾಂ ತು ವಿನಿರ್ಗತಾಃ
ಸುಧಾಸಿಂಧ್ವಂತಗಾಮಿನ್ಯಸ್ತಾಃ ಸರ್ವಾ ನೃಪಸತ್ತಮ ॥೩೮॥

ಸಾ ದೇವೀ ಭುವನೇಶಾನೀ ತದ್ವಾಮಾಂಕೇ ವಿರಾಜತೇ ।
ಸರ್ವೇಶತ್ವಂ ಮಹೇಶಸ್ಯ ಯತ್ಸಂಗಾದೇವ ನಾನ್ಯಥಾ ॥೩೯॥

---

ಆಕಾರವನ್ನು ಧರಿಸಿದ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ಲಜ್ಜಾ, ತುಷ್ಟಿ, ಪುಷ್ಟಿ, ಕೀರ್ತಿ, ಕಾಂತಿ, ಕ್ಷಮಾ, ದಯಾ, ಬುದ್ಧಿ, ಮೇಧಾ, ಸ್ಮೃತಿ, ಲಕ್ಷ್ಮೀ, ಎಂಬ ಸ್ತ್ರೀಯರಿಂದ ಕೂಡಿರುವಳು. ॥೩೪॥

ಜಯಾ, ವಿಜಯಾ, ಅಜಿತಾ, ಅಪರಾಜಿತಾ, ನಿತ್ಯಾ, ವಿಲಾಸಿನೀ, ದೋಗ್ಧ್ರೀ, ಅಘೋರಾ, ಮಂಗಲಾ, ಎಂಬ ಒಂಬತ್ತು ಪೀಠಶಕ್ತಿದೇವಿಯರು ಆ ಭುವನೇಶ್ವರೀ ದೇವಿಯನ್ನು ಸೇವಿಸುತ್ತಿರುವರು. ॥೩೫-೩೬॥

ಎಲೈ ರಾಜಶ್ರೇಷ್ಠನೇ, ಆ ಭುವನೇಶ್ವರೀದೇವಿಯ ಪಾರ್ಶ್ವಭಾಗಗಳಲ್ಲಿ ಶಂಖ, ಪದ್ಮಗಳೆಂಬ ನಿಧಿಗಳಿರುವುವು. ಆ ನಿಧಿಗಳಿಂದ ನವರತ್ನಗಳನ್ನೂ ಚಿನ್ನವನ್ನೂ ಸಪ್ತ ಧಾತುಗಳನ್ನೂ ಪ್ರವಾಹರೂಪದಲ್ಲಿ ತರುವ ನದಿಗಳು ಅಮೃತಸಮುದ್ರದವರೆಗೂ ಹರಿದು ಹೋಗುವುವು. ಇದರಿಂದ ನಡುವೆ ಇರುವ ಪ್ರಾಕಾರದಲ್ಲಿ ನದಿಗಳು ಹರಿದು ಹೋಗುವುದಕ್ಕೆ ದಾರಿಗಳೂ ಇರುವುವೆಂದು ಹೇಳಿದಂತಾಯಿತು. ॥೩೭-೩೮॥

ಆ ಭುವನೇಶ್ವರೀದೇವಿಯು ಆ ಭುವನೇಶ್ವರನ ಎಡಭಾಗದ ತೊಡೆಯಮೇಲೆ ಪ್ರಕಾಶಿಸುತ್ತ ಕುಳಿತಿರುವಳು. ಆ ದೇವಿಯ ಸಂಗದಿಂದಲೇ ಮಹೇಶ್ವರನಿಗೂ ಸರ್ವೇಶ್ವರತ್ವವು ಬಂದಿರುವುದು. ॥೩೯॥

**ಚಿಂತಾಮಣಿಗೃಹಸ್ಯಾಸ್ಯ ಪ್ರಮಾಣಂ ಶೃಣು ಭೂಮಿಪ ।**
**ಸಹಸ್ರಯೋಜನಾಯಾಮಂ ಮಹಾಂತಸ್ತತ್ಪ್ರಚಕ್ಷತೇ ॥೪೦॥**

**ತದುತ್ತರೇ ಮಹಾಸಾಲಾಃ ಪೂರ್ವಸ್ಮಾದ್ದ್ವಿಗುಣಾಃ ಸ್ಮೃತಾಃ ।**
**ಅಂತರಿಕ್ಷಗತಂ ತ್ವೇತನ್ನಿರಾಧಾರಂ ವಿರಾಜತೇ ॥೪೧॥**

**ಸಂಕೋಚಶ್ಚ ವಿಕಾಸಶ್ಚ ಜಾಯೇತೇಽಸ್ಯ ನಿರಂತರಂ ।**
**ಪಟವತ್ಕಾರ್ಯವಶತಃ ಪ್ರಲಯೇ ಸರ್ಜನೇ ತಥಾ ॥೪೨॥**

**ಸಾಲಾನಾಂ ಚೈವ ಸರ್ವೇಷಾಂ ಸರ್ವಕಾಂತಿಪರಾವಧಿ ।**
**ಚಿಂತಾಮಣಿಗೃಹಂ ಪ್ರೋಕ್ತಂ ಯತ್ರ ದೇವೀ ಮಹೋಮಯೀ ॥೪೩॥**

---

ಎಲೈ ರಾಜನೇ, ಈ ಚಿಂತಾಮಣಿ ಗೃಹವು ಸಾವಿರಗಾವುದ ವಿಸ್ತಾರವಾಮುದಾಗಿರುವುದು. ಆದರಿಂದ ಮುಂದೆ ಇರುವ ದೊಡ್ಡದೊಡ್ಡ ಪ್ರಾಕಾರಗಳು ಹಿಂದಿನವುಗಳಿಗಿಂತ ಎರಡರಷ್ಟು ದೊಡ್ಡದಾಗಿರುವುವು. ಈ ಮಣಿದ್ವೀಪವು ಯಾವ ಆಧಾರವೂ ಇಲ್ಲದೇ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವುದು. ॥೪೦-೪೧॥

ಈ ಮಣಿದ್ವೀಪಕ್ಕೆ ಉತ್ಪತ್ತಿಯಾಗಲೀ ನಾಶವಾಗಲೀ ಇರುವುದಿಲ್ಲ. ಕಾರ್ಯವಶದಿಂದ ವಸ್ತ್ರವು ಹೇಗೆ ಸಂಕೋಚವಿಕಾಸವನ್ನು ಹೊಂದುವುದೋ ಆದರಂತೆ ಈ ಮಣಿದ್ವೀಪವು ಪ್ರಲಯಕಾಲದಲ್ಲಿ ಸಂಕೋಚವನ್ನೂ ಸೃಷ್ಟಿಕಾಲದಲ್ಲಿ ವಿಕಾಸವನ್ನೂ ಪಡೆಯುತ್ತಿರುವುದು. ಕಾರ್ಯವಶದಿಂದ ಎಂದರೆ ಪ್ರತಿಯೊಂದು ಬ್ರಹ್ಮಾಂಡದಲ್ಲಿಯೂ ಇರುವ ಅನೇಕ ಭಕ್ತರ ಅಭಿವೃದ್ಧಿಯಿಂದಲೂ ಮತ್ತು ದೇವತೆಗಳ ಅಭಿವೃದ್ಧಿಯಿಂದಲೂ ವಿಕಾಸವಾಗುವುದು. ಭಕ್ತರ ಮತ್ತು ದೇವಾದಿಗಳ ಅಭಿವೃದ್ಧಿಯಿಲ್ಲದಿದ್ದರೆ ಸಂಕೋಚವಾಗುವುದು. ಒಟ್ಟಿನಲ್ಲಿ ಸೃಷ್ಟಿಪ್ರಲಯಗಳು ಪ್ರಾಣಿಗಳ ಧರ್ಮಾಧರ್ಮಗಳ ಫಲಪರಿಪಾಕದಿಂದುಂಟಾಗುವುವೆಂದು ಅಭಿಪ್ರಾಯವು. ॥೪೨॥

ಮಣಿದ್ವೀಪದಲ್ಲಿರುವ ಸಮಸ್ತ ಪ್ರಾಕಾರಗಳ ಕಾಂತಿಯೂ ಚಿಂತಾಮಣಿ ಗೃಹದಲ್ಲಿ ವ್ಯಕ್ತವಾಗಿ ತೋರುತ್ತಿರುವುದು. ಅಲ್ಲಿ ಶ್ರೀ ಭುವನೇಶ್ವರೀ ದೇವಿಯು ಮಹೋತ್ಸವ (ತೇಜೋ) ರೂಪವಾಗಿ ಪ್ರಕಾಶಿಸುತ್ತಿರುವಳು. ॥೪೩॥

ಯೇ ಯೇ ಉಪಾಸಕಾಃ ಸಂತಿ ಪ್ರತಿಬ್ರಹ್ಮಾಂಡವರ್ತಿನಃ ।
ದೇವೇಷು ನಾಗಲೋಕೇಷು ಮನುಷ್ಯೇಷ್ವಿತರೇಷು ಚ ॥೪೪॥

ಶ್ರೀದೇವ್ಯಾಸ್ತೇ ಚ ಸರ್ವೇಽಪಿ ವ್ರಜಂತ್ಯತ್ರೈವ ಭೂಮಿಪ ।
ದೇವೀಕ್ಷೇತ್ರೇ ಯೇ ತ್ಯಜಂತಿ ಪ್ರಾಣಾನ್ದೇವ್ಯರ್ಚನೇ ರತಾಃ ॥೪೫॥

ತೇ ಸರ್ವೇ ಯಾಂತಿ ತತ್ರೈವ ಯತ್ರ ದೇವೀ ಮಹೋತ್ಸವಾ ।
ಘೃತಕುಲ್ಯಾ ದುಗ್ಧಕುಲ್ಯಾ ದಧಿಕುಲ್ಯಾ ಮಧುಸ್ರವಾಃ ॥೪೬॥

ಸ್ಯಂದಂತಿ ಸರಿತಃ ಸರ್ವಾಸ್ತಥಾಽಮೃತವಹಾಃ ಪರಾಃ ।
ದ್ರಾಕ್ಷಾರಸವಹಾಃ ಕಾಶ್ಚಿಜ್ಜಂಬೂರಸವಹಾಃ ಪರಾಃ ॥೪೭॥

ಆಮ್ರೇಕ್ಷುರಸವಾಹಿನ್ಯೋ ನದ್ಯಸ್ತಾಸ್ತು ಸಹಸ್ರಶಃ ।
ಮನೋರಥಫಲಾ ವೃಕ್ಷಾ ವಾಪ್ಯಃ ಕೂಪಾಸ್ತಥೈವ ಚ ॥೪೮॥
ಯಥೇಷ್ಟಪಾನಫಲದಾ ನ ನ್ಯೂನಂ ಕಿಂಚಿದಸ್ತಿ ಹಿ ।

---

ಜನಮೇಜಯರಾಜನೇ, ಕೇಳು. ಪ್ರತಿಯೊಂದು ಬ್ರಹ್ಮಾಂಡದಲ್ಲಿಯೂ ದೇವ, ನಾಗ, ಮನುಷ್ಯ ಲೋಕಗಳಲ್ಲಿಯೂ ಇತರ ಲೋಕಗಳಲ್ಲಿಯೂ ಶ್ರೀ ಭುವನೇಶ್ವರೀ ದೇವಿಯ ಉಪಾಸಕರು ಯಾರು ಯಾರು ಇರುವರೋ ಅವರೆಲ್ಲರೂ ಶರೀರತ್ಯಾಗ ಮಾಡಿದ ಮೇಲೆ ಈ ಮಣಿದ್ವೀಪಕ್ಕೆ ಬರುವರು. ॥೪೪॥

ಏಳನೆಯ ಸ್ಕಂದದಲ್ಲಿ ಹೇಳಿದ ದೇವಿಯ ಕ್ಷೇತ್ರಗಳಲ್ಲಿ ದೇವಿಯ ಪೂಜೆಯಲ್ಲಿ ಆಸಕ್ತರಾದ ಯಾವ ಜನರು ಪ್ರಾಣತ್ಯಾಗ ಮಾಡುವರೋ ಅವರೆಲ್ಲರೂ ಯಾವಾಗಲೂ ದೇವಿಯ ಮಹೋತ್ಸವವು ನಡೆಯುತ್ತಿರುವ ಮಣಿದ್ವೀಪಕ್ಕೆ ಬರುವರು. ॥೪೫॥

ಆ ಮಣಿದ್ವೀಪದಲ್ಲಿ ತುಪ್ಪ, ಹಾಲು, ಮೊಸರು, ಜೇನು, ಅಮೃತ ಇವುಗಳ ಕಾಲುವೆಗಳು ಹರಿಯುತ್ತಿರುವುವು. ದ್ರಾಕ್ಷಿ, ನೇರಲೇ ಹಣ್ಣು, ಮಾವಿನ ಹಣ್ಣು, ಕಬ್ಬು ಇವುಗಳ ರಸದ ನದಿಗಳು ಸಾವಿರಾರು ಹರಿಯುತ್ತಿರುವುವು. ॥೪೬-೪೭॥

ಅಲ್ಲಿಯ ಮರಗಳು ಭಕ್ತರು ಅಪೇಕ್ಷಿಸಿದ ಫಲಗಳನ್ನು ಕೊಡುವುವು. ಇಳಿವ ಭಾವಿಗಳೂ, ಸೇದುವ ಭಾವಿಗಳೂ, ಅಪೇಕ್ಷಿಸಿದ ಪಾನೀಯಗಳನ್ನು ಕೊಡುವುವು. ಅಲ್ಲಿ ಇಲ್ಲವೆಂಬುದು ಯಾವುದೂ ಇರುವುದಿಲ್ಲ. ॥೪೮॥

ನ ರೋಗಪಲಿತಂ ವಾಽಪಿ ಜರಾ ವಾಽಪಿ ಕದಾಚನ ॥೪೯॥

ನ ಚಿಂತಾ ನಚ ಮಾತ್ಸರ್ಯಂ ಕಾಮಕ್ರೋಧಾದಿಕಂ ತಥಾ ।
ಸರ್ವೇ ಯುವಾನಃ ಸಸ್ತ್ರೀಕಾಃ ಸಹಸ್ರಾದಿತ್ಯವರ್ಚಸಃ ॥೫೦॥

ಭಜಂತಿ ಸತತಂ ದೇವೀಂ ತತ್ರ ಶ್ರೀಭುವನೇಶ್ವರೀಂ ।
ಕೇಚಿತ್ಸಲೋಕತಾಪನ್ನಾಃ ಕೇಚಿತ್ಸಾಮೀಪ್ಯತಾಂ ಗತಾಃ ॥೫೧॥

ಸರೂಪತಾಂ ಗತಾಃ ಕೇಚಿತ್ಸಾರ್ಷ್ಟಿತಾಂ ಚ ಪರೇ ಗತಾಃ ।
ಯಾ ಯಾಸ್ತು ದೇವತಾಸ್ತತ್ರ ಪ್ರತಿಬ್ರಹ್ಮಾಂಡವರ್ತಿನಾಂ ॥೫೨॥

ಸಮಷ್ಟಯಃ ಸ್ಥಿತಾಸ್ತಾಸ್ತು ಸೇವಂತೇ ಜಗದೀಶ್ವರೀಂ ।
ಸಪ್ತಕೋಟಿಮಹಾಮಂತ್ರಾ ಮೂರ್ತಿಮಂತ ಉಪಾಸತೇ ॥೫೩॥

ಮಹಾವಿದ್ಯಾಶ್ಚ ಸಕಲಾಃ ಸಾಮ್ಯಾವಸ್ಥಾತ್ಮಿಕಾಂ ಶಿವಾಂ ।
ಕಾರಣಬ್ರಹ್ಮರೂಪಾಂ ತಾಂ ಮಾಯಾಶಬಲವಿಗ್ರಹಾಂ ॥೫೪॥

---

ಅಲ್ಲಿರುವವರಿಗೆ ರೋಗವಾಗಲೀ, ಕೂದಲು ಬೆಳ್ಳಗಾಗುವುದಾಗಲೀ, ಮುಪ್ಪಾಗಲೀ, ಎಂದಿಗೂ ಬರುವುದಿಲ್ಲ. ಚಿಂತೆ, ಮಾತ್ಸರ್ಯ, ಕಾಮಕ್ರೋಧ ಮುಂತಾದ ದುಷ್ಟಭಾವಗಳೆಂದಿಗೂ ಬರುವುದಿಲ್ಲ. ಸಮಸ್ತರೂ ಪ್ರಾಯದವರಾಗಿ ಸ್ತ್ರೀಯರೊಡನೆ ಕೂಡಿ ಸೂರ್ಯನಂತೆ ತೇಜಸ್ಸುಳ್ಳವರಾಗಿ ಅಲ್ಲಿ ಶ್ರೀಭುವನೇಶ್ವರೀದೇವಿಯನ್ನು ಯಾವಾಗಲೂ ಪೂಜಿಸುತ್ತಿರುವರು. ಅವರಲ್ಲಿ ಕೆಲವರು ಸಾಲೋಕ್ಯಮುಕ್ತಿಯನ್ನೂ, ಕೆಲವರು ಸಾಮೀಪ್ಯಮುಕ್ತಿಯನ್ನೂ, ಮತ್ತೆ ಕೆಲವರು ಸಾರೂಪ್ಯಮುಕ್ತಿಯನ್ನೂ ಇನ್ನು ಕೆಲವರು ಸಾಯುಜ್ಯಮುಕ್ತಿಯನ್ನೂ ಪಡೆದಿರುವರು. ॥೪೯-೫೦-೫೧॥

ಆ ಮಣಿದ್ವೀಪದಲ್ಲಿ ಯಾವ ದೇವತೆಗಳಿರುವರೋ ಅವರು ಪ್ರತಿಯೊಂದು ಬ್ರಹ್ಮಾಂಡದಲ್ಲಿರುವ ದೇವತೆಗಳ ಸಮಷ್ಟಿರೂಪರಾಗಿ ಜಗದೀಶ್ವರಿಯಾದ ಭವನೇಶ್ವರೀ ದೇವಿಯನ್ನು ಸೇವಿಸುತ್ತಿರುವರು. ॥೫೨॥

ಮಾಯಾಶಬಲವಾದ ಕಾರಣಬ್ರಹ್ಮಸ್ವರೂಪಳೂ, ಸತ್ವರಜಸ್ತಮೋಗುಣದ ಸಾಮ್ಯಾವಸ್ಥಾಸ್ವರೂಪಳೂ ಆದ ಮಂಗಳಕರಳಾದ ದೇವಿಯನ್ನು ಏಳು ಕೋಟಿ ಮಹಾಮಂತ್ರಗಳೂ ಸಮಸ್ತ ಮಹಾವಿದ್ಯೆಗಳೂ, ಆಕಾರವನ್ನು ಧರಿಸಿ ಸೇವಿಸುತ್ತಿರುವುವು. ॥೫೩-೫೪॥

ಇತ್ಥಂ ರಾಜನ್ಮಯಾ ಪ್ರೋಕ್ತಂ ಮಣಿದ್ವೀಪಂ ಮಹತ್ತರಂ ।
ನ ಸೂರ್ಯಚಂದ್ರೌ ನೋ ವಿದ್ಯುತ್ಕೋಟಯೋಽಗ್ನಿಸ್ತಥೈವಚ ॥೫೫॥

ಏತಸ್ಯ ಭಾಸಾ ಕೋಟ್ಯಂಶಕೋಟ್ಯಂಶೇನಾಪಿ ತೇ ಸಮಾಃ ।
ಕ್ವಚಿದ್ವಿದ್ರುಮಸಂಕಾಶಂ ಕ್ವಚಿನ್ಮರಕತಚ್ಛವಿಂ ॥೫೬॥

ವಿ(ಉ)ದ್ಯುದ್ಭಾನುಸಮಚ್ಛಾಯಂ ಮಧ್ಯಸೂರ್ಯಸಮಂ ಕ್ವಚಿತ್ ।
ವಿದ್ಯುತ್ಕೋಟಿಮಹಾಧಾರಾಸಾರಕಾಂತಿತತಂ ಕ್ವಚಿತ್ ॥೫೭॥

ಕ್ವಚಿತ್ಸಿಂಧೂರನೀಲೇಂದ್ರಮಾಣಿಕ್ಯಸದೃಶಚ್ಛವಿ ।
ಹೀರಸಾರಮಹಾಗರ್ಭಧಗದ್ಧಗಿತದಿಕ್ತಟಂ ॥೫೮॥

ಕಾಂತ್ಯಾ ದಾವಾನಲಸಮಂ ತಪ್ತಕಾಂಚನಸನ್ನಿಭಂ ।
ಕ್ವಚಿಚ್ಚಂದ್ರೋಪಲೋದ್ಗಾರಂ ಸೂರ್ಯೋದ್ಗಾರಂ ಚ ಕುತ್ರಚಿತ್ ॥೫೯॥

ರತ್ನಶೃಂಗಿಸಮಾಯುಕ್ತಂ ರತ್ನಪ್ರಾಕಾರಗೋಪುರಂ ।
ರತ್ನಪತ್ರೈ ರತ್ನಫಲೈರ್ವೃಕ್ಷೈಶ್ಚ ಪರಿಮಂಡಿತಂ ॥೬೦॥

---

ಎಲೈ ರಾಜನೇ, ಈ ರೀತಿಯಲ್ಲಿ ದೊಡ್ಡದಾದ ಮಣಿದ್ವೀಪವನ್ನು ವರ್ಣಿಸಿರುವೆನು. ಸೂರ್ಯ ಚಂದ್ರರೂ, ಅನೇಕ ಮಿಂಚುಗಳೂ, ಅಗ್ನಿಯೂ, ಆ ಮಣಿದ್ವೀಪದ ಪ್ರಕಾಶದ ಕೋಟಿಭಾಗಗಳಲ್ಲಿ ಒಂದು ಭಾಗಕ್ಕೂ ಸಮಾನವಾಗಲಾರರು. ॥೫೫॥

ಒಂದು ಕಡೆಯಲ್ಲಿ ಹವಳದ ಕಾಂತಿ, ಮತ್ತೊಂದುಕಡೆಯಲ್ಲಿ ಮರಕತ ರತ್ನದ ಕಾಂತಿ ; ಹೀಗೆಯೇ ಒಂದೊಂದು ಕಡೆಯಲ್ಲಿ ಮಿಂಚು, ಸಂಧ್ಯಾಸೂರ್ಯ, ಮಧ್ಯಾಹ್ನದ ಸೂರ್ಯ, ಅನೇಕ ಮಿಂಚುಗಳ ಮಳೆಯ ಕಾಂತಿ, ಚಂದ್ರದ ಬಣ್ಣ, ಇಂದ್ರನೀಲ ರತ್ನದ ಬಣ್ಣ, ಕೆಂಪು, ರತ್ನ, ಹೀರವೆಂಬ ರತ್ನ ಇವುಗಳ ಕಾಂತಿಯಿಂದ ಪ್ರಕಾಶಮಾನವಾದ ದಿಗಂತ ಉಳ್ಳದ್ದಾಗಿರುವುದು. ॥೫೬-೫೭-೫೮॥

ಕಾಡುಗಿಚ್ಚು, ಪುಟವಿಟ್ಟ ಚಿನ್ನ, ಚಂದ್ರಕಾಂತ, ಸೂರ್ಯಕಾಂತಶಿಲೆಗಳು ಇವುಗಳ ಸಮಾನವಾದ ಕಾಂತಿಗಳು ಆ ಮಣಿದ್ವೀಪದ ಕೆಲವೆಡೆಗಳಲ್ಲಿರುವುವು.॥೫೯॥

ಅದು ರತ್ನಗಳಿಂದ ಮಾಡಿದ ಪ್ರಾಕಾರಗೋಪುರಕಲಶಗಳಿಂದ ಕೂಡಿರುವುದು. ನವಿಲುಗಳು ಕುಣಿಯುತ್ತಿರುವುವು. ಪಾರಿವಾಳಗಳು ಧ್ವನಿಮಾಡುತ್ತಿರುವುವು.

ನೃತ್ಯನ್ಮಯೂರಸಂಘೈಶ್ಚ ಕಪೋತರಣಿತೋಜ್ಜ್ವಲಂ ।
ಕೋಕಿಲಾಕಾಕಲೀಲಾಪೈಃ ಶುಕಲಾಪೈಶ್ಚ ಶೋಭಿತಂ ॥೬೧॥

ಸುರಮ್ಯರಮಣೀಯಾಂಬುಲಕ್ಷಾವಧಿಸರೋವೃತಂ ।
ತನ್ಮಧ್ಯಭಾಗವಿಲಸದ್ವಿಕಚದ್ರತ್ನಪಂಕಜೈಃ ॥೬೨॥

ಸುಗಂಧಿಭಿಃ ಸಮಂತಾತ್ತು ವಾಸಿತಂ ಶತಯೋಜನಂ ।
ಮಂದಮಾರುತಸಂಭಿನ್ನಚಲದ್ದ್ರುಮಸಮಾಕುಲಂ ॥೬೩॥

ಚಿಂತಾಮಣಿಸಮೂಹಾನಾಂ ಜ್ಯೋತಿಷಾ ವಿತತಾಂಬರಂ ।
ರತ್ನಪ್ರಭಾಭಿರಭಿತೋ ಧಗದ್ಧಗಿತದಿಕ್ತಟಂ ॥೬೪॥

ವೃಕ್ಷವ್ರಾತಮಹಾಗಂಧವಾತವ್ರಾತಸುಪೂರಿತಂ ।
ಧೂಪಧೂಪಾಯಿತಂ ರಾಜನ್ಮಣಿದೀಪಾಯುತೋಜ್ಜ್ವಲಂ ॥೬೫॥

---

ಕೋಗಿಲೆಗಳು ಮೃದುವಾದ ಮಧುರವಾದ ಧ್ವನಿಮಾಡುತ್ತಿರುವುವು. ಗಿಳಿಗಳು ಮಾತನಾಡುತ್ತಿರುವುವು. ಇವುಗಳಿಂದ ಅಲಂಕೃತವಾಗಿರುವುದು. ॥೬೦-೬೧॥

ಉತ್ತಮವಾದ ಮನೋಹರವಾದ ನೀರಿನಿಂದ ತುಂಬಿದ ಅನೇಕ ಸರೋವರಗಳಿಂದ ಕೂಡಿ ಅವುಗಳ ನಡುವೆ ಪ್ರಕಾಶವಾಗಿ ಅರಳಿದ ರತ್ನದ ಕಮಲಗಳಿಂದ ಹೊರಟ ಸುವಾಸನೆಯಿಂದ ಸುತ್ತಲೂ ನೂರು ಗಾವುದಗಳವರೆಗೆ ಸುವಾಸನೆಯಿಂದ ಕೂಡಿರುವುದು. ಮೆಲ್ಲಗೆ ಬೀಸುತ್ತಿರುವ ಗಾಳಿಯಿಂದ ಮರಗಳು ಅಲುಗಾಡುತ್ತಿರುವುವು. ॥೬೨-೬೩॥

ಚಿಂತಾಮಣಿ ಸಮೂಹಗಳ ಕಾಂತಿಯು ಆಕಾಶದಲ್ಲೆಲ್ಲಾ ಹರಡಿರುವುದು. ರತ್ನಗಳ ಕಾಂತಿಯಿಂದ ಸುತ್ತಲೂ ಇರುವ ದಿಕ್ಕುಗಳು ಉರಿಯುತ್ತಿರುವಂತೆ ಕಾಣುತ್ತಿರುವುವು. ॥೬೪॥

ಆ ಪ್ರದೇಶವು ಅನೇಕ ಮರಗಳ ಸುವಾಸನೆಯಿಂದ ಕೂಡಿದ ಗಾಳಿಯಿಂದ ತುಂಬಿರುವುದು. ಧೂಪಗಳ ಹೊಗೆಯಿಂದ ಕೂಡಿ ಪ್ರಕಾಶವಾದ ರತ್ನದ ಹತ್ತು ಸಾವಿರ ದೀಪಗಳಿಂದ ಪ್ರಕಾಶಮಾನವಾಗಿರುವುದು. ॥೬೫॥

**ಮಣಿಜಾಲಕಸಚ್ಛಿದ್ರತರಲೋದರಕಾಂತಿಭಿಃ |**
**ದಿಙ್ಮೋಹಜನಕಂ ಚೈತದ್ದರ್ಪಣೋದರಸಂಯುತಂ ॥೬೬॥**

**ಐಶ್ವರ್ಯಸ್ಯ ಸಮಗ್ರಸ್ಯ ಶೃಂಗಾರಸ್ಯಾಖಿಲಸ್ಯ ಚ ।**
**ಸರ್ವಜ್ಞತಾಯಾಃ ಸರ್ವಾಯಾಸ್ತೇಜಸಶ್ಚಾಖಿಲಸ್ಯ ಚ ॥೬೭॥**

**ಪರಾಕ್ರಮಸ್ಯ ಸರ್ವಸ್ಯ ಸರ್ವೋತ್ತಮಗುಣಸ್ಯ ಚ ।**
**ಸಕಲಾಯಾ ದಯಾಯಾಶ್ಚ ಸಮಾಪ್ತಿರಿಹ ಭೂಪತೇ ॥೬೮॥**

**ರಾಜ್ಞ ಆನಂದಮಾರಭ್ಯ ಬ್ರಹ್ಮಲೋಕಾಂತಭೂಮಿಷು ।**
**ಆನಂದಾ ಯೇ ಸ್ಥಿತಾಃ ಸರ್ವೇ ತೇಽತ್ರೈವಾಂತರ್ಭವಂತಿ ಹಿ ॥೬೯॥**

**ಇತಿ ತೇ ವರ್ಣಿತಂ ರಾಜನ್ಮಣಿದ್ವೀಪಂ ಮಹತ್ತರಂ ।**
**ಮಹಾದೇವ್ಯಾಃ ಪರಂ ಸ್ಥಾನಂ ಸರ್ವಲೋಕೋತ್ತಮೋತ್ತಮಂ ॥೭೦॥**

**ಏತಸ್ಯ ಸ್ಮರಣಾತ್ಸದ್ಯಃ ಸರ್ವಪಾಪಂ ವಿನಶ್ಯತಿ ।**
**ಪ್ರಾಣೋತ್ಕ್ರಮಣಸಂಧೌ ತು ಸ್ಮೃತ್ವಾ ತತ್ರೈವ ಗಚ್ಛತಿ ॥೭೧॥**

---

ರತ್ನಾಭರಣಗಳ ಬೇರೆಬೇರೆಯಾದ ಚಂಚಲವಾದ ಕಾಂತಿಗಳಿಂದ ಕನ್ನಡಿಯೊಳಗಿನ ಪ್ರತಿಬಿಂಬಗಳಿಂದ ಕೂಡಿ ದಿಗ್ಭ್ರಾಂತಿಯನ್ನುಂಟುಮಾಡುವುದಾಗಿದ್ದಿತು. ॥೬೬॥

ಸಕಲ ಐಶ್ವರ್ಯಗಳೂ, ಎಲ್ಲ ಶೃಂಗಾರಗಳೂ, ಎಲ್ಲ ತಿಳಿವಳಿಕೆಗಳೂ, ಎಲ್ಲ ಕಾಂತಿಗಳೂ, ಪರಾಕ್ರಮಗಳೂ, ಉತ್ತಮವಾದ ಗುಣಗಳೂ, ಸರ್ವಭೂತಗಳಲ್ಲಿ ಕರುಣೆಯೂ ಈ ಮಣಿದ್ವೀಪದಲ್ಲಿ ಪೂರ್ಣತೆಯನ್ನು ಪಡೆದಿರುವುವು. ॥೬೭-೬೮॥

ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವ ಸಾರ್ವಭೌಮಾನಂದ ಮೊದಲುಗೊಂಡು ಬ್ರಹ್ಮಲೋಕಪರ್ಯಂತವಾಗಿ ಇರುವ ಆನಂದಗಳೆಲ್ಲವೂ ಈ ಮಣಿದ್ವೀಪದಲ್ಲಿರುವುವು. ಅವು ಭಕ್ತರ ಸತ್ಕರ್ಮಗಳಿಗೆ ತಕ್ಕಂತೆ ಅವರ ಭೋಗಕ್ಕೆ ಒದಗುವುವು. ॥೬೯॥

ಎಲೈ ರಾಜನೇ, ಶ್ರೀ ಭುವನೇಶ್ವರೀ ದೇವಿಗೆ ಅತ್ಯುತ್ತಮವಾದ ವಾಸಸ್ಥಾನವಾದ ದೊಡ್ಡದಾದ ಮಣಿದ್ವೀಪವನ್ನು ನಿನಗೆ ವರ್ಣಿಸಿ ಹೇಳಿರುವೆನು. ॥೭೦॥

ಈ ಮಣಿದ್ವೀಪದ ವರ್ಣನೆಯನ್ನು ಸ್ಮರಿಸಿದ ಮಾತ್ರದಿಂದಲೇ ಸಕಲ ಪಾಪಗಳೂ ನಾಶವಾಗುವುವು. ಪ್ರಾಣೋತ್ಕ್ರಮಣ ಕಾಲದಲ್ಲಿ ಇದನ್ನು ಸ್ಮರಿಸಿದರೆ ಮೃತಪಟ್ಟ ಜೀವನು ಆ ಮಣಿದ್ವೀಪಕ್ಕೆ ಹೋಗುವನು. ॥೭೧॥

ಅಧ್ಯಾಯಪಂಚಕಂ ತ್ವೇತತ್ಪಠೇನ್ನಿತ್ಯಂ ಸಮಾಹಿತಃ ।
ಭೂತಪ್ರೇತಪಿಶಾಚಾದಿಬಾಧಾ ತತ್ರ ಭವೇನ್ನಹಿ ॥೭೨॥

ನವೀನಗೃಹನಿರ್ಮಾಣೇ ವಾಸ್ತುಯಾಗೇ ತಥೈವಚ ।
ಪಠಿತವ್ಯಂ ಪ್ರಯತ್ನೇನ ಕಲ್ಯಾಣಂ ತೇನ ಜಾಯತೇ ॥೭೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ದ್ವಾದಶೋಽಧ್ಯಾಯಃ

---

ಈ ದ್ವಾದಶಸ್ಕಂಧದ ಎಂಟನೆಯ ಅಧ್ಯಾಯದಿಂದ ಹನ್ನೆರಡನೆಯ ಅಧ್ಯಾಯಾಂತವಾಗಿ ಐದು ಅಧ್ಯಾಯಗಳನ್ನು ಪ್ರತಿದಿನವೂ ಏಕಾಗ್ರಚಿತ್ತದಿಂದ ಪಾರಾಯಣ ಮಾಡಿದರೆ ಭೂತಪ್ರೇತಪಿಶಾಚಾದಿಗಳ ಬಾಧೆಯು ನಿವಾರಣೆ ಯಾಗುವುದು. ॥೭೨॥

ಹೊಸದಾಗಿ ಮನೆಯನ್ನು ಕಟ್ಟಿ ವಾಸ್ತುಹೋಮ ಮಾಡಿದಾಗ ಪ್ರಯತ್ನ ಪೂರ್ವಕವಾಗಿ ಈ ಅಧ್ಯಾಯಗಳನ್ನು ಪಾರಾಯಣ ಮಾಡಿದರೆ ಆ ಮನೆಯಲ್ಲಿ ಮಂಗಳಕಾರ್ಯಗಳು ನಡೆಯುತ್ತಿರುವುವು. ॥೭೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

### ॥ ತ್ರಯೋದಶೋಽಧ್ಯಾಯಃ ॥

### ಹದಿಮೂರನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತಿ ತೇ ಕಥಿತಂ ಭೂಪ ಯದ್ಯತ್ಪೃಷ್ಟಂ ತ್ವಯಾಽನಘ ।**
**ನಾರಾಯಣೇನ ಯತ್ಪ್ರೋಕ್ತಂ ನಾರದಾಯ ಮಹಾತ್ಮನೇ ॥೧॥**

**ಶ್ರುತ್ವೈತತ್ತು ಮಹಾದೇವ್ಯಾಃ ಪುರಾಣಂ ಪರಮಾದ್ಭುತಂ ।**
**ಕೃತಕೃತ್ಯೋ ಭವೇನ್ಮರ್ತ್ಯೋ ದೇವ್ಯಾಃ ಪ್ರಿಯತಮೋ ಹಿ ಸಃ ॥೨॥**

**ಕುರು ಚಾಂಬಾಮಖಂ ರಾಜನ್ ಸ್ವಪಿತ್ರುದ್ಧರಣಾಯ ವೈ।**
**ಖಿನ್ನೋಽಸಿ ಯೇನ ರಾಜೇಂದ್ರ ಪಿತುರ್ಜ್ಞಾತ್ವಾ ತು ದುರ್ಗತಿಂ ॥೩॥**

---

ಈ ಅಧ್ಯಾಯದಲ್ಲಿ ಜನಮೇಜಯರಾಜನು ದೇವಿಯ ಯಜ್ಞವನ್ನು ಮಾಡಿದ ನೆಂಬ ಕಥೆಯನ್ನು ವರ್ಣಿಸಲಾಗುವುದು.

ವ್ಯಾಸರು ಹೇಳಿದರು—ಎಲೈ ಜನಮೇಜಯರಾಜನೇ, ಪಾಪರಹಿತನಾದ ನೀನು ಯಾವ ಯಾವ ಪ್ರಶ್ನೆಯನ್ನು ಕೇಳಿದೆಯೋ ಅದಕ್ಕೆ ಉತ್ತರವಾಗಿ ನಾನೂ, ಮಹಾತ್ಮನಾದ ನಾರದನಿಗೆ ನಾರಾಯಣಮುನಿಯು ಹೇಳಿದ ಅಂಶವನ್ನೂ ಕೂಡಿಸಿ, ನಿನಗೆ ಹೇಳಿರುವೆನು. ॥೧॥

ಅತ್ಯಂತ ಆಶ್ಚರ್ಯಕರವಾದ ಈ ಮಹಾದೇವಿಯ ಪುರಾಣವನ್ನು ಕೇಳಿದ ಮಾನವನು ಧನ್ಯನಾಗುವನು ಮತ್ತು ಭುವನೇಶ್ವರೀದೇವಿಯ ಪ್ರೀತಿಪಾತ್ರನಾಗು ವನು. ॥೨॥

ಎಲೈ ರಾಜನೇ, ಮೂರನೆಯ ಸ್ಕಂಧದಲ್ಲಿ ಅಪಮೃತ್ಯುವಿನಿಂದ ಮರಣ ಹೊಂದಿದ ನಿನ್ನ ತಂದೆಗೆ ಬಂದ ದುರ್ಗತಿಯನ್ನು ಪರಿಹರಿಸುವುದಕ್ಕಾಗಿ ಪ್ರಶ್ನೆ

ಗೃಹಾಣ ತ್ವಂ ಮಹಾದೇವ್ಯಾ ಮಂತ್ರಂ ಸರ್ವೋತ್ತಮೋತ್ತಮಂ ।
ಯಥಾವಿಧಿ ವಿಧಾನೇನ ಜನ್ಮಸಾಫಲ್ಯದಾಯಕಂ ॥೪॥

ತಚ್ಛ್ರುತ್ವಾ ನೃಪಶಾರ್ದೂಲಃ ಪ್ರಾರ್ಥಯಿತ್ವಾ ಮುನೀಶ್ವರಂ ।
ತಸ್ಮಾದೇವ ಮಹಾಮಂತ್ರಂ ದೇವೀಪ್ರಣವಸಂಜ್ಞಕಂ ॥೫॥

ದೀಕ್ಷಾವಿಧಿವಿಧಾನೇನ ಜಗ್ರಾಹ ನೃಪಸತ್ತಮಃ ।
ತತ ಆಹೂಯ ಧೌಮ್ಯಾದೀನ್ನವರಾತ್ರಸಮಾಗಮೇ ॥೬॥

ಅಂಬಾಯಜ್ಞಂ ಚಕಾರಾಸೌ ವಿತ್ತಶಾಠ್ಯವಿವರ್ಜಿತಃ ।
ಬ್ರಾಹ್ಮಣೈಃ ಪಾಠಯಾಮಾಸ ಪುರಾಣಂ ತ್ವೇತದುತ್ತಮಂ ॥೭॥

ಶ್ರೀದೇವ್ಯಗ್ರೇಽಂಬಿಕಾಪ್ರೀತ್ಯೈ ದೇವೀಭಾಗವತಂ ಪರಂ ।
ಬ್ರಾಹ್ಮಣಾನ್ಭೋಜಯಾಮಾಸಾಪ್ಯಸಂಖ್ಯಾತಾನ್ಸುವಾಸಿನೀಃ ॥೮॥

---

ಮಾಡಿದೆಯಷ್ಟೆ? ನಿನ್ನ ತಂದೆಯ ದುರ್ಗತಿಯನ್ನು ತಿಳಿದು ದುಃಖಪಡುತ್ತಿರುವೆ. ಅವನಿಗೆ ಸದ್ಗತಿಯು ಪ್ರಾಪ್ತವಾಗುವುದಕ್ಕಾಗಿ ಅಂಬಾಯಜ್ಞವನ್ನು ಮಾಡು. ॥೩॥

ನೀನು ಅತ್ಯಂತವಾಗಿ ಜನ್ಮಸಾಫಲ್ಯವನ್ನುಂಟುಮಾಡತಕ್ಕ ದೇವಿಯ ಮಂತ್ರವನ್ನು ವಿಧಿಗನುಸಾರವಾಗಿ ಉಪದೇಶದಿಂದ ಪರಿಗ್ರಹಿಸು. ॥೪॥

ಆ ಮಾತನ್ನು ಕೇಳಿ ರಾಜಶ್ರೇಷ್ಠನು ಮುನೀಶ್ವರನಾದ ವ್ಯಾಸನನ್ನೇ ಪ್ರಾರ್ಥಿಸಿ ಆ ವ್ಯಾಸರಿಂದಲೇ ದೇವೀಪ್ರಣವವಾದ ಮಾಯಾಬೀಜಮಂತ್ರವನ್ನು ದೀಕ್ಷಾವಿಧಿಗನುಸಾರವಾಗಿ ಉಪದೇಶಮಾಡಿಸಿಕೊಂಡನು. ಕಾಶೀಪಟ್ಟಣದಲ್ಲಿ ಶಿವನು ಭುವನೇಶ್ವರೀ ಮಂತ್ರವನ್ನು ಭಕ್ತರಿಗೆ ಉಪದೇಶಿಸುವನೆಂದು ಪ್ರಸಿದ್ಧಿಯಿರುವುದು. ॥೫॥

ಆ ಮೇಲೆ ಧೌಮ್ಯಾದಿ ಋಷಿಗಳನ್ನು ಕರೆಯಿಸಿ ನವರಾತ್ರಿಯ ಸಮಯದಲ್ಲಿ ವಿಶೇಷವಾದ ಧನವ್ಯಯದಿಂದ ಅಂಬಾಯಜ್ಞವನ್ನು ಮಾಡಿದನು. ದೇವಿಯ ಇದುರಿಗೆ ಆ ಅಂಬಿಕೆಯ ಪ್ರೀತಿಗೋಸ್ಕರವಾಗಿ ಬ್ರಾಹ್ಮಣರಿಂದ ದೇವೀಭಾಗವತ ಪುರಾಣವನ್ನು ಪಾರಾಯಣಮಾಡಿಸಿದನು. ॥೬-೭॥

ರಾಜನು ಲೆಕ್ಕವಿಲ್ಲದಷ್ಟು ಬ್ರಾಹ್ಮಣರಿಗೂ ಸುವಾಸಿನಿಯರಿಗೂ ಕುಮಾರಿಯರಿಗೂ ಬ್ರಹ್ಮಚಾರಿಗಳಿಗೂ, ದೀನರಿಗೂ, ಅನಾಥರಿಗೂ ಭೋಜನವನ್ನು

ಕುಮಾರೀರ್ಬಟುಕಾದೀಂಶ್ಚ ದೀನಾನಾಥಾಂಸ್ತಥೈವಚ ।
ದ್ರವ್ಯಪ್ರದಾನೈಸ್ತಾನ್ಸರ್ವಾನ್ಸಂತೋಷ್ಯ ವಸುಧಾಧಿಪಃ ॥೯॥

ಸಮಾಪ್ಯ ಯಜ್ಞಂ ಸಂಸ್ಥಾನೇ ಸಂಸ್ಥಿತೋ ಯಾವದೇವ ಹಿ ।
ತಾವದೇವ ಹಿ ಚಾಕಾಶಾನ್ನಾರದಃ ಸಮವಾತರತ್ ॥೧೦॥

ರಣಯನ್ಮಹತೀಂ ವೀಣಾಂ ಜ್ವಲದಗ್ನಿಶಿಖೋಪಮಃ ।
ಸಸಂಭ್ರಮಃ ಸಮುತ್ಥಾಯ ದೃಷ್ಟ್ವಾ ತಂ ನಾರದಂ ಮುನಿಂ ॥೧೧॥

ಆಸನಾದ್ಯುಪಚಾರೈಶ್ಚ ಪೂಜಯಾಮಾಸ ಭೂಮಿಪಃ ।
ಕೃತ್ವಾ ತು ಕುಶಲಪ್ರಶ್ನಂ ಪಪ್ರಚ್ಛಾಗಮಕಾರಣಂ ॥೧೨॥

॥ ರಾಜೋವಾಚ ॥

ಕುತ ಆಗಮನಂ ಸಾಧೋ ಬ್ರೂಹಿ ಕಿಂ ಕರವಾಣಿ ತೇ ।
ಸನಾಥೋऽಹಂ ಕೃತಾರ್ಥೋऽಹಂ ತ್ವದಾಗಮನಕಾರಣಾತ್ ॥೧೩॥

---

ಮಾಡಿಸಿದನು. ಅವರಿಗೆಲ್ಲರಿಗೂ ದ್ರವ್ಯ ದಕ್ಷಿಣೆಯನ್ನೂ ಕೊಟ್ಟು ಸಂತೋಷಪಡಿಸಿ ಯಜ್ಞವನ್ನು ಪೂರ್ತಿಮಾಡಿದ ಸಮಯಕ್ಕೆ ಸರಿಯಾಗಿ ನಾರದ ಮುನಿಯು ಆಕಾಶದಿಂದಿಳಿದು ರಾಜನ ಸಮೀಪಕ್ಕೆ ಬಂದನು. ॥೮-೯-೧೦॥

ಮಹತೀ ಎಂಬ ವೀಣೆಯನ್ನು ನುಡಿಸುತ್ತಾ ಉರಿಯುತ್ತಿರುವ ಅಗ್ನಿಯಂತೆ ತೇಜಸ್ಸಿನಿಂದ ಕೂಡಿ ಬರುತ್ತಿರುವ ನಾರದ ಮುನಿಯನ್ನು ಕಂಡು ಜನಮೇಜಯ ರಾಜನು ಸಂತೋಷದಿಂದ ಬೇಗನೆ ಎದ್ದು ಆಸನಾದಿ ಉಪಚಾರಗಳಿಂದ ಮುನಿಯನ್ನು ಪೂಜಿಸಿ ಕುಶಲ ಪ್ರಶ್ನೆಯನ್ನು ಮಾಡಿ ಬಂದ ಕಾರಣವನ್ನು ಪ್ರಶ್ನೆಮಾಡಿದನು. ॥೧೧-೧೨॥

ರಾಜನು ಹೇಳಿದನು—ಓ ಸಾಧುವಾದ ನಾರದಮುನಿಯೇ, ನೀನು ಬಂದುದರಿಂದ ನಾನು ರಕ್ಷಕರನ್ನು ಪಡೆದವನಾದೆನು, ಮತ್ತು ಕೃತಾರ್ಥನೂ ಆದೆನು. ನೀನು ಬಂದಕಾರಣವೇನು ? ನಿನಗೆ ನನ್ನಿಂದ ಯಾವಕಾರ್ಯವಾಗಬೇಕಾಗಿರುವುದು ? ಹೇಳು. ॥೧೩॥

ಇತಿ ರಾಜ್ಞೋ ವಚಃ ಶ್ರುತ್ವಾ ಪ್ರೋವಾಚ ಮುನಿಸತ್ತಮಃ ।
ಅದ್ಯಾಶ್ಚರ್ಯಂ ಮಯಾ ದೃಷ್ಟಂ ದೇವಲೋಕೇ ನೃಪೋತ್ತಮ ॥೧೪॥

ತನ್ನಿವೇದಯಿತುಂ ಪ್ರಾಪ್ತಸ್ತ್ವತ್ಸಕಾಶೇ ಸುವಿಸ್ಮಿತಃ ।
ತೇ ಪಿತಾ ದುರ್ಗತಿಂ ಪ್ರಾಪ್ತೋ ನಿಜಕರ್ಮವಿಪರ್ಯಯಾತ್ ॥೧೫॥

ಸ ಏವಾಯಂ ದಿವ್ಯರೂಪ ವಪುರ್ಭೂತ್ವಾಥುನೈವ ಹಿ ।
ದೇವದೇವೈಃ ಸ್ತುತಃ ಸಮ್ಯಗಪ್ಸರೋಭಿಃ ಸಮಂತತಃ ॥೧೬॥

ವಿಮಾನ ವರಮಾರುಹ್ಯ ಮಣಿದ್ವೀಪಂ ಗತೋಽಭವತ್ ।
ದೇವೀಭಾಗವತಸ್ಯಾಸ್ಯ ಶ್ರವಣೋತ್ಥ ಫಲೇನ ಚ ॥೧೭॥

ಅಂಬಾಮುಖಫಲೇನಾಪಿ ಪಿತಾ ತೇ ಸುಗತಿಂ ಗತಃ ।
ಧನ್ಯೋಽಸಿ ಕೃತಕೃತ್ಯೋಽಸಿ ಜೀವಿತಂ ಸಫಲಂ ತವ ॥೧೮॥

ನರಕಾದುದ್ಧೃತಸ್ತಾತ ಸ್ತ್ವಯಾ ತು ಕುಲಭೂಷಣ ।
ದೇವಲೋಕೇ ಸ್ಥಿತಕೀರ್ತಿಸ್ತವಾದ್ಯ ವಿಪುಲಾಽಭವತ್ ॥೧೯॥

---

ಹೀಗೆಂದು ಹೇಳಿದ ರಾಜನ ಮಾತನ್ನು ಕೇಳಿ ಮುನಿಶ್ರೇಷ್ಠನು ಉತ್ತರವನ್ನು ಹೇಳಿದನು.

ಎಲೈ ರಾಜಶ್ರೇಷ್ಠನೇ, ದೇವಲೋಕದಲ್ಲಿ ಈದಿನ ನಾನೊಂದು ಆಶ್ಚರ್ಯವನ್ನು ಕಂಡೆನು. ಅದನ್ನು ಹೇಳುವುದಕ್ಕಾಗಿ ಆಶ್ಚರ್ಯಪಡುತ್ತ ನಿನ್ನ ಸಮೀಪಕ್ಕೆ ಬಂದಿರುವೆನು. ನಿನ್ನ ತಂದೆಯು ಬ್ರಾಹ್ಮಣನಿಗೆ ಅಪರಾಧಮಾಡಿದ ತನ್ನ ಕರ್ಮಫಲವಾದ ನರಕದಲ್ಲಿ ದುಃಖವನ್ನನುಭವಿಸುತ್ತಿದ್ದನು. ಅವನೇ ದಿವ್ಯವಾದ ಶರೀರವನ್ನು ಹೊಂದಿ ಈಗಲೇ ದೇವಲೋಕದಲ್ಲಿ ಕೀರ್ತಿಯಿಂದಲೂ ಕೂಡಿ ಅಪ್ಸರಸ್ತ್ರೀಯರಿಂದ ಸ್ತೋತ್ರಮಾಡಿಸಿಕೊಳ್ಳುತ್ತ ಉತ್ತಮವಾದ ವಿಮಾನವನ್ನೇರಿ ಮಣಿದ್ವೀಪಕ್ಕೆ ಬಿಜಯಮಾಡಿದನು. ॥೧೪-೧೫-೧೬॥

ದೇವೀಭಾಗವತ ಪುರಾಣವನ್ನು ಕೇಳಿದ ಫಲದಿಂದಲೂ ಅಂಬಾಯಜ್ಞವನ್ನು ಮಾಡಿದ ಫಲದಿಂದಲೂ ನಿನ್ನ ತಂದೆಯು ಒಳ್ಳೆಯ ಗತಿಯನ್ನು ಪಡೆದನು. ನೀನೇ ಧನ್ಯನು, ಕೃತಾರ್ಥನು! ನಿನ್ನ ಹುಟ್ಟು ಸಾರ್ಥಕವಾಯಿತು! ವಂಶಕ್ಕೆ ಅಲಂಕಾರ

|| ಸೂತ ಉವಾಚ ||

ನಾರದೋಕ್ತಂ ಸಮಾಕರ್ಣ್ಯ ಪ್ರೇಮಗದ್ಗದಿತಾಂತರಃ ।
ಪಪಾತ ಪಾದಾಂಬುಜಯೋರ್ವ್ಯಾಸಸ್ಯಾದ್ಭುತಕರ್ಮಣಃ ॥೨೦॥

ತವಾನುಗ್ರಹತೋ ದೇವ ಕೃತಾರ್ಥೋಽಹಂ ಮಹಾಮುನೇ ।
ಕಿಂ ಮಯಾ ಪ್ರತಿಕರ್ತವ್ಯಂ ನಮಸ್ಕಾರಾದೃತೇ ತವ ॥೨೧॥

ಅನುಗ್ರಾಹ್ಯಃ ಸದೈವಾಹಮೇವಮೇವ ತ್ವಯಾ ಮುನೇ ।
ಇತಿ ರಾಜ್ಞೋ ವಚಃ ಶ್ರುತ್ವಾಽಸ್ಯಾಶೀರ್ಭಿರಭಿವಾದ್ಯ ಚ ॥೨೨॥

ಉವಾಚ ವಚನಂ ಶ್ಲಕ್ಷ್ಣಂ ಭಗವಾನ್ಬಾದರಾಯಣಃ ।
ರಾಜನ್ಸರ್ವಂ ಪರಿತ್ಯಜ್ಯ ಭಜ ದೇವೀ ಪದಾಂಬುಜಂ ॥೨೩॥

ದೇವೀಭಾಗವತಂ ಚೈವ ಪಠ ನಿತ್ಯಂ ಸಮಾಹಿತಃ ।

---

ಪ್ರಾಯನಾದ ನಿನ್ನಿಂದ ನಿನ್ನ ತಂದೆಗೆ ನರಕಭಾಧೆಯು ತಪ್ಪಿತು. ದೇವಲೋಕದಲ್ಲೂ ನಿನ್ನ ಯಶಸ್ಸು ವಿಸ್ತಾರವಾಗಿ ಹರಡಿತು. ||೧೭-೧೮-೧೯||

ಸೂತನು ಹೇಳಿದನು—ನಾರದರು ಹೇಳಿದ ಮಾತನ್ನು ಕೇಳಿ ಪ್ರೀತಿಯಿಂದ (ಗದ್ಗದಧ್ವನಿ) ತುಂಬಿದ ಮನಸ್ಸುಳ್ಳವನಾಗಿ ಆಶ್ಚರ್ಯಕರವಾದ ಕರ್ಮಫಲವುಳ್ಳ ವ್ಯಾಸಮಹರ್ಷಿಯ ಪಾದಕಮಲಕ್ಕೆ ನಮಸ್ಕಾರಮಾಡಿ ಓ ಗುರುವಾದ ಮಹಾಮುನಿಯೇ, ನಿನ್ನ ಅನುಗ್ರಹದಿಂದ ನಾನು ಕೃತಾರ್ಥನಾದೆನು. ನಿನ್ನ ಉಪಕಾರಕ್ಕೆ ನಾನು ನಮಸ್ಕಾರವನ್ನು ಬಿಟ್ಟು ಮತ್ತೇನು ಪ್ರತ್ಯುಪಕಾರವನ್ನು ಮಾಡಬಲ್ಲೆನು ? ಓ ಮುನಿಯೇ, ನೀನು ನನಗೆ ಯಾವಾಗಲೂ ಹೀಗಯೇ ಅನುಗ್ರಹವನ್ನು ಮಾಡುತ್ತಿರಬೇಕು. ||೨೦-೨೧||

ಹೀಗೆಂದು ಹೇಳಿದ ರಾಜನ ಮಾತನ್ನು ಕೇಳಿ ಮಹಾಮಹಿಮನಾದ ವ್ಯಾಸ ಮುನಿಯು ರಾಜನಿಗೆ ಆಶೀರ್ವಾದವನ್ನು ಮಾಡಿ ಮೃದುವಾದ ಮಾತಿನಿಂದ ಉತ್ತರವನ್ನು ಹೇಳಿದನು. ||೨೨||

ಓ ರಾಜನೇ, ಎಲ್ಲವನ್ನೂ ಬಿಟ್ಟು ದೇವಿಯ ಪಾದಕಮಲವನ್ನು ಸೇವಿಸು. ಪ್ರತಿದಿನವೂ ಏಕಾಗ್ರಚಿತ್ತದಿಂದ ದೇವೀಭಾಗವತವನ್ನು ಪಾರಾಯಣ ಮಾಡು. ಉದಾಸೀನ ಮಾಡದೆ ಭಕ್ತಿಯಿಂದ ಅಂಬಾಯಜ್ಞವನ್ನು ಮಾಡು. ಇವುಗಳಿಂದ

**ಅಂಬಾಮುಖಂ ಸದಾ ಭಕ್ತ್ಯಾ ಕುರು ನಿತ್ಯಮತಂದ್ರಿತಃ ॥೨೪॥**

**ಅನಾಯಾಸೇನ ತೇನ ತ್ವಂ ಮೋಕ್ಷ್ಯಸೇ ಭವಬಂಧನಾತ್ ।**
**ಸನ್ತ್ಯನ್ಯಾನಿ ಪುರಾಣಾನಿ ಹರಿರುದ್ರ ಮುಖಾನಿಚ ॥೨೫॥**

**ದೇವೀಭಾಗವತಸ್ಯಾಸ್ಯ ಕಲಾಂ ನಾರ್ಹಂತಿ ಷೋಡಶೀಂ ।**
**ಸಾರಮೇ ತತ್ಪುರಾಣಾನಾಂ ವೇದಾನಾಂ ಚೈವ ಸರ್ವಶಃ ॥೨೬॥**

**ಮೂಲಪ್ರಕೃತಿರೇವೈಷಾ ಯತ್ರ ತು ಪ್ರತಿಪಾದ್ಯತೇ ।**
**ಸಮಂ ತೇನ ಪುರಾಣಂ ಸ್ಯಾತ್ಕಥಮನ್ಯನ್ನೃಪೋತ್ತಮ ॥೨೭॥**

**ಪಾಠೇ ವೇದಸಮಂ ಪುಣ್ಯಂ ಯಸ್ಯಸ್ಯಾಜ್ಜನಮೇಜಯ ।**
**ಪಠಿತವ್ಯಂ ಪ್ರಯತ್ನೇನ ತದೇವ ವಿಬುಧೋತ್ತಮೈಃ ॥೨೮॥**

---

ನೀನು ಅನಾಯಾಸವಾಗಿ ಸಂಸಾರಬಂಧವನ್ನು ಕಳೆದುಕೊಂಡು ಕಡೆಗೆ ಮೋಕ್ಷವನ್ನು ಹೊಂದುವೆ. ॥೨೩-೨೪॥

ಶಿವಪುರಾಣ, ವಿಷ್ಣುಪುರಾಣವೆಂಬ ಬೇರೆ ಪುರಾಣಗಳಿರುವುವು. ಅವು ದೇವೀ ಭಾಗವತದ ಹದಿನಾರನೆಯ ಒಂದು ಭಾಗದ ಮಹಿಮೆಗೆ ಸಮಾನವಾಗಲಾರವು. ಏಕೆಂದರೆ, ಈ ದೇವೀಭಾಗವತವು ಸಕಲಪುರಾಣಗಳ ಮತ್ತು ಸಮಸ್ತ ವೇದಗಳ ಸಾರಭೂತವಾದುದು. ॥೨೫-೨೬॥

ಮೂಲಪ್ರಕೃತಿಯಿಂದ ಹುಟ್ಟಿದ ವಿಷ್ಣು ಬ್ರಹ್ಮಾದಿಗಳಿಗೆ ಒಂದೊಂದು ಗುಣವು ಪ್ರಧಾನವಾಗಿರುವುದು. ಬೇರೆ ಪುರಾಣಗಳು ಅವರನ್ನೇ ಶ್ರೇಷ್ಠರೆಂದು ಪ್ರತಿಪಾದನೆ ಮಾಡುವುವು. ದೇವೀಭಾಗವತವಾದರೋ ಗುಣತ್ರಯಸಾಮ್ಯಾವಸ್ಥಾ ರೂಪವಾದ ಮಾಯಾಶಬಳ ಬ್ರಹ್ಮರೂಪವಾದ ಮೂಲಪ್ರಕೃತಿಯನ್ನು ಪ್ರತಿಪಾದನೆಮಾಡುವುದು. ಓ ರಾಜನೇ, ಈ ಕಾರಣದಿಂದ ಇದೇ ಸರ್ವೋತ್ಕೃಷ್ಟವಾದ ಪುರಾಣವು. ಇದಕ್ಕೆ ಮತ್ತೊಂದು ಪುರಾಣವು ಹೇಗೆ ಸಮಾನವಾಗುವುದು? ॥೨೭॥

ಓ ಜನಮೇಜಯನೇ, ಇದನ್ನು ಭಕ್ತಿಯಿಂದ ಪಾರಾಯಣಮಾಡಿದರೆ ವೇದಪಾರಾಯಣಕ್ಕೆ ಸಮವಾದ ಪುಣ್ಯವು ಬರುವುದರಿಂದ ವಿದ್ವಾಂಸರು ಪ್ರಯತ್ನ ಪೂರ್ವಕವಾಗಿ ಈ ದೇವೀಭಾಗವತವನ್ನೇ ಪಾರಾಯಣಮಾಡಬೇಕು. ॥೨೮॥

ಇತ್ಯುಕ್ತ್ವಾ ನೃಪವರ್ಯಂ ತಂ ಜಗಾಮ ಮುನಿರಾಟ್ ತತಃ ।
ಜಗ್ಮುಶ್ಚೈವ ಯಥಾಸ್ಥಾನಂ ಧೌಮ್ಯಾದಿಮುನಯೋಽಮಲಾಃ ॥೨೯॥

ದೇವೀಭಾಗವತಸ್ಯೈವ ಪ್ರಶಂಸಾಂ ಚಕ್ರುರುತ್ತಮಾಂ ।
ರಾಜಾ ಶಶಾಸ ಧರಣೀಂ ತತಃ ಸಂತುಷ್ಟಮಾನಸಃ ॥೩೦॥
ದೇವೀಭಾಗವತಂ ಚೈವ ಪಠನ್ ಶೃಣ್ವನ್ನಿರಂತರಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ತ್ರಯೋದಶೋಽಧ್ಯಾಯಃ

---

ಹೀಗೆಂದು ಹೇಳಿ ಮುನಿಶ್ರೇಷ್ಠನಾದ ವ್ಯಾಸನು ತನ್ನಾಶ್ರಮಕ್ಕೆ ಹೋದನು. ಧೌಮ್ಯಾದಿಗಳೂ ತಂತಮ್ಮ ಆಶ್ರಮಗಳಿಗೆ ಹೋದರು. ಅವರೆಲ್ಲರೂ ಉತ್ತಮವಾದ ದೇವೀಭಾಗವತವನ್ನೇ ಹೊಗಳುತ್ತಿದ್ದರು. ॥೨೯॥

ರಾಜನೂ ಕೂಡ ಯಾವಾಗಲೂ ದೇವೀಭಾಗವತವನ್ನೇ ಪಾರಾಯಣ ಮಾಡುತ್ತಲೂ ಆ ಪುರಾಣವನ್ನೇ ಕೇಳುತ್ತಲೂ ಸಂತೋಷಚಿತ್ತನಾಗಿ ಭೂಮಿಯನ್ನಾಳುತ್ತಿದ್ದನು. ॥೩೦॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಾದಶಸ್ಕಂಧೇ

### || ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ಸೂತ ಉವಾಚ ||

**ಅರ್ಧಶ್ಲೋಕಾತ್ಮಕಂ ಯತ್ತು ದೇವೀವಕ್ತ್ರಾಬ್ಜನಿರ್ಗತಂ ।**
**ಶ್ರೀಮದ್ಭಾಗವತಂ ನಾಮ ವೇದಸಿದ್ಧಾಂತಬೋಧಕಂ ॥೧॥**

**ಉಪದಿಷ್ಟಂ ವಿಷ್ಣವೇ ಯದ್ವಟಪತ್ರನಿವಾಸಿನೇ ।**
**ಶತಕೋಟಿಪ್ರವಿಸ್ತೀರ್ಣಂ ತತ್ಕೃತಂ ಬ್ರಹ್ಮಣಾ ಪುರಾ ॥೨॥**

**ತತ್ಸಾರಮೇಕತಃ ಕೃತ್ವಾ ವ್ಯಾಸೇನ ಶುಕಹೇತವೇ ।**
**ಅಷ್ಟಾದಶಸಹಸ್ರಂ ತು ದ್ವಾದಶಸ್ಕಂಧಸಂಯುತಂ ॥೩॥**

ಈ ಅಧ್ಯಾಯದಲ್ಲಿ ಮುವ್ವತ್ತು ಶ್ಲೋಕಗಳಿಂದ ದೇವೀಭಾಗವತದ ಸಂಪೂರ್ಣವಾದ ಫಲವನ್ನು ಹೇಳಿ ಉಪಸಂಹಾರಮಾಡಲಾಗುವುದು. ವ್ಯಾಸರು ತಮ್ಮಾಶ್ರಮಕ್ಕೆ ಹೋದ ಮೇಲೆ ಸೂತನು ಶೌನಕಾದಿಋಷಿಗಳಿಗೆ ಮುಂದಿನ ಕಥೆಯನ್ನು ಹೇಳುವನು. ಮೂರನೆಯ ಸ್ಕಂಧದಲ್ಲಿ ಆಲದೆಲೆಯಮೇಲೆ ಮಲಗಿದ್ದ ವಿಷ್ಣುವಿಗೆ ದೇವಿಯು "ಸರ್ವಂ ಖಲ್ವಿದಮೇವಾಹಂ ನಾನ್ಯದಸ್ತಿ ಸನಾತನಂ" ಎಂದು ಅರ್ಧಶ್ಲೋಕದಿಂದ ಸೂತ್ರರೂಪವಾದ ವೇದಸಿದ್ಧಾಂತಬೋಧಕವಾದ ದೇವೀಭಾಗವತದ ಉಪದೇಶವನ್ನು ಹೇಳಿದ್ದಳು. ॥೧॥

ಆಲದೆಲೆಯಮೇಲೆ ಮಲಗಿದ್ದ ವಿಷ್ಣುವಿಗೆ ದೇವಿಯು ಉಪದೇಶಮಾಡಿದುದನ್ನೇ ಬ್ರಹ್ಮನು ನೂರುಕೋಟಿ ಶ್ಲೋಕಗಳಿಂದ ವಿಸ್ತಾರವಾಗಿ ವ್ಯಾಖ್ಯಾನರೂಪದಲ್ಲಿ ರಚಿಸಿ ದೇವಲೋಕದಲ್ಲಿ ಪ್ರಕಟಿಸಿದನು. ಅದು ಈಗಲೂ ಅಲ್ಲಿರುವುದು. ಅದರ

ದೇವೀಭಾಗವತಂ ನಾಮ ಪುರಾಣಂ ಗ್ರಥಿತಂ ಪುರಾ ।
ಅದ್ಯಾಪಿ ದೇವಲೋಕೇ ತದ್ಬಹುವಿಸ್ತೀರ್ಣಮಸ್ತಿ ಹಿ ॥೪॥

ನಾನೇನ ಸದೃಶಂ ಪುಣ್ಯಂ ಪವಿತ್ರಂ ಪಾಪನಾಶನಂ ।
ಪದೇ ಪದೇಽಶ್ವಮೇಧಸ್ಯ ಫಲಮಾಪ್ನೋತಿಮಾನವಃ ॥೫॥

ಪೌರಾಣಿಕಂ ಪೂಜಯಿತ್ವಾ ವಸ್ತ್ರಾದ್ಯಾಭರಣಾದಿಭಿಃ ।
ವ್ಯಾಸಬುದ್ಧ್ಯಾತನ್ಮುಖಾತ್ತು ಶ್ರುತ್ವೈತತ್ಸಮುಪೋಷಿತಃ ॥೬॥

ಲಿಖಿತ್ವಾ ನಿಜಹಸ್ತೇನ ಲೇಖಕೇನಾಥವಾ ಮುನೇ ।
ಪ್ರೌಷ್ಠಪದ್ಯಾಂ ಪೌರ್ಣಮಾಸ್ಯಾಂ ಹೇಮಸಿಂಹಸಮನ್ವಿತಂ ॥೭॥

ದದ್ಯಾತ್ಪೌರಾಣಿಕಾಯಾಥ ದಕ್ಷಿಣಾಂ ಚ ಪಯಸ್ವಿನೀಂ ।
ಸಾಲಂಕೃತಾಂ ಸವತ್ಸಾಂಚ ಕಪಿಲಾಂ ಹೇಮಮಾಲಿನೀಂ ॥೮॥

---

ಸಾರವನ್ನು ಒಟ್ಟುಗೂಡಿಸಿ ವ್ಯಾಸನು ತನ್ನ ಮಗನಾದ ಶುಕನಿಗೋಸ್ಕರವಾಗಿ ಹದಿನೆಂಟುಸಾವಿರ ಶ್ಲೋಕಗಳಿಂದ ಕೂಡಿದ ಹನ್ನೆರಡು ಸ್ಕಂಧಗಳಾಗಿ ರಚಿಸಿ ದೇವೀ ಭಾಗವತವೆಂದು ಹೆಸರಿಟ್ಟನು. ||೨-೩-೪||

ಈ ಪುರಾಣಕ್ಕೆ ಸಮಾನವಾದ ಪರಿಶುದ್ಧವಾದ ಪಾಪಪರಿಹಾರಕವಾದ ಪುರಾಣವು ಮತ್ತೊಂದಿಲ್ಲವು. ಈ ಪುರಾಣದ ಒಂದೊಂದು ಪದವನ್ನೂ ಉಚ್ಚರಿಸಿದರೂ ಮನುಷ್ಯನು ಒಂದೊಂದು ಅಶ್ವಮೇಧಯಜ್ಞದ ಫಲವನ್ನು ಪಡೆಯುವನು. ||೫||

ಈ ಪುರಾಣವನ್ನು ತಾನೇ ಬರೆದು ಅಥವಾ ಮತ್ತೊಬ್ಬರಿಂದ ಬರೆಯಿಸಿ, ಆ ಪುಸ್ತಕವನ್ನು ಪುರಾಣವನ್ನು ಹೇಳತಕ್ಕವರಿಗೆ ಕೊಟ್ಟು, ಅವರನ್ನು ವ್ಯಾಸರೆಂದು ಭಾವಿಸಿ, ವಸ್ತ್ರಾಭರಣಾದಿಗಳಿಂದ ಪೂಜಿಸಿ, ಅವರ ಬಾಯಿಂದ ಈ ಪುರಾಣವನ್ನು ಕೇಳಿ, ಸಮಾಪ್ತಿಯಾದಮೇಲೆ ಭಾದ್ರಪದ ಶುದ್ಧ ಪೂರ್ಣಿಮೆಯಲ್ಲಿ ದೇವಿಯ ವಾಹನವಾದ ಚಿನ್ನದ ಸಿಂಹವನ್ನು ಮಾಡಿಸಿ, ಅದರ ಮೇಲೆ ದೇವೀಸ್ವರೂಪವಾದ (ಪುರಾಣ) ದೇವೀಭಾಗವತವನ್ನು ಇರಿಸಿ, ಪೌರಾಣಿಕನಿಗೆ ದಾನಮಾಡಬೇಕು. ದಕ್ಷಿಣೆಗಾಗಿ ಚಿನ್ನದ ಅಲಂಕಾರ ಮಾಡಿದ ತುಂಬಾ ಹಾಲುಕರೆಯುವ ಕರುವಿನೊಡನೆ ಕೂಡಿದ ಕಪಿಲವರ್ಣದ ಗೋವನ್ನು ಕೊಡಬೇಕು. ಕೊನೆಗೆ ಪುರಾಣದಾನದ ಪೂರ್ಣಫಲ

ಭೋಜಯೇದ್ಬ್ರಾಹ್ಮಣಾನಂತೇಷ್ವಧ್ಯಾಯ ಪರಿಸಂಮಿತಾನ್ ।
ಸುವಾಸಿನೀಸ್ತಾವತೀಶ್ಚ ಕುಮಾರೀ ಬಟುಕೈಃ ಸಹ ॥೯॥

ದೇವೀಬುದ್ಧ್ಯಾ ಪೂಜಯೇತ್ತಾನ್ ವಸನಾಭರಣಾದಿಭಿಃ ।
ಪಾಯಸಾನ್ನ ವರೇಣಾಪಿ ಗಂಧಸ್ರಕ್ಕು ಸುಮಾದಿಭಿಃ ॥೧೦॥

ಪುರಾಣದಾನೇನೈತೇನ ಭೂದಾನಸ್ಯ ಫಲಂ ಲಭೇತ್ ।
ಇಹಲೋಕೇ ಸುಖೀಭೂತ್ವಾಪ್ಯಂತೇ ದೇವೀಪುರಂ ವ್ರಜೇತ್ ॥೧೧॥

ನಿತ್ಯಂಯಃ ಶೃಣುಯಾದ್ಭಕ್ತ್ಯಾ ದೇವೀಭಾಗವತಂ ಪರಂ ।
ನ ತಸ್ಯ ದುರ್ಲಭಂ ಕಿಂಚಿತ್ಕದಾಚಿತ್ಕ್ವಚಿದಸ್ತಿಹಿ ॥೧೨॥

ಅಪುತ್ರೋಲಭತೇ ಪುತ್ರಾನ್ ಧನಾರ್ಥೀಧನಮಾಪ್ನುಯಾತ್ ।
ವಿದ್ಯಾರ್ಥೀ ಪ್ರಾಪ್ನುಯಾದ್ವಿದ್ಯಾಂ ಕೀರ್ತಿಮಂಡಿತಭೂತಲಃ ॥೧೩॥

---

ಪ್ರಾಪ್ತಿಗಾಗಿ ಅಧ್ಯಾಯ ಸಂಖ್ಯೆಯಷ್ಟು (೩೧೮ ಮುನ್ನೂರ ಹದಿನೆಂಟು) ಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ||೬-೭-೮||

ಅಷ್ಟೇಜನ ಸುವಾಸಿನಿಯರಿಗೆ ದೇವೀಬುದ್ಧಿಯಿಂದ ಪೂಜೆಮಾಡಿ ವಸ್ತ್ರಾಭರಣಗಳನ್ನು ಕೊಟ್ಟು, ಅಷ್ಟೇಸಂಖ್ಯೆಯ ಕುಮಾರಿಯರನ್ನೂ ಬ್ರಹ್ಮಚಾರಿಗಳಾದ ವಟುಗಳನ್ನೂ ವಸ್ತ್ರಾದಿಗಳನ್ನೂ ಕೊಟ್ಟು ಪೂಜಿಸಿ, ಪಾಯಸಾನ್ನಾದಿಗಳಿಂದ ಭೋಜನವನ್ನು ಮಾಡಿಸಬೇಕು. ಎಲ್ಲರಿಗೂ ಗಂಧ ಹೂ ಮುಂತಾದುವುಗಳನ್ನು ಕೊಟ್ಟು ಪೂಜಿಸಬೇಕು. ||೯-೧೦||

ಈ ಪುರಾಣದಾನದಿಂದ ಭೂದಾನಮಾಡಿದ ಫಲವು ಬರುವುದು. ದಾನಮಾಡಿದವರು ಈ ಲೋಕದಲ್ಲಿ ಸುಖವನ್ನನುಭವಿಸಿ ಕೊನೆಯಲ್ಲಿ ದೇವಿಯ ಪಟ್ಟಣವಾದ ಮಣಿದ್ವೀಪಕ್ಕೆ ಹೋಗುವರು. ||೧೧||

ಶ್ರೇಷ್ಠವಾದ ದೇವೀಭಾಗವತದ ಪುರಾಣವನ್ನು ಯಾರು ಭಕ್ತಿಯಿಂದ ಕೇಳುತ್ತಾರೆಯೋ ಅವರಿಗೆ ಯಾವಾಗಲೂ ದೊರೆಯದಿರುವ ಪದಾರ್ಥವು ಎಂದಿಗೂ ಎಲ್ಲಿಯೂ ಇರುವುದಿಲ್ಲ. ||೧೨||

ಮಕ್ಕಳಿಲ್ಲದವರು ಮಕ್ಕಳನ್ನು ಪಡೆವರು. ಧನಾಪೇಕ್ಷೆಯುಳ್ಳವರು ಧನವನ್ನು ಪಡೆವರು. ವಿದ್ಯಾರ್ಥಿಯು ವಿದ್ಯೆಯನ್ನು ಪಡೆದು ತನ್ನ ಕೀರ್ತಿಯಿಂದ ಭೂಮಿಯನ್ನು ಅಲಂಕರಿಸುವನು. ||೧೩||

ವಂಧ್ಯಾ ವಾ ಕಾಕವಂಧ್ಯಾ ವಾ ಮೃತವಂಧ್ಯಾ ಚ ಯಾಂಗನಾ ।
ಶ್ರವಣಾದಸ್ಯ ತದ್ದೋಷಾನ್ನಿವರ್ತೇತ ನ ಸಂಶಯಃ ॥೧೪॥

ಯದ್ಗೇಹೇ ಪುಸ್ತಕಂ ಚೈತತ್ಪೂಜಿತಂ ಯದಿ ತಿಷ್ಠತಿ ।
ತದ್ಗೇಹಂ ನ ತ್ಯಜೇನ್ನಿತ್ಯಂ ರಮಾ ಚೈವ ಸರಸ್ವತೀ ॥೧೫॥

ನೇಕ್ಷಂತಿ ತತ್ರ ವೇತಾಲಡಾಕಿನೀರಾಕ್ಷಸಾದಯಃ ।
ಜ್ವರಿತಂ ತು ನರಂ ಸ್ಪೃಷ್ಟ್ವಾ ಪಠೇದೇತತ್ಸಮಾಹಿತಃ ॥೧೬॥

ಮಂಡಲಾನ್ನಾಶಮಾಪ್ನೋತಿ ಜ್ವರೋ ದಾಹಸಮನ್ವಿತಃ ।
ಶತಾವೃತ್ತ್ಯಾಽಸ್ಯ ಪಠನಾತ್ಕ್ಷಯರೋಗೋ ವಿನಶ್ಯತಿ ॥೧೭॥

ಪ್ರತಿಸಂಧ್ಯಂ ಪಠೇದ್ಯಸ್ತು ಸಂಧ್ಯಾಂ ಕೃತ್ವಾ ಸಮಾಹಿತಃ ।
ಏಕೈಕಮಸ್ಯ ಚಾಧ್ಯಾಯಂ ಸ ನರೋ ಜ್ಞಾನವಾನ್ಭವೇತ್ ॥೧೮॥

---

ಬಂಜೆಯಾದವಳೂ, ಒಂದು ಮಗುವನ್ನು ಹೆತ್ತು ಬಂಜೆಯಾದವಳೂ, ಹೆತ್ತ ಮಕ್ಕಳೆಲ್ಲರೂ ಸಾಯುತ್ತಿರುವ ಬಂಜೆಯೂ, ಈ ದೇವೀಭಾಗವತ ಪುರಾಣವನ್ನು ಕೇಳಿದರೆ ಆ ದೋಷಗಳಿಂದ ಬಿಡುಗಡೆಯನ್ನು ಹೊಂದುವುದರಲ್ಲಿ ಸಂದೇಹ ವಿರುವುದಿಲ್ಲ. ॥೧೪॥

ಯಾರ ಮನೆಯಲ್ಲಿ ದೇವೀಭಾಗವತದ ಪುಸ್ತಕವನ್ನು ಪೂಜೆಮಾಡುತ್ತಿರುವರೋ ಅವರ ಮನೆಯಲ್ಲಿ ಯಾವಾಗಲೂ ಸರಸ್ವತಿಯೂ ಲಕ್ಷ್ಮಿಯೂ ವಾಸವಾಗಿರುವರು. ॥೧೫॥

ಬೇತಾಳ, ಡಾಕಿನೀ, ರಾಕ್ಷಸ ಮುಂತಾದ ದುಷ್ಟಗ್ರಹಗಳು ಆ ಮನೆಯನ್ನು ನೋಡುವುದೂ ಇಲ್ಲ. ಜ್ವರವು ಬಂದ ಮನುಷ್ಯನನ್ನು ಮುಟ್ಟಿ ಏಕಾಗ್ರಚಿತ್ತದಿಂದ ಈ ದೇವೀಭಾಗವತವನ್ನು ಪಠನ ಮಾಡಿದರೆ ನಲವತ್ತೆಂಟು ದಿನಗಳಲ್ಲಿ ದಾಹಜ್ವರವು ನಾಶವಾಗುವುದು. ॥೧೬॥

ನೂರು ಬಾರೀ ಈ ದೇವೀಭಾಗವತವನ್ನು ಪಾರಾಯಣ ಮಾಡಿದರೆ ಕ್ಷಯ ರೋಗವು ನಾಶವಾಗುವುದು. ಪ್ರತಿಯೊಂದು ಸಂಧ್ಯೆಯಲ್ಲಿಯೂ ಸಂಧ್ಯಾವಂದನೆಯನ್ನು ಮಾಡಿ ಏಕಾಗ್ರಚಿತ್ತದಿಂದ ಒಂದೊಂದು ಅಧ್ಯಾಯ ಪಾರಾಯಣಮಾಡುತ್ತಿದ್ದರೆ ಆ ಮನುಜನು ಜ್ಞಾನವನ್ನು ಪಡೆಯುವನು. ಇದರಿಂದ ಮೋಕ್ಷವು ಲಭಿಸುವುದು. ॥೧೭-೧೮॥

ಶಕುನಾಂಶ್ಚೈವ ವೀಕ್ಷೇತ ಕಾರ್ಯಾಕಾರ್ಯೇಷು ಚೈವ ಹಿ ।
ತತ್ಪ್ರಕಾರಃ ಪುರಸ್ತಾತ್ತು ಕಥಿತೋಽಸ್ತಿ ಮಯಾ ಮುನೇ ॥೧೯॥

ನವರಾತ್ರೇ ಪಠೇನ್ನಿತ್ಯಂ ಶಾರದೀಯೇಽತಿಭಕ್ತಿತಃ ।
ತಸ್ಯಾಂಬಿಕಾ ತು ಸಂತುಷ್ಟಾ ದದಾತೀಚ್ಛಾಧಿಕಂ ಫಲಂ ॥೨೦॥

ವೈಷ್ಣವೈಶ್ಚೈವ ಶೈವೈಶ್ಚ ರಮೋಮಾಪ್ರೀತಯೇ ಸದಾ ।
ಸೌರೈಶ್ಚ ಗಾಣಪತ್ಯೈಶ್ಚ ಸ್ವೇಷ್ಟಶಕ್ತೇಶ್ಚ ತುಷ್ಟಯೇ ॥೨೧॥

ಪಠಿತವ್ಯಂ ಪ್ರಯತ್ನೇನ ನವರಾತ್ರಚತುಷ್ಟಯೇ ।
ವೈದಿಕೈರ್ನಿಜಗಾಯತ್ರೀಪ್ರೀತಯೇ ನಿತ್ಯಶೋ ಮುನೇ ॥೨೨॥

ಪಠಿತವ್ಯಂ ಪ್ರಯತ್ನೇನ ವಿರೋಧೋ ನಾತ್ರ ಕಸ್ಯಚಿತ್ ।
ಉಪಾಸನಾ ತು ಸರ್ವೇಷಾಂ ಶಕ್ತ್ಯುಕ್ತಾಽಸ್ತಿ ಸರ್ವದಾ ॥೨೩॥

---

ಒಂದು ಕಾರ್ಯವನ್ನು ಮಾಡುವ ಸಂದರ್ಭದಲ್ಲಿ ಇದನ್ನು ಮಾಡಬಹುದೋ ಬಾರದೋ ಎಂಬ ಸಂದೇಹವು ಬಂದಾಗ, ಒಂಬತ್ತನೆಯ ಸ್ಕಂದದಲ್ಲಿ ಹೇಳಿದ ಪ್ರಕಾರ ದಿಂದ, ಶಕುನವನ್ನು ಈ ಪುರಾಣದಿಂದ ತಿಳಿಯಬಹುದು. ಅದನ್ನು ತಿಳಿಯುವ ಪ್ರಕಾರವನ್ನು ಈ ಪುರಾಣದ ಉಪೋದ್ಘಾತದಲ್ಲಿ ವಿವರಿಸಿರುವುದು. ॥೧೯॥

ಶರದೃತುವಿನ ನವರಾತ್ರಿಯಲ್ಲಿ ಪ್ರತಿದಿನವೂ ಅತ್ಯಂತ ಭಕ್ತಿಯಿಂದ ಈ ದೇವೀಭಾಗವತವನ್ನು ಪಾರಾಯಣಮಾಡಿದರೆ ದೇವಿಯು ಸಂತೋಷದಿಂದ ಭಕ್ತನು ಅಪೇಕ್ಷಿಸಿದುದಕ್ಕಿಂತ ಹೆಚ್ಚಿನ ಫಲವನ್ನು ಕೊಡುವಳು. ॥೨೦॥

ಆಷಾಢ, ಆಶ್ವಯುಜ, ಮಾಘ, ಚೈತ್ರ, ಈ ಮಾಸಗಳಲ್ಲಿ ಶುಕ್ಲಪಕ್ಷದ ಒಂಬತ್ತು ದಿನಗಳವರೆಗೆ ಶೈವರು ಉಮಾದೇವಿಯ ಪ್ರೀತಿಗಾಗಿಯೂ, ವೈಷ್ಣವರು ರಮಾದೇವಿಯ ಪ್ರೀತಿಗಾಗಿಯೂ, ಸೂರ್ಯೋಪಾಸಕರು ಛಾಯಾದೇವಿಯ ಪ್ರೀತಿ ಗಾಗಿಯೂ, ಗಣಪತ್ಯುಪಾಸಕರು ಸಿದ್ಧಿ ಬುದ್ಧಿ ದೇವಿಯರ ಪ್ರೀತಿಗಾಗಿಯೂ, ವೈದಿಕರು ತಾವು ಜಪಮಾಡುವ ಗಾಯತ್ರೀಮಂತ್ರದೇವತೆಯ ಪ್ರೀತಿಗಾಗಿಯೂ, ಪ್ರಯತ್ನ ಪೂರ್ವಕವಾಗಿ ಈ ದೇವೀಭಾಗವತವನ್ನು ಪಾರಾಯಣ ಮಾಡಬೇಕು. ॥೨೧-೨೨॥

ಈ ದೇವೀಭಾಗವತ ಪಾರಾಯಣ ವಿಷಯದಲ್ಲಿ ಶೈವ ವೈಷ್ಣವಾದಿಗಳಿಗೆ ವಿರೋಧವಿರುವುದಿಲ್ಲ. ಕಾರಣವೇನೆಂದರೆ ಶೈವನಾಗಲೀ ವೈಷ್ಣವನಾಗಲೀ,

ತಚ್ಛಕ್ತೇರೇವ ತೋಷಾರ್ಥಂ ಪಠಿತವ್ಯಂ ಸದಾ ದ್ವಿಜೈಃ ।
ಸ್ತ್ರೀ ಶೂದ್ರೋ ನ ಪಠೇದೇತತ್ಕದಾಽಪಿ ಚ ವಿಮೋಹಿತಃ ॥೨೪॥

ಶೃಣುಯಾದ್ದ್ವಿಜವಕ್ತ್ರಾತ್ತು ನಿತ್ಯಮೇವೇತಿ ಚ ಸ್ಥಿತಿಃ ।
ಕಿಂಪುನರ್ಬಹುನೋಕ್ತೇನ ಸಾರಂ ವಕ್ಷ್ಯಾಮಿ ತತ್ತ್ವತಃ ॥೨೫॥

ವೇದಸಾರಮಿದಂ ಪುಣ್ಯಂ ಪುರಾಣಂ ದ್ವಿಜಸತ್ತಮಾಃ ।
ವೇದಪಾಠಸಮಂ ಪಾಠೇ ಶ್ರವಣೇ ಚ ತಥೈವ ಹಿ ॥೨೬॥

ಸಚ್ಚಿದಾನಂದರೂಪಾಂ ತಾಂ ಗಾಯತ್ರೀಪ್ರತಿಪಾದಿತಾಂ ।
ನಮಾಮಿ ಹ್ರೀಂಮಯೀಂ ದೇವೀಂ ಧಿಯೋ ಯೋ ನಃ ಪ್ರಚೋದಯಾತ್॥

---

ಗಣಪತ್ಯುಪಾಸಕನಾಗಲಿ, ಸೂರ್ಯೋಪಾಸಕನಾಗಲಿ, ಶಕ್ತಿ ರಹಿತವಾಗಿ ಆ ದೇವತೋಪಾಸನೆಯನ್ನು ಮಾಡುವುದಿಲ್ಲ. ಶಕ್ತಿ ಸಹಿತವಾಗಿಯೇ ಮಾಡುವರು. ಹೇಗೆಂದರೆ ರಾಧಾಕೃಷ್ಣ, ಲಕ್ಷ್ಮೀನಾರಾಯಣ, ಸೀತಾರಾಮ, ಪಾರ್ವತೀಪರಮೇಶ್ವರ ಇತ್ಯಾದಿಯಾಗಿ ನಾಮೋಚ್ಚಾರಣ ಮಾಡಿ ಶಕ್ತಿ ಸಹಿತವಾಗಿಯೇ ಪೂಜೆಮಾಡುವರು. ಆದುದರಿಂದ ಆ ದೇವತಾ ಶಕ್ತಿ ಸಂತೋಷಕ್ಕಾಗಿ, ಶೈವ, ವೈಷ್ಣವಾದಿಗಳಾದ ಸಕಲರೂ ಈ ಪುರಾಣವನ್ನು ಪಾರಾಯಣ ಮಾಡಬೇಕು. ॥೨೩॥

ಯಾವಾಗಲೂ ದ್ವಿಜರು ಎಂದರೆ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಅವರು ಉಪಾಸನೆ ಮಾಡುವ ದೇವತಾಶಕ್ತಿ ಸಂತೋಷಕ್ಕಾಗಿ ಇದನ್ನು ಪಾರಾಯಣ ಮಾಡಬೇಕು. ಸ್ತ್ರೀಯರೂ, ಶೂದ್ರರೂ ತಿಳಿವಳಿಕೆಯಿಲ್ಲದೇ ಎಂದಿಗೂ ಇದನ್ನು ಪಾರಾಯಣ ಮಾಡಬಾರದು. ಅವರು ಬ್ರಾಹ್ಮಣರಿಂದ ಇದನ್ನು ಕೇಳಬೇಕೆಂಬುದೇ ವಿಧಿಯು. ॥೨೪॥

ಎಲೈ ಋಷಿಗಳೇ, ಕೇಳಿರಿ. ವಿಶೇಷವಾಗಿ ಹೇಳುವುದರಿಂದೇನುಪ್ರಯೋಜನ? ಸಾರವಾದುದನ್ನು ಹೇಳುವೆನು. ಈ ಪುರಾಣವು ವೇದದ ಸಾರವಾದ ಅಭಿಪ್ರಾಯವನ್ನು ಪ್ರಕಟಿಸಿ ಜನರಿಗೆ ಪುಣ್ಯ ಫಲವನ್ನು ಕೊಡತಕ್ಕುದಾಗಿರುವುದು. ಇದನ್ನು ಪಾರಾಯಣ ಮಾಡಿದರೂ ಕೇಳಿದರೂ ವೇದವನ್ನು ಪಾರಾಯಣ ಮಾಡಿದ ಮತ್ತು ಕೇಳಿದ ಫಲಕ್ಕೆ ಸಮವಾದ ಫಲವುಂಟಾಗುವುದು. ॥೨೫-೨೬॥

ಗಾಯತ್ರೀ ಮಂತ್ರದ ಅರ್ಥದಿಂದ ತಿಳಿಯಲ್ಪಡತಕ್ಕವಳೂ, ಸಚ್ಚಿದಾನಂದ ಸ್ವರೂಪಳೂ ಹ್ರೀಂ ಎಂಬ ಬೀಜಾಕ್ಷರದ ಅರ್ಥಸ್ವರೂಪಳೂ ಆದ ದೇವಿಗೆ ನಮಸ್ಕಾರ

ಇತಿ ಸೂತವಚಃ ಶ್ರುತ್ವಾ ನೈಮಿಷೀಯಾಸ್ತಪೋಧನಾಃ ।
ಪೂಜಯಾಮಾಸುರತ್ಯುಚ್ಚೈಃ ಸೂತಂ ಪೌರಾಣಿಕೋತ್ತಮಂ ॥೨೮॥

ಪ್ರಸನ್ನಹೃದಯಾಃ ಸರ್ವೇ ದೇವೀಪಾದಾಂಬುಜಾರ್ಚಕಾಃ ।
ನಿವೃತ್ತಿ(ರ್ವೃತಿ)ಂ ಪರಮಾಂ ಪ್ರಾಪ್ತಾಃ ಪುರಾಣಸ್ಯ ಪ್ರಭಾವತಃ॥೨೯॥

ನಮಶ್ಚಕ್ರುಃ ಪುನಃ ಸೂತಂ ಕ್ಷಮಾಪ್ಯ ಚ ಮುಹುರ್ಮುಹುಃ ।
ಸಂಸಾರವಾರಿಧೇಸ್ತಾತ ಪ್ಲವೋಽಸ್ಮಾಕಂ ತ್ವಮೇವ ಹಿ ॥೩೦॥

ಇತಿ ಸ ಮುನಿವರಾಣಾಮಗ್ರತಃ ಶ್ರಾವಯಿತ್ವಾ ।
ಸಕಲನಿಗಮಗುಹ್ಯಂ ದೌರ್ಗಮೇತತ್ಪುರಾಣಂ ।

---

ವನ್ನು ಮಾಡುವೆನು. ಆ ದೇವಿಯು ನಮ್ಮ ಬುದ್ಧಿಯನ್ನು ಸನ್ಮಾರ್ಗದಲ್ಲಿ ಪ್ರೇರಿಸಲಿ! ಎಂದು ಗ್ರಂಥ ಸಮಾಪ್ತಿಯಲ್ಲಿ ಸೂತನು ಗಾಯತ್ರೀ ಮಂತ್ರದ ಪದದಿಂದ ಕೂಡಿದ ಮಂಗಳವನ್ನು ಈ ಗ್ರಥಾರಂಭದಲ್ಲಿ ಮಾಡಿದಂತೆಯೇ ಈಗಲೂ ಮಂಗಳವನ್ನು ಮಾಡಿರುವನು. ॥೨೭॥

ಹೀಗೆಂದು ಹೇಳಿದ ಸೂತನ ಮಾತನ್ನು ಕೇಳಿ ನೈಮಿಷಾರಣ್ಯವಾಸಿಗಳಾದ ಋಷಿಗಳೆಲ್ಲರೂ ಪುರಾಣಿಕರಲ್ಲಿ ಶ್ರೇಷ್ಠರಾದ ಸೂತನನ್ನು ವಿಶೇಷವಾಗಿ ಪೂಜಿಸಿದರು. ॥೨೮॥

ಸಮಸ್ತ ಋಷಿಗಳೂ ದೇವಿಯ ಪಾದಕಮಲವನ್ನು ಪೂಜಿಸಿ ಪುರಾಣವನ್ನು ಕೇಳಿದುದರ ಮಹಿಮೆಯಿಂದ ಉತ್ತಮವಾದ ವೈರಾಗ್ಯವನ್ನು ಪಡೆದರು. ॥೨೯॥

ಓ ಸೂತಮುನಿಯೇ, ನಮಗೆ ನೀನು ಈ ಸಂಸಾರ ಸಮುದ್ರವನ್ನು ದಾಟುವುದಕ್ಕೆ ಹಡಗಿನಂತಿರುವೆ! ಎಂದು ಹೇಳಿ ಆ ಮುನಿಗಳೆಲ್ಲರೂ ಸೂತನಿಗೆ ಮತ್ತೆ ಮತ್ತೆ ನಮಸ್ಕರಿಸಿದರು. ॥೩೦॥

ಈ ರೀತಿಯಲ್ಲಿ ಸಕಲ ವೇದಗಳಲ್ಲಿಯೂ ಗೋಪ್ಯವಾಗಿದ್ದ ದುರ್ಗಾದೇವಿಯ ಸಂಬಂಧವಾದ ಈ ಮಹಾ ಪುರಾಣವನ್ನು ಋಷಿಗಳೆದುರಿಗೆ ಹೇಳಿ ನಮಸ್ಕಾರ ಮಾಡಿದ ಮುನಿಗಳಿಗೆ ಆಶೀರ್ವಾದವನ್ನು ಮಾಡಿ ಜಗದಂಬೆಯ ಪಾದವೆಂಬ

**ನತಮಥ ಮುನಿಸಂಘಂ ವರ್ಧಯಿತ್ವಾಽಶಿಷಾಽಂಬಾ ।**
**ಚರಣಕಮಲಭೃಂಗೋ ನಿರ್ಜಗಾಮಾಥ ಸೂತಃ ॥೩೦॥**

**ಇತಿ ಶ್ರೀದೇವಿಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ**
**ಚತುರ್ದಶೋಽಧ್ಯಾಯಃ**

## ದ್ವಾದಶಸ್ಕಂಧಃ ಸಮಾಪ್ತಃ

## ಇತಿ ಶ್ರೀದೇವೀಭಾಗವತಂ ಮಹಾಪುರಾಣಂ ಸಮಾಪ್ತಂ

---

ಕಮಲಕ್ಕೆ ದುಂಬಿಯಂತಿರುವ ಸೂತಮುನಿಯು ತನ್ನಾಶ್ರಮಕ್ಕೆ ಪ್ರಯಾಣ ಮಾಡಿದನು. ॥೩೦॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಹನ್ನೆರಡನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

## ಹನ್ನೆರಡನೆಯ ಸ್ಕಂಧವು ಮುಗಿದುದು.

**ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣವು ಮುಗಿದುದು.**

॥ ಶ್ರೀರಸ್ತು ॥



ಶ್ರೀಕರ್ಣಾಟಾಧಿಪ **ಜಯಚಾಮರಾಜೇಂದ್ರ** ಶಾಸನಾತ್
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥

ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾತ್ ಬ್ರಹ್ಮಣೀಚ್ಛಾಜ್ಞಾನಕ್ರಿಯಾತ್ಮಿಕಾ ॥

ಶಿವೇ ತವ ಕೃಪಾ ದದೌ ಗೃಹಕಳತ್ರವಿತ್ತಾದಿಕಂ
ಸುತಾನ್ ದುಹಿತೃತತ್ಸುತಾನ್ ಸುಕೃತಯಶ್ಚ ಕಾಶ್ಚಿತ್ ಕೃತಾಃ ।
ಅಲಂಮತಿರಿಹಾಸ್ತು ಮೇ ಮಮ ಕದಾಽಂತಮಾಶಾ ವ್ರಜೇತ್
ಪ್ರಬೋಧಸುಖಮರ್ಥಯೇ ಪರವಿರಕ್ತಿಮುಕ್ತೀ ಮುದಾ ॥

॥ ಶ್ರೀಜಗದಂಬಾರ್ಪಣಮಸ್ತು ॥

